# ಚಿಗುರು ಹಾಸಿಗೆ



ಭಾರತೀಸುತ



ಸುಲಭ ಸಾಹಿತ್ಯ ಪ್ರಕಾಶನ, ಕುಮಟ



# ಅರಿಕೆ

ವೈನಾಡಿನ ನಾಯರ ಕುಟುಂಬದ ಜೀವನವನ್ನು ಚಿತ್ರಿಸಲು ನಾನು ಈ ಕಾದಂಬರಿಯಲ್ಲಿ ಪ್ರಯತ್ನಿಸಿದ್ದೇನೆ. ನಾನು 'ಹುಲಿಬೋನಿನಲ್ಲಿ' ವೈನಾಡಿನ ಪಣಿಯ ಕುಟುಂಬವೊಂದರ ಚಿತ್ರಣವನ್ನು ಕೊಡಲು ಪ್ರಯತ್ನಿಸಿದ್ದರೆ,—'ಚಿಗುರು ಹಾಸಿಗೆ'ಯಲ್ಲಿ ಜೇನುಕುರುಬ ತರುಣನೊಬ್ಬನ ದುರಂತ ಪ್ರಣಯವನ್ನು ಚಿತ್ರಿಸುವ ಸಾಹಸ ಮಾಡಿದ್ದೇವೆ.

ಕುಮಟದ ಕೆನರಾ ಕಾಲೇಜಿನ ಪ್ರಾಧ್ಯಾಪಕರಾದ ಶ್ರೀ. ಕೆ. ಜಿ. ಶಾಸ್ತ್ರಿಗಳು ಕಾದಂಬರಿಯ ಹಸ್ತಪ್ರತಿಯನ್ನು ಓದಿ ನೋಡಿ ಸೂಕ್ತ ಸಲಹೆಗಳನ್ನಿತ್ತು ಉಪಕಾರ ಮಾಡಿದ್ದಾರೆ. ಅವರಿಗೆ ನಾನು ಕೃತಜ್ಞನಾಗಿದ್ದೇನೆ. 'ಚಿಗುರು ಹಾಸಿಗೆ'ಗಿಂತಲೂ ಮೊದಲು ಬರೆದ ಕಾದಂಬರಿ "ಹುಲಿಬೋನು" ಪ್ರಕಟವಾಗುವ ಮುನ್ನ ಈ ಕೃತಿ ಬೆಳಕಿಗೆ ಬರಲು ಕಾರಣರಾದ ಸುಲಭ ಸಾಹಿತ್ಯ ಪ್ರಕಾಶನದ ಶ್ರೀ. ಎಸ್. ಆರ್. ಹೆಗ್ಗಡೆಯವರಿಗೆ ನಾನು ಋಣಿ.

ನನ್ನ ಇತರ ಕೃತಿಗಳಂತೆಯೇ ಕನ್ನಡ ಓದುಗರು ಚಿಗುರು ಹಾಸಿಗೆಯನ್ನು ಆದರದಿಂದ ಬರಮಾಡಿಕೊಳ್ಳುವರೆಂಬ ನಂಬುಗೆ ನನಗಿದೆ.

ವೀರರಾಜಪೇಟೆ<br>(ಕೊಡಗು.)<br>೧-೫-೧೯೫೯

ಭಾ. ಸು.

## ಪ್ರಕಾಶಕರ ಮಾತು

ಭಾರತೀಸುತರ ಈ ಕಾದಂಬರಿ—'ಚಿಗುರು ಹಾಸಿಗೆ'ಯನ್ನು ನಾವು ಪ್ರಕಟಿಸುವದಕ್ಕೆ ಹೆಮ್ಮೆಯೆನಿಸುತ್ತದೆ. ವೈನಾಡಿನ ಹಿನ್ನೆಲೆಯಲ್ಲಿ ಪ್ರಕಟವಾಗುವ ಈ ಕಾದಂಬರಿ ವಾಚಕರಿಗೆ ಹೊಸತರಹದೆನಿಸಬಹುದು. ನಾವು ಕನ್ನಡಿಗರು. ನಮ್ಮ ದೇಶದ್ದೇ ಒಂದು ಭಾಗವಾದ ವೈನಾಡನ್ನು ಕುರಿತು ಅರಿಯಲೇ ಬೇಕು. ಭಾರತೀಸುತರು ಅದಕ್ಕೆ ಅನುವು ಮಾಡಿಕೊಟ್ಟಿದ್ದಾರೆ. ಅವರಿಗೆ ನಾವು ಕೃತಜ್ಞರು.

ವಾಚಕರು ಎಂದಿನ ಸಹಕಾರ ನೀಡಬೇಕು.

—ಪ್ರಕಾಶಕ




ಅಡುಗೆ ಕೋಣೆಯೊಳಗೆ ಮಕ್ಕಳೆಲ್ಲ ಬೇಯಿಸಿದ ಸೀಂದ್ರ ಬಾಳೆಹಣ್ಣುಗಳನ್ನು ಮೆಲ್ಲುತಿದ್ದರು. ದೇವತೆ ಲೋಟಗಳಿಗೆ ಕಾಫಿ ಎರೆದು ಹುಡುಗರಿಗೆಲ್ಲ ಕೊಡುತಿದ್ದಳು. ಬಾಲ, ರಾಮು, ಕುಂಞಾಂಬು, ಚಿರುತೆ ಮತ್ತು ಲಕ್ಷ್ಮಿ ಹಣ್ಣುಗಳನ್ನು ಮೆಲ್ಲುತ್ತಾ ಕಾಫಿ ಲೋಟಗಳನ್ನು ಎತ್ತಿಕೊಂಡರು.

ಅಷ್ಟರಲ್ಲಿ "ಬ್ರಾಂ, ಬೂಂ" ಎಂದು ಆನೆಯ ಬೃಂಹಿತ ಅಲೆ ಅಲೆಯಾಗಿ ತೇಲಿ ಬಂದು ಅಡುಗೆಯ ಕೋಣೆಯೊಳಗೆ ನುಗ್ಗಿತು. ಬಾಲ ಕುಳಿತಲ್ಲಿಂದ ಎದ್ದು ಅರ್ಧ ತಿಂದ ಬಾಳೆಯ ಹಣ್ಣನ್ನು ಕೈಯಲ್ಲಿ ಹಿಡಿದುಕೊಂಡು "ಆನೆ ಬಂತೋ, ಆನೆ!" ಎಂದು ಕೂಗುತ್ತಾ ಅಡುಗೆ ಕೋಣೆಯಿಂದ ಅಂಗಳಕ್ಕೆ ಓಡಿದ. ಉಳಿದ ಮಕ್ಕಳೂ ಆತನನ್ನು ಹಿಂಬಾಲಿಸಿದುವು.

ಮನೆಯ ಅಂಗಳದಲ್ಲಿ ಆನೆ ಬಂದು ನಿಂತಿತ್ತು. ಎರಡಾಳಷ್ಟು ಎತ್ತರವಿರುವ ದೊಡ್ಡ ಆನೆಯದು. ಅದರ ಬಿಳಿಯ ಕೊಂಬುಗಳು ಅರೆ ಮಾರಷ್ಟು ಉದ್ದವಾಗಿದ್ದುವು. ಅಲುಗಾಡುವ ದೊಡ್ಡ ಕಿವಿಗಳು ಗೆರಸೆಯಂತೆ ಇದ್ದುವು. ಆನೆಯನ್ನು ಆಗ ತಾನೇ ಹೊಳೆಯಲ್ಲಿ ಮೀಯಿಸಿ ಕರೆತಂದುದರಿಂದ ಅದರ ಮೈ ಕಾಡಿಗೆಯಂತೆ ಕಪ್ಪಾಗಿ ಹೊಳೆಯುತಿದ್ದಿತು. ಅದು ತನ್ನ ಪುಟ್ಟ ಕಣ್ಣುಗಳಿಂದ ತನ್ನ ಮುಂದೆ ನಿಂತಿರುವ ಮಕ್ಕಳನೆಲ್ಲಾ ನಿಟ್ಟಿಸಿ ನೋಡಿತು.

ಆನೆಕಾರ ಆನೆಯ ಬೆನ್ನ ಮೇಲೆ ಕುಳಿತಿದ್ದ. ಆತ ತನ್ನ ಕೈಯಲ್ಲಿ ಅಂಕುಶವನ್ನು ಹಿಡಿದಿದ್ದ. ಮಕ್ಕಳನ್ನು ಕಂಡಾಗ ಆತನ ತಾಂಬೂಲ ರಾಗರಂಜಿತ ತುಟಿಗಳ ಮೇಲೆ ಕಿರುನಗೆಯು ಸುಳಿದಾಡಿತು.

"ನಾಯಕ, ಆನೆಗೆ ಪೊಡಮಡಲು ಹೇಳು" ಬಾಲ ಬೆರಗುಗಣ್ಣುಗಳಿಂದ ಆನೆಯನ್ನು ನೋಡುತ್ತಾ ಹೇಳಿದ.

"ನಾನೊಲ್ಲೆ. ನಿಮ್ಮನ್ನು ಹಿಗ್ಗಿಸಲು ಆನೆ ಪಾಡು ಪಡಬೇಕು." ಆನೆಯ ಮೇಲಿದ್ದ ನಾಯಕ ಹುಸಿಮುನಿಸನ್ನು ತಾಳಿದ: "ನಿಮ್ಮ ಸೇವೆ

ಮಾಡಿದ ಶಂಕರನಿಗೆ ನೀವೇನೂ ಕೊಡಲೊಲ್ಲಿರಿ!''

"ಆನೆಗೆ ಸಮ್ಮಾನ ಮಾಡುತ್ತೇವೆ" ಚಿರುತೆ ತುಟಿದೆರೆದಳು: "ನಾವು ಯಾವಾಗ ಶಂಕರನಿಗೆ ತಿಂಡಿಕೊಡದೆ ಹೋಗಿದ್ದೇವೆ?''

"ತಡೆ. ಶಂಕರನಿಗೆ ಬೇಕಾದ ತಿಂಡಿಯನ್ನು ನಾನು ತಂದೇ ಬಿಡುತ್ತೇನೆ!" ರಾಮು ಮನೆಯೊಳಗೆ ಓಡಿದ.

ಆಗ ಲಕ್ಷ್ಮಿ ಮನೆಯೊಳಗಿಂದ ಬಂದು ಹೊಸ್ತಿಲಲ್ಲಿ ನಿಂತು ನೋಡಿದಳು. ಆನೆಯ ಬೆನ್ನಮೇಲಿದ್ದ ನಾಯಕ ಆಕೆಯ ದೃಷ್ಟಿಗೆ ಬಿದ್ದ. ಅವನಿನ್ನೂ ಹದಿನೆಂಟು ಇಪ್ಪತ್ತು ವರ್ಷ ಪ್ರಾಯದ ಹುಡುಗ. ಮೊಗವೋ ಕಳಿತ ನೇರಿಳೆ ಹಣ್ಣಿನ ಹಾಗೆ ಮಿನುಗುತ್ತಿತ್ತು. ಸೊಂಟಕ್ಕೆ ಸುತ್ತಿದ ತುಂಡು ಪಂಜೆಯಲ್ಲದೆ ಮೈಮೇಲೆ ಬೇರೆ ಅರಿವೆಗಳಿರಲಿಲ್ಲ. ಅವನ ಅಗಲವಾದ ಎದೆ ಕಪ್ಪು ಹಾಸರೆಯಂತೆ ನುಣುಪಾಗಿತ್ತು. ತೋಳುಗಳು ರಕ್ತಮಾಂಸಗಳಿಂದ ಪರಿಪುಷ್ಟವಾಗಿದ್ದು ನೆಲ್ಲನ್ನು ಮಿದಿಯುವ ಒನಕೆಗಳಂತೆ ತೋರುತಿದ್ದವು. ಅವನು ಸೊಂಟಕ್ಕೆ ಒಂದು ಕೆಂಪು ದಟ್ಟಿಯನ್ನು ಸುತ್ತಿಕೊಂಡಿದ್ದ. ದಟ್ಟಿಗೆ ಸಿಕ್ಕಿಸಿದ ಎಲೆ ಅಡಿಕೆಗಳ ಸಂಚಿ ತೂಗಾಡುತಿದ್ದಿತು. ಅವನ ಹಲ್ಲುಗಳು ತಾಂಬೂಲಚರ್ವಣದಿಂದ ಕೆಂಬಣ್ಣವನ್ನು ತಳೆದಿದ್ದುವು. ಅವನ ಕಿವಿಗಳಲ್ಲಿ ನಾಲ್ಕು ಹಿತ್ತಾಳೆ ಕಡುಕುಗಳು ಜೋತಾಡುತಿದ್ದುವು. ಕೈಗಳಲ್ಲಿ ಎರಡೆರಡು ಹಿತ್ತಾಳೆ ಬಳೆಗಳು ಮಿರುಗುತಿದ್ದುವು. ಅವನ ದೇಹ ಕಪ್ಪಾಗಿದ್ದರೂ ಗುಡಿಯಲ್ಲಿ ಕಡೆದಿರಿಸಿದ ವಿಗ್ರಹದಂತೆ ಮಾಟವಾಗಿ ತೋರುತಿದ್ದಿತು.

ಲಕ್ಷ್ಮಿ ಆಸಕ್ತಿ ತುಂಬಿದ ಕಣ್ಣುಗಳಿಂದ ಆನೆಕಾರನನ್ನು ನೋಡಿದಳು. ಅವಳ ಮನಸ್ಸು ಸೀಗೆ ಬಲ್ಲೆಯ ತುದಿಗೆ ಸಿಕ್ಕಿದ ಸೆರಗಿನಂತೆ ಆ ಒಂದು ಚಿಂತೆಯನ್ನು ಬಿಟ್ಟು ಈಚೆ ಬರದಾಯಿತು. ಅದೇಕೆ ಎಂದು ಅವಳು ತನ್ನಲ್ಲಿಯೇ ಆಲೋಚಿಸಿದಳು. ಆದರೆ ಅವಳಿಗೆ ಉತ್ತರ ದೊರೆಯಲಿಲ್ಲ.

ಮನೆಯೊಳಗೆ ಓಡಿದ ರಾಮು ಬಾಳೆಹಣ್ಣು, ತೆಂಗಿನಕಾಯಿಗಳನ್ನು ತೆಗೆದುಕೊಂಡು ಬಂದ. ಅವನ ಇನ್ನೊಂದು ಕೈಯಲ್ಲಿ ಬೆಲ್ಲದ ಅಚ್ಚುಗಳು ಇದ್ದುವು.

"ನಾಯಕ, ಆನೆಗೆ ತಿಂಡಿ ಬಂತು. ಪೊಡಮಡಲು ಹೇಳು!" ಚಿರುತೆ ಕೂಗಿ ಹೇಳಿದಳು.

"ಶಂಕರ ಪೊಡಮಡು." ನಾಯಕ ಆನೆಗೆ ಆಜ್ಞಾಪಿಸಿದ.

ಆನೆ ಅಲುಗಾಡಲಿಲ್ಲ. ಆಶೆ ತುಂಬಿದ ಕಣ್ಣುಗಳಿಂದ ರಾಮುವಿನ ಕೈಯಲ್ಲಿದ ಬಾಳೆಹಣ್ಣು ತೆಂಗಿನಕಾಯಿಗಳನ್ನು ನೋಡಿತು.

"ಪೊಡಮಡು, ಶಂಕರ. ಪುಟ್ಟ ಪಾಪ ಮತ್ತು ಪಾಪಾತಿಯರು ನಿನಗೆ ತೆಂಗಿನಕಾಯಿ ಬಾಳೆಹಣ್ಣುಗಳ ಸಮ್ಮಾನ ಮಾಡುತ್ತಾರೆ." ನಾಯಕ ತನ್ನ ಅಂಗೈಯಿಂದ ಆನೆಯ ಕುಂಭಸ್ಥಳವನ್ನು ಚಪ್ಪರಿಸಿದ.

ಆದರೆ ಶಂಕರ ನಿಂತಲ್ಲಿಂದ ಕದಲಲೊಲ್ಲದು; ಮಾವುತನ ಆಜ್ಞೆಯನ್ನು ಅನುಸರಿಸಲೊಲ್ಲದು.

"ಶಂಕರ, ಪೊಡಮಡು!" ಈಗ ಮಾವುತನ ಧ್ವನಿ ಕರ್ಕಶವಾಯಿತು. ಅವನು ಅಂಕುಶದಿಂದ ಆನೆಯ ಕಿವಿಯನ್ನು ಮೆಲ್ಲನೆ ತಿವಿದ.

ಆನೆ 'ಬ್ರಾಂ, ಬ್ರೂಂ' ಎಂದು ಘೀಳಿಟ್ಟಿತು. ಅದು ಈ ಸಣ್ಣ ಹುಡುಗರಿಗೆ ತಾನು ಪೊಡಮಡಲಾರ ಎಂದು ಹೇಳುವಂತೆ ಮಕ್ಕಳನ್ನು ದುರುಗುಟ್ಟಿ ನೋಡಿತು.

"ಆನೆ ಪೊಡಮಡು!" ನಾಯಕನ ಕೊರಳಿಂದ ಆಜ್ಞೆ ಇನ್ನಷ್ಟು ಕರ್ಕಶವಾಗಿ ಹೊರಟಿತು.

ಆನೆಕಾರನ ಧ್ವನಿ: ಶಂಕರನ ಧೈರ್ಯವನ್ನು ಉಡುಗಿಸಿತು. ಅದು ಮೆಲ್ಲನೆ ಮುಂಡಿಗಳನ್ನು ಊರಿತು. ಅದು ಸೊಂಡಿಲನ್ನು ಮೇಲೆತ್ತಿ ಮಕ್ಕಳಿಗೆ ಮಣಿದಿತು.

"ಆನೆ ನಮಗೆ ಪೊಡಮಟ್ಟಿತು; ಬೇಷಕ್ ಶಂಕರ!" ಬಾಲ ಹಿಗ್ಗು ತುಂಬಿದ ದನಿಯಲ್ಲಿ ಕೂಗಿದ.

"ಪಾಪದ ಆನೆ!" ಚಿರುತೆ ದನಿ ಎತ್ತಿದಳು.

"ಆನೆ ಪೊಡಮಟ್ಟಿತು. ಇನ್ನು ಸಮ್ಮಾನ ಮಾಡಿ." ಆನೆಕಾರ ಉಲಿದ.

ಹುಡುಗರು ಬಾಳೆಹಣ್ಣು ತೆಂಗಿನ ಹೋಳು ಮತ್ತು ಬೆಲ್ಲದಚ್ಚುಗಳನ್ನು ತೆಗೆದು ಆನೆ ಅಗಲಿಸಿದ ಬಾಯೊಳಗೆ ಇಟ್ಟರು. ಬಾಲನ ಕೈ

ಬೆರಳುಗಳಿಗೆ ಆನೆಯ ಮೆದು ನಾಲಗೆ ಸೋಂಕಿ ಕಚಕುಳಿಯಾಯಿತು. ಅವನು " ಇಹೀ ಹೀ ! " ಎಂದು ಹೇಳುತ್ತಾ ಆನೆಯ ಬಾಯೊಳಗಿಂದ ಕೈಯನ್ನು ತೆಗೆದು ಹಿಂದೆ ಸರಿದ. ಆನೆ ಬಾಯೊಳಗೆ ತುಂಬಿದ ತಿನಸು ಗಳನ್ನು ನಿಧಾನವಾಗಿ ಜಗಿಯುತ್ತಾ ಸವಿಯತೊಡಗಿತು. ಅದು ಕೃತ ಜ್ಞತೆ ತುಂಬಿದ ಕಣ್ಣುಗಳಿಂದ ಹುಡುಗರನ್ನೊಮ್ಮೆ ನಿಟ್ಟಿಸಿ ನೋಡಿತು.

" ಎಷ್ಟು ಸಾಧುವಾದ ಆನೆ ! '' ಶಂಕರನ ಬಿಳಿಯ ಕೊಂಬನ್ನು ಸವರುತ್ತಾ ನುಡಿದಳು ಚಿರುತೆ.

" ಆನೆಯ ಕೊಂಬು ನನ್ನ ತೋಳಿಗಿಂತಲೂ ತೋರ ! '' ರಾಮು ಆನೆಯ ಕೊಂಬಿನೊಡನೆ ತನ್ನ ತೋಳನ್ನು ಹೋಲಿಸಿ ನೋಡುತ್ತಾ ಉಸುರಿದ.

" ಈಗ ಹಣ್ಣು ಮತ್ತು ತೆಂಗಿನ ಹೋಳು ಸಿಕ್ಕಿದಾಗ ಶಂಕರ ಬಹಳ ಪಾಪವವನಾಗಿದ್ದಾನೆ. '' ಆನೆ ಬೆನ್ನ ಮೇಲಿಂದಿಳಿಯುತ್ತಾ ನಾಯಕ ಉಸುರಿದ: " ಅವನಿಗೆ ಮುನಿಸು ಬಂದಾಗ ನೀವು ನೋಡಬೇಕು. ''

" ಆನೆಗೆ ಮುನಿಸು ಬರುವುದಿದೆಯೇ ? '' ಚಿರುತೆ ವಿಸ್ಮಯ ತುಂಬಿದ ದನಿಯಲ್ಲಿ ಕೇಳಿದಳು.

" ಪಾಪಾತಿ, ಮುನಿಸು ಬಂದಾಗ ಶಂಕರ ನಿಮ್ಮನ್ನು ಹೀಗೆ ಹತ್ತರ ಸುಳಿಯಲು ಬಿಟ್ಟಾನೇ ! '' ನಾಯಕ ಹೇಳಿದ : " ಇಷ್ಟು ದಿನಗಳ ತನಕ ನನ್ನ ಎಲುಬುಗಳನ್ನು ಹುಡಿಯಾಗಿಸದೆ ಬಿಟ್ಟುದೇ ನನ್ನ ಪುಣ್ಯ ! ''

ಆನೆ ಹಣ್ಣುಕಾಯಿಗಳನ್ನು ಮೆದ್ದು ಮುಗಿಸಿತು. ನಾಯಕ ಶಂಕರನನ್ನು ಅಟ್ಟಿಕೊಂಡು ಹೋಗಿ ಅಂಗಳದ ಅಂಚಿನಲ್ಲಿದ್ದ ಹಲಿಸಿನ ಮರಕ್ಕೆ ಆನೆಯ ಕಾಲನ್ನು ಸಂಕಲೆಯಿಂದ ಬಿಗಿದ.

" ಆನೆಗೆನೋ ಹಣ್ಣು ತೆಂಗಿನಕಾಯಿಗಳ ಸವಿಯೂಟವನ್ನು ಉಣಿ ಸಿದಿರಿ. '' ಆನೆಯನ್ನು ಬಿಗಿದು ಬಂದ ಮೇಲೆ ನಾಯಕ ತನ್ನ ತುಟಿಗಳ ಮೇಲೆ ಕಿರುನಗೆಯನ್ನು ತಂದುಕೊಂಡು ಉಸುರಿದ. " ಆದರೆ ಆನೆಯನ್ನು ಪೊಡಮಡಿಸಿದ ನನ್ನನ್ನು ಮಾತ್ರ ಉಪವಾಸ ಹಾಕುವ ಸಂಚು ಹೂಡಿ ದ್ದೀರಿ ! ''

" ಹೋಗು ಚಿರುತೆ'' ಈ ವರೆಗೆ ತುಟಿ ಬಿಚ್ಚದೆ ಶಂಕರ

ಮತ್ತು ನಾಯಕರನ್ನೇ ನೋಡುತಿದ್ದ ಲಕ್ಷ್ಮಿ ತಂಗಿಗೆ ಹೇಳಿದಳು: "ಪಾಪ, ಬೆಳಿಗ್ಗೆ ಒಂದಿಷ್ಟು ಕಾಫಿ ಫಾಲಹಾರ ಮಾಡಿ ಕಾಡಿಗೆ ಹೋಗಿದ್ದಾನೆ. ಅವನು ತುಂಬಾ ಹಸಿದಿದ್ದಾನು. ಒಂದಿಷ್ಟು ಕಾಫಿ ಮತ್ತು ಹಣ್ಣುಗಳನ್ನು ತಂದು ಕೊಡೇ."

"ನಾನು ಕಾಫಿ ತರಲಾ, ಅಥವಾ ದೇವತ್ತಿಗೆ ಊಟವನ್ನು ಬಡಿಸಲು ಹೇಳಲಾ?" ಚಿರುತೆ ನಾಯಕನನ್ನು ಕೇಳಿದಳು.

"ಮೊದಲು ಕಾಫಿಯ ಔತಣ ನಡೆಯಲಿ. ಅನಂತರ ಹೇಗೂ ಊಟ ಇದ್ದೇ ಇದೆಯಲ್ಲ!"

ಚಿರುತೆ ಅಡುಗೆಯ ಕೋಣೆಯೊಳಗೆ ಹೋಗಿ ಬೇಯಿಸಿದ ಸೀಂದ್ರ ಬಾಳೆಹಣ್ಣುಗಳನ್ನು ಮತ್ತು ಒಂದು ಲೋಟ ಕಾಫಿಯನ್ನು ತಂದು ಆನೆಕಾರನಿಗೆ ಕೊಟ್ಟಳು.




ಲಕ್ಷ್ಮಿ ಹಾಸಿಗೆಯ ಮೇಲೆ ಹೊರಳಿ ಕೈಯಲ್ಲಿ "ಚೇರಮಾನ್ ಪೆರುಮಾಳ್" ಎಂಬ ಕಾದಂಬರಿಯನ್ನು ಹಿಡಿದುಕೊಂಡು ಓದುತಿದ್ದಳು. ಅವಳ ಓದನ್ನು ಕೇಳುತಲಿದ್ದ ಚಿರುತೆ ಮಾತ್ರ ಕಣ್ಣುಮುಚ್ಚಿ ನಿದ್ದೆ ಮಾಡುತಿದ್ದಳು. ಲಕ್ಷ್ಮಿಗೂ ಕಣ್ಣೆವೆಗಳು ಭಾರವಾಗಿದ್ದವು. ಅವಳು ಪುಸ್ತಕವನ್ನು ಮುಚ್ಚಿ ಓದು ಸಾಕುಮಾಡೋಣವೆಂದು ಆಲೋಚಿಸಿ ಹೊತ್ತಿಗೆಯನ್ನು ಬದಿಗಿರಿಸಿದಳು. ಇನ್ನೇನು ಉರಿಯುತಿದ್ದ ಲಾಂದ್ರವನ್ನು ನಂದಿಸಬೇಕು; ಅಷ್ಟರಲ್ಲಿ ಸಂಜೆ ಹಾಲು ಕರೆಯಲೆಂದು ತಾಯಂದಿರ ಜತೆಯಲ್ಲಿ ಬಿಟ್ಟ ಕರುಗಳನ್ನು ಮರಳಿ ಕಂಚಲಿಗೆ ತಂದು ಕಟ್ಟಿಹಾಕಿಯಾಗಿದೆಯೇ ಎಂಬ ಸಂದೇಹ ತಲೆದೋರಿತು. ಕೆಲಸದಾಳು ದೇವಕಿ ಕರುಗಳನ್ನು ಕೂಡಿ ಕಟ್ಟಿಹಾಕದಿದ್ದರೆ ಬೆಳಗಿನ ಕಾಫಿಗೆ ಹಾಲು ಸೊನ್ನೆಯಾಗುವುದು.

ಲಕ್ಷ್ಮಿ ಮಲಗಿದಲ್ಲಿಂದ ಎದ್ದು "ದೇವತ್ತೀ, ದೇವತ್ತೀ." ಎಂದು

ಮನೆಗೆಲಸದ ತೊತ್ತನ್ನು ಕರೆದಳು.

ದೇವಕಿ ಮನೆಕೆಲಸದ ಹೆಣ್ಣಾಳು. ಅವಳು ಲಕ್ಷ್ಮಿಯ ಮಾವನ ಮನೆಯನ್ನು ಸೇರಿ ತುಂಬಾ ವರ್ಷಗಳಾಗಿದ್ದುವು. ಚಿರುತೆ, ರಾಮು, ಬಾಲ ಇವರನ್ನೆಲ್ಲಾ ಎತ್ತಿ ಅವಳು ಆಡಿಸಿದ್ದಳು. ಅವಳ ಪ್ರಾಯ ಐವತ್ತರ ಮನೆಯನ್ನು ದಾಟಿತ್ತು. ಹಿರಿಯಳಾದ ಈ ಹೆಣ್ಣಾಳನ್ನು ಮನೆಯ ಮಕ್ಕಳೆಲ್ಲ ಗೌರವದಿಂದ "ದೇವತ್ತೆ" ಎಂದು ಸಂಬೋಧಿಸು ತಿದ್ದರು.

ಲಕ್ಷ್ಮಿಯ ಕರೆಗೆ ದೇವತ್ತೆ ಓಗೊಡಲಿಲ್ಲ. ಲಕ್ಷ್ಮಿ "ಪಾಪ, ಮನೆಗೆಲಸ ಮಾಡಿ ದಣಿದ ದೇವತ್ತೆಗೆ ಬೇಗ ನಿದ್ದೆ ಹತ್ತಿದೆ. ಅವರನ್ನು ಕೂಗಿ ಎಚ್ಚರಿ ಸುವೆನು" ಎಂದು ಹೇಳಿ ಲಾಂದ್ರುವನ್ನು ಎತ್ತಿಕೊಂಡು ಕೋಣೆಯಿಂದ ಹೊರಬಂದಳು. ಹೊರಗಿನ ಹಜಾರದಲ್ಲಿ ದೇವತ್ತೆ ಕಂಬಳಿಯ ಮುಸುಕು ಹಾಕಿಕೊಂಡು ಮಲಗಿದ್ದಳು. ಕಂಬಳಿಯ ಮುಸುಕಿನಿಂದ ಅವಳ ನರೆತ ಕೂದಲು ಕಾಣಿಸಿತು. ಅವಳ ಕೊರಳಿಂದ ತುತ್ತೂರಿ ದನಿಯಂತೆ ಗೊರಕೆಯ ಸದ್ದು ಹರಿದು ಬರುತಿದ್ದಿತು.

"ದೇವತ್ತೆ; ದೇವತ್ತೆ!" ಎರಡು ಸಲ ಕೂಗಿದಳು ಲಕ್ಷ್ಮಿ.

ನಿದ್ದೆಯಲ್ಲಿದ್ದ ದೇವತ್ತೆಗೆ ಪುಟ್ಟೊಡತಿಯ ಕರೆ ಕೇಳಿಸಲಿಲ್ಲ. ಗೊರ ಕೆಯ ದನಿ ಕಡಿಯಲಿಲ್ಲ. ಲಕ್ಷ್ಮಿ ಅವಳನ್ನು ಮರಳಿ ಕರೆಯಲಿಲ್ಲ. ಅವಳು "ಪಾಪ, ನಸುಕಿನಿಂದ ಹಿಡಿದು ಸಂಜೆಯ ವರೆಗೆ ಒಂದೇ ಸಮನೆ ದುಡಿದು ದಣಿದಿದ್ದಾರೆ. ಈಗ ಅವರ ಸೊಗಸಿನ ನಿದ್ದೆಯನ್ನೇಕೆ ಕೆಡಿಸಲಿ? ನಾನೇ ಹಟ್ಟಿಯ ತನಕ ಹೋಗಿ ಬಂದರೆ ಕಾಲುಗಳು ಸವೆದು ಹೋಗ ಲಾರವು." ಎಂದು ತನ್ನಲ್ಲಿಯೇ ಹೇಳಿಕೊಂಡಳು.

ಆಕೆ ಎಡಗೈಯಲ್ಲಿ ಲಾಂದ್ರುವನ್ನು ಎತ್ತಿಕೊಂಡು ಹೋಗಿ ಹಿತ್ತಲ ಬಾಗಿಲನ್ನು ತೆರೆದಳು. ಹಟ್ಟಿ ಮನೆಯಿಂದ ಹೆಚ್ಚು ಅಂತರದಲ್ಲಿ ಇರಲಿಲ್ಲ. ಮನೆಯಿಂದ ನೂರು ಮಾರು ದೂರದಲ್ಲಿದ್ದಿತು. ಅವಳು ಮೆಲ್ಲನೆ ಹಟ್ಟಿಯ ಕಡೆ ಸಾಗಿದಳು. ಅಂದವಾದ ಬೆಳದಿಂಗಳು ಬೆಳೆದುನಿಂತ ಬಾಳೆಗಿಡಗಳ ಮೇಲೆ ಮಳೆಯಾಗಿ ಸುರಿಯುತಿದ್ದಿತು. ಬಾಳೆಎಲೆ ತೆಳುಗಾಳಿಗೆ ಸಿಲುಕಿ ಮೃದುವಾಗಿ ಅಲುಗುತ್ತಿದ್ದವು. ಇರುಳಿನ ತಂಗಾಳಿ ಬಂದು ಅವಳ

ಮೈಯನ್ನು ಸೋಂಕಿತು. ಅದು ಆಕೆಗೆ ಬಹು ಆಪ್ಯಾಯಮಾನವಾಗಿ ತೋರಿತು. ಅವಳು ಹೋಗಿ ಮೆಲ್ಲನೆ ಹಟ್ಟಿಯ ಕದಗಳನ್ನು ತೆರೆದಳು.

ಕದಗಳನ್ನು ತೆರೆದ ಸದ್ದನ್ನು ಕೇಳಿ ಮೆಲುಕು ಹಾಕುತ್ತಾ ಮಲಗಿದ್ದ ಹಸುಗಳು ಮೆಲ್ಲನೆ ಎದ್ದು ನಿಂತುವು. ರಾತ್ರಿ ಹೊತ್ತು ತಮ್ಮ ನೆಮ್ಮದಿಯನ್ನು ಕೆಡಿಸಲು ಬಂದವರಾರೆಂದು ತಮ್ಮ ನೀಲಿಯ ಕಣ್ಣುಗಳನ್ನು ಅಗಲಿಸಿ ನೋಡಿದುವು. ಅವುಗಳ ಪಕ್ಕದಲ್ಲಿದ್ದ ನಾಲ್ಕು ಪುಟ್ಟ ಕರುಗಳು ಕೊರಳುಗಳನ್ನು ಬಾಗಿಸಿ ತಮ್ಮ ಮೈಗಳ ಮೇಲೆ ತಲೆಗಳನ್ನಿಟ್ಟು ಕೊಂಡು ನಿದ್ದೆ ಮಾಡುತ್ತಿದ್ದವು.

ಲಕ್ಷ್ಮಿ ನೆಲದ ಮೇಲೆ ಲಾಂದ್ರವನ್ನಿರಿಸಿ ಕರುಗಳನ್ನು ಮೆಲ್ಲನೆ ತಟ್ಟಿ ಎಬ್ಬಿಸಿದಳು. ಅವುಗಳನ್ನು ದೂಡಿ ಹಟ್ಟಿಯಿಂದ ಹೊರತಂದಳು. ಎಡಗೈಯಲ್ಲಿ ಲಾಂದ್ರವನ್ನು ಹಿಡಿದುಕೊಂಡು ಕರುಗಳನ್ನು ಕಂಚಲಿಗೆ ಅಟ್ಟಿಕೊಂಡು ಹೋದಳು. ಕರುಗಳನ್ನು ಅರೆದೆರೆದ ಬಾಗಿಲೊಳಗೆ ದೂಡಿದಳು. ಕಂಚಲು ಉದ್ದವಾದ ಹಜಾರದ ಹಾಗೆ ಇತ್ತು. ಒಂದು ಮೂಲೆಯಲ್ಲಿ ಕರುಗಳನ್ನು ಗೂಟಕ್ಕೆ ಕಟ್ಟಿ ಹಾಕುತಿದ್ದರು. ಇನ್ನೊಂದು ತುದಿಯಲ್ಲಿ ·ದನಗಳಿಗೆ ತಿನ್ನಲೆಂದು ಒಟ್ಟಿದ ಒಣ ಹುಲ್ಲಿನ ಬಣಚಿ ಇತ್ತು. ಈ ಉದ್ದದ ಹಜಾರಕ್ಕೆ ಹೊರಗೋಡೆ ಇರಲಿಲ್ಲ. ಒಳಗೆ ದನ ನುಗ್ಗದಂತೆ ಮರದ ಸಲಾಕೆಗಳನ್ನು ಕಟ್ಟಿ ಮೊಳೆ ಹೊಡೆದಿದ್ದರು.

ಆಕೆ ಕರುಗಳನ್ನು ಮೂಲೆಯ ಗೂಟಗಳಿಗೆ ಬಿಗಿದಳು. ಅವುಗಳಿಗೆ ಮೆಲ್ಲಲೆಂದು ಒಂದು ಕಂತೆ ಹುಲ್ಲು ಬಿಚ್ಚಿ ಹಾಕಿದಳು. ಇನ್ನು ಕಂಚಲಿನ ಕವಗಳನ್ನೆಳೆದುಕೊಂಡು ಮನೆಗೆ ಹೋಗಬೇಕು; ಅಷ್ಟರಲ್ಲಿ ಹುಲ್ಲ ಬಣಚಿಯ ಸಂದಿನಿಂದ ಹಲಸಿನ ಹಣ್ಣಿನ ಕಂಪು ಬಂದು ಅವಳ ಮೂಗಿಗೆ ಬಡಿಯಿತು.

ಎರಡು ದಿನಗಳ ಹಿಂದೆ ಆಳುಗಳು ತೋಟದಿಂದ ಬಲಿತ ಹಲಸಿನ ಕಾಯಿಗಳನ್ನು ತಂದು ಕಳಿತು ಪಕ್ವವಾಗಲು ಹುಲ್ಲರಾಶಿಯ ಎಡೆಯಲ್ಲಿಟ್ಟಿದ್ದರು. ಮನೆಗೆ ಒಯ್ದರೆ ಕಾಯಿಗಳನ್ನು ಆಗಲೇ ತರಿದು ತಿನ್ನಬೇಕೆಂದು ಮಕ್ಕಳು ಅತ್ತು ಹಟ ಹಿಡಿದು ರಂಪಮಾಡುವರು; ಪಾಯಸವನ್ನೋ ಕಡುಬನ್ನೋ ಮಾಡೋಣವೆಂದು ಮಾವ ಕಾಯಿಗಳನ್ನು ಹುಲ್ಲ ಬಣ

ಬೆಯ ಮರೆಯಲ್ಲಿ ಇಡಲು ಆಳುಗಳಿಗೆ ಹೇಳಿದ್ದರು. ಮಾವನಿಗೆ ಹಲಸಿನ ಹಣ್ಣಿನ ಪಾಯಸವೆಂದರೆ ಪಂಚಪ್ರಾಣ.

ಎಷ್ಟು ಕಾಯಿಗಳು ಕಳಿತು ಪರಿಪಕ್ವವಾಗಿವೆ ಎಂದು ನೋಡ ಬೇಕೆಂದು ಲಕ್ಷ್ಮಿಗೆ ಅನಿಸಿತು. ಅವಳು ಎಡಗೈಯಲ್ಲಿ ಲಾಂದ್ರವನ್ನು ಎತ್ತಿಹಿಡಿದು ಮುಚ್ಚಿದ ಹುಲ್ಲು ಕಂತೆಗಳನ್ನು ಎಳೆದು ಹಾಕಿದಳು. ಯಾವುವು ಹಣ್ಣಾಗಿದೆಯೆಂದು ತಿಳಿಯಲು ಕಾಯಿಗಳನ್ನು ಬೆರಳುಗಳಿಂದ ಹೊಡೆದು ಪರೀಕ್ಷಿಸಿದಳು. ಎರಡು ಕಾಯಿಗಳು ಕಳಿತು ಮೆದುವಾಗಿ ದ್ದುವು; ತಾವು ಪಕ್ವವಾಗಿ ಉಣಿಸಿ ಅಣಿಯಾಗಿದ್ದೇವೆ ಎಂದು ಸಾರಿ ಹೇಳು ವಂತೆ ತಮ್ಮ ಪರಿಮಳವನ್ನು ನಾಲ್ದೆಸೆಗಳಿಗೆ ಎರಚುತಿದ್ದುವು.

ಲಕ್ಷ್ಮಿಯ ಕೊರಳಿಗೆ ಏನೋ ತಣ್ಣಗೆ ಸೋಂಕಿತು. ಹಾವಿನಂತೆ ಬುಸುಗುಟ್ಟುವ ಸದ್ದು ಅವಳಿಗೆ ಕೇಳಿಸಿತು.

" ಅಬ್ಬಾ! ಹಾವು! " ಎಂಬ ಭಯೋದ್ಗಾರ ಅವಳ ಕೊರಳಿಂದ ಹೊಮ್ಮಿತು.

ಇನ್ನೊಂದು ಕ್ಷಣದಲ್ಲಿ ತಾನು ತೊಟ್ಟ ರವಿಕೆಯ ಮೇಲಂಚನ್ನು ಹಿಡಿದು ಮೇಲೆಳೆದಂತೆ ಅವಳಿಗೆ ಭಾಸವಾಯಿತು. ಮರದ ಸಲಾಕೆಯ ಮೇಲಿಂದ ಆನೆಯ ದೊಡ್ಡ ಸೊಂಡಿಲು ಒಳಗೆ ಇಳಿದು ಬಂದಿತ್ತು. ಆ ಸೊಂಡಿಲೇ ಆಕೆಯ ರವಿಕೆಯ ಅಂಚನ್ನು ಹಿಡಿದೆಳೆಯುತ್ತಿತ್ತು. ಶಂಕರ ಹಲಸಿನ ಹಣ್ಣಿನ ಪರಿಮಳಗೆ ಜಾಡು ಹಿಡಿದು ಅಲ್ಲಿಗೆ ಬಂದಿದ್ದ. ಆನೆಗೆ ಹಲಸಿನ ಹಣ್ಣಿನಷ್ಟು ಪ್ರಿಯವಾದುದು ಬೇರೊಂದಿಲ್ಲ. ಹಲಸಿನ ಹಣ್ಣನ್ನು ಕೈಯಲ್ಲಿ ಹಿಡಿದ ಲಕ್ಷ್ಮಿಯನ್ನೇ ಹಣ್ಣೆಂದು ಭಾವಿಸಿ ಸೊಂಡಿಲಿನಿಂದ ಹಿಡಿದು ಮೇಲೆತ್ತಲು ಪ್ರಯತ್ನಿಸುತಿದ್ದ.

ತಾನು ಆನೆಯ ಸೊಂಡಿಲಿಗೆ ಸಿಕ್ಕಿಬಿದ್ದೆನೆಂದು ಲಕ್ಷ್ಮಿ ಭಯಭೀತ ಳಾದಳು. ಆದರೆ ಪ್ರಸಂಗಾವಧಾನತೆ ಅವಳ ನೆರವಿಗೆ ಬಂದಿತು. ಅವಳು ಕೈಯಲ್ಲಿ ಹಿಡಿದ ಹಲಸಿನ ಹಣ್ಣನ್ನು ದೂರ ಒಗೆದು ರವಿಕೆಯ ಗುಂಡಿ ಗಳನ್ನು ಬಿಚ್ಚಿದಳು. ಅವಳು ಬಾಗಿ ಹುಲ್ಲ ಬಣಬೆಯ ಮೇಲೆ ಕುಳಿತು ಹಲಸಿನ ಹಣ್ಣನ್ನೆತ್ತಿ ಮರದ ಸಲಾಕೆಗಳಾಚೆ ದೂರ ಒಗೆದಳು.

ಹೊರಗೆ ಎಸೆದ ಹಣ್ಣಿನ ಕಂಪನ್ನು ಹಿಡಿದು ಆನೆ ಹಟ್ಟಿಯಿಂದ

ದೂರ ಸರಿಯಿತು. ನಾಯಕ ಅಂದು ಸಂಜೆ ಆನೆಯನ್ನು ಕಟ್ಟಿ ಹಾಕಲು ಮರೆತಿದ್ದಾನೆ ಎಂಬುದು ಲಕ್ಷ್ಮಿಗೆ ಅರಿವಾಯಿತು. ಈಗ ಅವನು ಕಣಜದ ಹೊರ ಜಗುಲಿಯಲ್ಲಿ ಮಲಗಿ ಗೊರಕೆ ಹೊಡೆಯುತ್ತಿರಬಹುದು; ಅವನನ್ನು ಕರೆದೆಬ್ಬಿಸಬೇಕಾದರೆ ನೂರು ಮಾರು ದೂರ ನಡೆದುಕೊಂಡು ಹೋಗಬೇಕು; ಹೋಗಿ ಕರೆಯೋಣವೆಂದರೆ ಹೊರಗೆ ಆನೆ ಬೇರೆ ಇದೆ; ತಾನು ಭೀತಿಯಿಂದ ಕೈಯಲ್ಲಿದ್ದ ಹಲಸಿನ ಹಣ್ಣನ್ನು ಎತ್ತಿ ಎಸೆದಾಗ ಅದು ಲಾಂದ್ರದ ಮೇಲೆ ಬಿದ್ದು ಲಾಂದ್ರ ನಂದಿ ಚಿಮಣಿ ಹುಡಿಯಾಗಿ ಹೋಗಿದೆ; ಈ ಕತ್ತಲಲ್ಲಿ ಮನೆಗೆ ಹೋಗುವುದಾದರೂ ಹೇಗೆ? ಹಲಸಿನ ಹಣ್ಣು ಮೆದ್ದು ಮುಗಿಸಿದೊಡನೆಯೇ ಆನೆ ಮರಳಿ ಕೊಟ್ಟಿಗೆಯೊಳಗೆ ನುಗ್ಗುವುದಕ್ಕೆ ಪ್ರಯತ್ನಿಸೀತು! ಮಾಡುವುದೇನು? ಹೀಗೆ ಚಿಂತೆಗಳ ಸಾಲು ಅವಳ ಮನಸಿನಲ್ಲಿ ಸುಳಿಯಿತು.

ಲಕ್ಷ್ಮಿ ಮೆಲ್ಲನೆ ಹುಲ್ಲ ಬಣಬೆಯ ಮೇಲಿಂದ ಎದ್ದು ಹೊರಗೆ ನೋಡಿದಳು. ಬೆಳದಿಂಗಳಿನ ಮಬ್ಬುಬೆಳಕಿನಲ್ಲಿ ದೂರದಲ್ಲಿ ಆನೆಯ ಆಕೃತಿ ಕಾಣಿಸಿತು. ಶಂಕರ ಹಲಸಿನ ಹಣ್ಣನ್ನು ಒಡೆದು ಮೆಲ್ಲುವುದರಲ್ಲಿ ಮಗ್ನನಾಗಿದ್ದ. ಅವನು ಹಣ್ಣನ್ನು ಮೆದ್ದು ಮುಗಿಸುವುದರಲ್ಲಿ ತಾನು ಕೊಟ್ಟಿಗೆಯಿಂದ ಪಾರಾಗಿ ಹೋಗಬೇಕು ಎಂದು ಅವಳು ಎಣಿಸಿದಳು. ಅವಳು ಸದ್ದಾಗದಂತೆ ಕಂಚಲಿನ ಕದಗಳನ್ನೆಳೆದುಕೊಂಡು ಹೆಜ್ಜೆಯ ಮೇಲೆ ಹೆಜ್ಜೆಯನ್ನಿರಿಸುತ್ತಾ ಹೋದಳು.

ಮನೆಯ ಮೆಟ್ಟಲನ್ನೇರಿದಳು ಲಕ್ಷ್ಮಿ. ಕಟ್ಟಹಾಕದ ಶಂಕರ ಬಾಳೆ ತೋಟದೊಳಗೆ ನುಗ್ಗಿ ಗಿಡಗಳನ್ನು ಸಂಹಾರ ಮಾಡಿಯಾನು; ಹಟ್ಟಿಯ ಮಾಡನ್ನು ಮುರಿದು ಅವಾಂತರ ಎಬ್ಬಿಸಿಯಾನು ಎಂಬ ಆಲೋಚನೆ ಆಕೆಯ ಚಿತ್ತದಲ್ಲಿ ತಲೆದೋರಿತು. ಅವಳು ನಾಯಕನನ್ನು ಕರೆದು ಎಬ್ಬಿಸುವುದು ಲೇಸು ಎಂದು ಆಲೋಚಿಸಿ ಕಣಜದ ಜಗಲಿಗೆ ಹೋದಳು. ಅಲ್ಲಿ ಅವನು ಎಣಿಸಿದಂತೆಯೇ ನಾಯಕ ತನ್ನ ಗೋಣಿ ಹಾಸಿನಮೇಲೆ ಹರುಕು ಕಂಬಳಿಯನ್ನು ಹೊದೆದುಕೊಂಡು ನಿದ್ರಿಸುತ್ತಿದ್ದ. ಅವಳು ನಾಲ್ಕಾರು ಸಲ "ನಾಯಕ, ನಾಯಕ" ಎಂದು ಅವನನ್ನು ಹೆಸರೆತ್ತಿ ಕರೆದಳು.

ಲಕ್ಷ್ಮಿ ಹತ್ತೆಂಟು ಸಲ ಕೂಗಿದ ಮೇಲೆಯೇ ನಾಯಕನಿಗೆ ಎಚ್ಚರ ವಾದುದು. ಅವನು ಎದ್ದುಕುಳಿತು ಹೊದೆದ ಕಂಬಳಿಯನ್ನು ಅತ್ತ ಒಗೆದು ಕಣ್ಣುಗಳನ್ನು ಉಜ್ಜಿಕೊಳ್ಳುತ್ತಾ ಕೂಗಿದವರಾರೆಂದು ನೋಡಿದ.

"ನಾಯಕ, ಇದೆಂತಹ ಕುಂಭಕರ್ಣ ನಿದ್ದೆ ನಿನ್ನದು" ಲಕ್ಷ್ಮಿ ಸಿಡುಕುದನಿಯಲ್ಲಿ ನಾಯಕನನ್ನು ಗದರಿಸಿದಳು: "ನಿನಗೆ ಸ್ವಲ್ಪ ವಾದರೂ ಜಾಗ್ರತೆ ಎಂಬುದು ಬೇಡವೇ?"

ನಾಯಕನಿಗೆ ತನ್ನ ಮುಂದೆ ಪುಟ್ಟ ಪಾಪಾತಿ ನಿಂತಿರುವುದನ್ನು ನೋಡಿದ. ಅವನು ಬೆರಗು ತುಂಬಿದ ದನಿಯಲ್ಲಿ "ಪುಟ್ಟ ಪಾಪಾತಿ, ಏನಾಯಿತು? ಈ ಇರುಳ ನಡುವೆ ನನ್ನನ್ನೇಕೆ ಕರೆದಿರಿ?" ಎಂದು ಕೇಳಿದ. ಅವನು ಒಂದು ತುಂಡು ಹೊಗೆ ಸೊಪ್ಪನ್ನು ತೆಗೆದು ಸುಣ್ಣ ಉಜ್ಜಿ ಬಾಯೊಳಗೆ ತುರುಕಿಕೊಂಡ.

"ಆಗುವುದೇನು! ದೊಡ್ಡ ಗಂಡಾಂತರವೇ ಆಗುತಿತ್ತು. ನಿನ್ನಂತಹ ಸೋಮಾರಿಯನ್ನು ನಾನು ಕಾಣಲೇ ಇಲ್ಲ. ನೀನು ಸಂಜೆ ಹೊಳೆಯಲ್ಲಿ ಮೀಯಿಸಿದ ಮೇಲೆ ಶಂಕರನನ್ನು ಕಟ್ಟಿಹಾಕಲೇ ಇಲ್ಲ. ನೋಡು ಬೆಳಗಾಗುವಾಗ ನೇಂದ್ರ ಬಾಳೆ ತೋಟವೆಲ್ಲ ನೆಲಸಮವಾಗುವುದು; ಅದರ ಜತೆಯಲ್ಲಿಯೇ ಪಾಪನ ಬೆತ್ತದಿಂದ ನಿನ್ನಬೆನ್ನಮೇಲಿನ ಚರ್ಮವೂ ಸುಲಿದು ಹೋಗುವುದು!"

ಶಂಕರನಿಗೆ ಮಿದಿದ ನೆಲ್ಲನ್ನು ಬೇಯಿಸಿ ಕೊಟ್ಟಮೇಲೆ ತಾನು ಕಟ್ಟಿ ಹಾಕಲಿಲ್ಲವೆಂಬುದು ಈಗ ನಾಯಕನಿಗೆ ನೆನಪಾಯಿತು. ಅವನು ತಲೆದೆಸೆಯಲ್ಲಿರಿಸಿದ್ದ ಅಂಕುಶವನ್ನೆತ್ತಿಕೊಂಡು ಅಂಗಳಕ್ಕೆ ಇಳಿದ. ಬಾಳೆ ತೋಟದ ಮರೆಯಲ್ಲಿ ಅಡಗಲು ಹೊರಟಿದ್ದ ಚಂದ್ರನ ಮಬ್ಬು ಬೆಳಕಿನಲ್ಲಿ ಅವನಿಗೆ ಪುಟ್ಟ ಪಾಪಾತಿಯ ಆಕೃತಿ ಸ್ಪಷ್ಟವಾಗಿ ಗೋಚರಿಸಿತು. ಆಕೆಯು ತೊಡುಗೆ ಆವರಿಸದ ಮೇಲ್ಮೈಯನ್ನು ಅವನು ನೋಡಿದ. ಬಾಳೆ ತೋಟದ ಮರೆಯಲ್ಲಿ ನಿಂತ ಚಂದ್ರನ ಮೃದುಕಿರಣಗಳು ಮೋಹ ಗೊಂಡು ಬಂದು ಆಕೆಯ ಉನ್ನತ ವಕ್ಷವನ್ನು ಚುಂಬಿಸುತಿದ್ದುವು. ಪಾಪಾತಿಯ ತುಂಗಸ್ತನಗಳನ್ನು ನೋಡಿ ನಾಯಕನಿಗೆ ನಾಚಿಕೆ ಯಾಯಿತು. ಅವನು ತಲೆಯನ್ನು ತಗ್ಗಿಸಿದ. ಅವನು ಮಿದುದನಿಯಲ್ಲಿ

"ಪಾಪಾತಿ, ಇದೇನು ಈ ವೇಷದಲ್ಲಿ ಬಂದಿದ್ದೀರಿ?" ಎಂದು ಕೇಳಿದ.

ಶಂಕರನಿಂದ ನೇಂದ್ರ ಬಾಳೆ ತೋಟಕ್ಕೆ ಒದಗಬಹುದಾದ ಕೇಡನ್ನು ನಿವಾರಿಸಬೇಕು ಎಂಬ ಆತುರದಲ್ಲಿ ಶಂಕರ ತಾನು ತೊಟ್ಟ ರವಿಕೆಯನ್ನು ಹಿಡಿದೆಳೆದು ಕಸಿದುಕೊಂಡಿದ್ದಾನೆಂಬುದನ್ನು ಸಹ ಮರೆತು ನಾಯಕನನ್ನು ಕೂಗಲೆಂದು ಅವಳು ಕಣಜವೆಡೆಗೆ ಓಡಿ ಬಂದಿದ್ದಳು. ಆನೆಕಾರನ ಮಾತು ಕೇಳಿ ಅವಳು ಕಣ್ಣು ತಗ್ಗಿಸಿದಳು. ತಾನು ಅರೆಬತ್ತಲೆಯಾಗಿರುವೆನೆಂಬುದು ಅವಳಿಗೆ ಅರಿವಾಯಿತು. ಅವಳು ರೇಗಿದಂತೆ ನಟಿಸಿ, "ನಾಯಕ, ನೀನು ಶುದ್ಧ ಬೆಪ್ಪು ಮುಂಡೇಯ! ನಿನ್ನ ಮೈಮರೆಯುವಿಕೆಯಿಂದು ನಾನು ಆ ರವಿಕೆಯನ್ನು ಕಳೆದುಕೊಳ್ಳುವಂತಾಯಿತು." ಎಂದು ಗದರಿಸಿದಳು.

ನಾಯಕ ಪ್ರತಿ ಹೇಳಲಿಲ್ಲ. ಅವಳು "ತಡೆ. ನಾನು ಇನ್ನೊಂದು ಕ್ಷಣದಲ್ಲಿ ದೀಪತರುವೆನು." ಎಂದು ಹೇಳಿ ಹಿತ್ತಲ ಬಾಗಿಲಿನಿಂದ ಮನೆಯೊಳಗೆ ನುಗ್ಗಿದಳು. ಅವಳು ಬೆಂಕಿ ಪೆಟ್ಟಿಗೆಯನ್ನು ಅರಸಿ ಬೇರೊಂದು ಲಾಂದ್ರವನ್ನು ಹಚ್ಚಿದಳು. ಒಳಗೆ ಹಜಾರದಲ್ಲಿ ಗಳುವಿನ ಮೇಲೆ ಒಣಹಾಕಿದ್ದ ಮಡಿ ರವಿಕೆಯನ್ನೆತ್ತಿ ತೊಟ್ಟುಕೊಂಡಳು.

ಅವಳು ಮನೆಯಿಂದ ಹೊರಬರುವತನಕ ನಾಯಕ ಅಂಗಳದಲ್ಲಿಯೇ ನಿಂತಿದ್ದ. ಅವನು ಆಕೆಯನ್ನು ಕಂಡೊಡನೆ "ಪುಟ್ಟ ಪಾಪಾತಿ, ಶಂಕರನೆಲ್ಲಿದ್ದಾನೆ?" ಎಂದು ಕೇಳಿದ.

"ಕರುಗಳ ಕಂಚಲು ಹತ್ತಿರ ಇದ್ದಾನೆ" ಎಂದು ಉಸುರಿ ಲಕ್ಷ್ಮಿ ಕೈಯಲ್ಲಿ ಲಾಂದ್ರವನ್ನು ಹಿಡಿದುಕೊಂಡು ಮುಂದೆ ನಡೆದಳು. ನಾಯಕ ಮಾತಾಡದೆ ಆಕೆಯನ್ನು ಹಿಂಬಾಲಿಸಿದ.

ಆನೆ ಕಂಚಲಿನ ಮರದ ಸಲಾಕೆಗಳನ್ನು ಮುರಿದು ಹಲಸಿನ ಕಾಯಿಗಳನ್ನು ತಿನ್ನಲೆಂದು ಒಳಗೆ ನುಗ್ಗಿರಲಿಲ್ಲ. ಅದು ಲಕ್ಷ್ಮಿ ಎಸೆದ ಹಲಸಿನ ಹಣ್ಣನ್ನು ಮೆದ್ದು ಮುಗಿಸಿ ಎಳೆಯ ನೇಂದ್ರ ಬಾಳೆಗಿಡಗಳ ಸವಿಯನ್ನು ನೋಡಲು ಹೊರಟಿತ್ತು. ಅದು ಹಟ್ಟಿಯಿಂದ ನಾಲ್ಕು ಮಾರುಗಳಾಚೆ ಇದ್ದ ಗಿಡವನ್ನು ಮುರಿದು ಬೀಳಿಸಿ ಸುಳಿ ಎಲೆಗಳನ್ನು ನಿಧಾನವಾಗಿ ಮೆಲ್ಲುತಿದ್ದಿತು.

ನಾಯಕ ತನ್ನ ಅಂಕುಶವನ್ನು ಚಾಚಿ ಶಂಕರನ ಸೊಂಡಿಲನ್ನು ತಿವಿದ. ಅವನು "ಶಂಕರ, ನಿನ್ನ ತುಂಟತನ ಬಲು ಜೋರಾಯಿತು. ನೀನು ಪುಟ್ಟ ಪಾಪಾತಿಯ ಅರಿವೆ ಎಳೆದು ಗಾಬರಿಗೊಳಿಸಿದೆಯಲ್ಲ! ನೇಂದ್ರ ಬಾಳೆಗಿಡವನ್ನು ಮುರಿದು ಹಾಕಿದೆಯಲ್ಲ! ನೀನು ಮಾಡಿದ ತಪ್ಪಿಗೆ ನಾಳೆ ನನ್ನ ಬೆನ್ನ ಮೇಲೆ ಬೆತ್ತದ ಬಾಸುಂಡೆ ಏಳುವದು" ಎಂದು ಆನೆಯನ್ನು ಗಜರಿದ.

ಶಂಕರ ಸುಳಿ ಬಾಳೆಯೆಲೆಯನ್ನು ಮೆಲ್ಲುವುದನ್ನು ನಿಲ್ಲಿಸಿ ತನ್ನ ಪುಟ್ಟ ಕಣ್ಣುಗಳಿಂದ ಮಾವುತನನ್ನು ನಿಟ್ಟಿಸಿ ನೋಡಿದ. ಆನೆ ತಪ್ಪು ಮಾಡಿದ ಹುಡುಗನಂತೆ ನಾಯಕನ ಮುಂದೆ ಸುಮ್ಮನೆ ನಿಂತಿತು. ನಾಯಕ ಆನೆಯ ಮೈಯನ್ನು ಕೈಯಿಂದ ತಡವಿ, "ಶಂಕರ, ಚಿಂತೆಯಿಲ್ಲ. ಇನ್ನು ಮುಂದೆ ಜಾಣನಾಗು. ತುಂಟತನ ಮಾಡಬೇಡ" ಎಂದು ಹೇಳಿ ತನ್ನ ಅಂಕುಶದ ತುದಿಯನ್ನು ಶಂಕರನ ಸೊಂಡಿಲಿಗೆ ಕೊಟ್ಟ. ಆನೆ ಅದನ್ನು ಹಿಡಿದು ಕೊಂಡಿತು. ನಾಯಕ ಮುಂದೆ ಹೆಜ್ಜೆಗಳನ್ನು ಇರಿಸಿದ. ಆನೆ ತಂಟೆ ಮಾಡದೆ ಆತನನ್ನು ಅನುಸರಿಸಿತು.

ಆನೆ ಪುಟ್ಟ ಹುಡುಗನಂತೆ ತಂಟೆ ಮಾಡದೆ ಕುರುಬ ಪೋರನನ್ನು ಹಿಂಬಾಲಿಸುವುದನ್ನು ಕಂಡು ಲಕ್ಷ್ಮಿ ವಿಸ್ಮಯ ತಳೆದಳು. ಅವಳು ಬೆರಗು ದನಿಯಲ್ಲಿ "ನಾಯಕ, ನಿನ್ನ ನುಡಿಯನ್ನು ಶಂಕರ ಸಣ್ಣ ಕೂಸಿನ ಹಾಗೆ ಕೇಳುವನಲ್ಲ! ನೀನೇನು ಉಪಾಯ ಮಾಡಿದೆ?" ಎಂದು ಕೇಳಿದನು.

"ಪುಟ್ಟ ಪಾಪಾತಿ, ಆ ಉಪಾಯವನ್ನು ನಾನು ಹೇಳಿಕೊಡ ಲಾರೆ. ನಾನು ಒಂದು ಮಂತ್ರ ಹಾಕಿದರೆ ಸೊಕ್ಕಿದ ಆನೆ ಸಹ ಬೆಕ್ಕಿನ ಮರಿಯಂತಾಗುವುದು."

"ಆ ಮಂತ್ರವನ್ನು ಒಂದು ಸಲ ಹೇಳು ನೋಡೋಣ."

"ಒಳ್ಳೆಯ ಪಾಪಾತಿ ನೀವು! ನಾನು ಮಂತ್ರವನ್ನು ನಿಮಗೆ ಹೇಳಿ ಕೊಡಬೇಕು; ಅದನ್ನು ಕಲಿತು ನೀವು ಆನೆ ನಡೆಸಲು ಹೊರಡಬೇಕು! ಈ ಕುರುಬ ಪೋರನ ಕೂಳಿಗೆ ಸೊನ್ನೆ!"

ಕುರುಬ ಹುಡುಗನ ಮಾತು ಕೇಳಿ ಲಕ್ಷ್ಮಿಗೆ ನಗು ಬಂತು. ತಾನು ಆನೆಯ ಬೆನ್ನಮೇಲೆ ಕುಳಿತು ಕೈಯಲ್ಲಿ ಅಂಕುಶ ಹಿಡಿದು ಆನೆ ನಡೆಸುವ

ಚಿತ್ರವನ್ನು ಅವಳು ಮನಸ್ಸಿನಲ್ಲಿಯೇ ಕಲ್ಪಿಸಿಕೊಂಡಳು. ಹೆಣ್ಣೊಬ್ಬಳು ಮಾವುತನ ಕೆಲಸವನ್ನು ಕೈಗೊಂಡರೆ ಹೇಗಿರಬಹುದು ಎಂದು ನೆನೆದಳು. ಈ ಆಲೋಚನೆ ಮನಸ್ಸಿನಲ್ಲಿ ಸುಳಿಯಲು ಅವಳ ಅಂತರಂಗದಲ್ಲಿ ನಗುವಿನ ಅಲೆಯೊಂದು ಎದ್ದು ಹೊರಗೆ ಉಕ್ಕಿ ಹರಿಯಿತು. ಅವಳು ಗೊಳ್ಳೆಂದು ನಕ್ಕುಬಿಟ್ಟಳು.

"ಪುಟ್ಟ ಪಾಪಾತಿ, ನೀವು ನಗುವುದೇಕೆ?" ಆನೆಕಾರ ಪ್ರಶ್ನಿಸಿದ.

"ನಿನ್ನ ಹೆಡ್ಡತನ ನನ್ನ ಎಂತಹ ಸಂಕಟಕ್ಕೆ ಈಡುಮಾಡಿತೆಂದು ಆಲೋಚಿಸಿ ನಕ್ಕೆ." ತಾನು ಮನಸ್ಸಿನಲ್ಲಿ ಕಲ್ಪಿಸಿಕೊಂಡ ಚಿತ್ರವನ್ನು ಆನೆಕಾರನಿಗೆ ಹೇಳಲು ಲಕ್ಷ್ಮಿಗೆ ನಾಚಿಕೆಯಾಯಿತು. ಆದುದರಿಂದ ಅವಳು ಹುಸಿಯೊಂದನ್ನು ಹೊಸೆದಳು.

ಅವರು ಆನೆ ಕಟ್ಟುವ ತಾಣಕ್ಕೆ ಬಂದರು. ಹಲಸಿನ ಮರದ ನೆರಳು ದಟ್ಟವಾಗಿ ಹರಡಿತ್ತು. ಕತ್ತಲಲ್ಲಿ ನಾಯಕನಿಗೆ ಆನೆಯ ಕಾಲಿಗೆ ಬಿಗಿಯುವ ಸಂಕಲೆ ಕಾಣಿಸಲಿಲ್ಲ. ಅವನು "ಪಾಪಾತಿ, ಲಾಂದ್ರವನ್ನೊಮ್ಮೆ ಇತ್ತಕೊಡಿ. ನಾನು ಸಂಕಲೆಯನ್ನು ಹುಡುಕುವೆನು" ಎಂದು ಹೇಳಿದ.

ಜೇನು ಕುರುಬರಿಗೆ ಅಥವಾ ತಣಿಯರಿಗೆ ಒಂದು ವಸ್ತುವನ್ನು ಕೊಡುವಾಗ ಕೈಚಾಚಿ ಕೊಡದೆ ನೆಲದ ಮೇಲಿರಿಸುವುದು ವೈನಾಡಿನ ನಾಯಮ್ಮಾರರಲ್ಲಿ ನಡೆದು ಬಂದ ರೂಢಿ. ಆದರೆ ಲಕ್ಷ್ಮಿ ಈ ಸಂಪ್ರದಾಯವನ್ನು ಮೀರಿ ಲಾಂದ್ರವನ್ನು ಕೈಚಾಚಿಕೊಟ್ಟಳು. ಅವಳ ಕೈಗೆ ನಾಯಕನ ಬೆರಳುಗಳು ಸೋಂಕಿದುವು. ಅವನ ಬಿಸಿಯುಸಿರು ಅವಳ ಮೈಗೆ ಬಡಿಯಿತು. ಆತನ ಮೈಯ ಬೆವರ ಕಂಪು ಆಕೆಯ ಮೂಗನ್ನು ಸೇರಿತು.

ಆಕೆಯ ಮೈಯಲ್ಲಿ ಯಾವುದೋ ಒಂದು ಬಗೆಯ ಅವಿದಿತ ಚೇತನ ಪ್ರವಹಿಸಿದಂತಾಯಿತು. ಮೈಯಲ್ಲಿ ಮುಳ್ಳುಗಳೆದ್ದುವು. ಎದೆ ಡಬಡಬನೆ ತುಡಿದುಕೊಳ್ಳತೊಡಗಿತು. ಆಕೆಗೆ ಅರಿಯದೆಯೇ ಉಸಿರಾಟದ ವೇಗ ಹೆಚ್ಚಿತು.

ನಾಯಕ ಶಂಕರನ ಹಿಂಗಾಲಿಗೆ ಸಂಕಲೆಯನ್ನು ಸಿಕ್ಕಿಸುತ್ತಾ ಆಕೆಯ ಕಡೆಗೆ ಕಣ್ಣು ಹೊರಳಿಸಿದ. ಲಕ್ಷ್ಮಿ ಅವನ ಕಣ್ಬೆಳಗನ್ನು ಇದಿರಿಸಲಾರದೆ ಮೋರೆಯನ್ನು ಬೇರೊಂದು ದಿಕ್ಕಿಗೆ ತಿರುಹಿದಳು.

ನಾಯಕ ಆನೆಯನ್ನು ಬಂಧಿಸಿ ಈಚೆ ಬಂದ. ಲಕ್ಷ್ಮಿ ಕೈಯಲ್ಲಿ ಲಾಂದ್ರವನ್ನೆತ್ತಿಕೊಂಡು, "ನಾಯಕ, ನೀನು ಇನ್ನು ಹೋಗಿ ಮಲಗಿಕೋ." ಎಂದು ಹೇಳಿ ಸರಸರನೆ ಹೆಜ್ಜೆಗಳನ್ನಿಡುತ್ತಾ ಹೋಗಿ ಮನೆಯೊಳಗೆ ನುಗ್ಗಿದಳು.

ಪಾಪಾತಿ ಬಹು ಬೇಗ ಹೊರಟು ಹೋದುದನ್ನು ಕಂಡು ನಾಯಕನಿಗೆ ಆಶ್ಚರ್ಯವಾಯಿತು.




ಲಕ್ಷ್ಮಿ ಹಾಸಿಗೆಯ ಮೇಲೆ ಹೊರಳಿದಳು. ಕಂಬಳಿಯನ್ನೆಳೆದು ಹೊದೆದುಕೊಂಡಳು. ಆದರೆ ಆಕೆಯ ಸನಿಹದಲ್ಲಿ ನಿದ್ದೆ ಸುಳಿಯಲೊಲ್ಲದು. ಅವಳ ಮನಸ್ಸು ಅಕಾರಣವಾಗಿ ಉದ್ವೇಗಕ್ಕೆ ಒಳಗಾಯಿತು. ಅವಳ ಚಿತ್ತ ಬುದ್ಧಿಯ ಕಡಿವಾಣದಿಂದ ತಪ್ಪಿಸಿಕೊಂಡು ಸಿಕ್ಕಿದೆಡೆಗಳಲ್ಲಿ ಅಲೆದಾಡಲಾರಂಭಿಸಿತು.

ನಾಯಕನ ಬೆರಳು ಸೋಂಕಿದೊಡನೆ ತನ್ನ ಮೈಯಲ್ಲೇಕೆ ವಿದ್ಯುತ್ಸಂಚಾರವಾಯಿತೆಂದು ಅವಳು ತನ್ನಲ್ಲಿಯೇ ಆಲೋಚಿಸಿದಳು. ಆಕೆಗೆ ಬಾಲ್ಯದಿಂದಲೇ ಅವನ ಪರಿಚಯವಿದೆ. ಆಕೆ ಲಂಗಕಟ್ಟಿಕೊಂಡು ಓಡಾಡುವ ಹುಡುಗಿಯಾಗಿದ್ದಾಗ ಅವನ ಸಂಗಡ ಚಿನ್ನಿಕೋಲು, ಚೆಂಡಾಟಗಳನ್ನು ಆಡಿದ್ದಾಳೆ. ಮರಹತ್ತಿ ಪೇರಳೆ ಮತ್ತು ನೇರಳೆ ಹಣ್ಣುಗಳನ್ನು ಕಿತ್ತುಕೊಡೆಂದು ಆತನನ್ನು ಕಾಡಿದ್ದಾಳೆ. ನಾಯಕನು ಮನೆಯ ಆಳೊಬ್ಬ ಎಂಬ ದೃಷ್ಟಿಯಿಂದ ಆಕೆ ಅವನನ್ನು ಕಾಣುತ್ತಿರಲಿಲ್ಲವೆಂಬುದು ನಿಜ. ಆದರೆ ಆ ಭಾವದಲ್ಲಿ ಸ್ನೇಹವಲ್ಲದೆ ಅದಕ್ಕಿಂತ ವಿಶೇಷವಾದುದೇನೂ ಇರಲಿಲ್ಲ.

ಆ ಸ್ನೇಹದ ಜತೆಯಲ್ಲಿ ಕರುಣೆ ಬೇರೆ ಬೆರೆತಿತ್ತು. ಏಕೆಂದರೆ ನಾಯಕನ ಅಪ್ಪ ಹಿಂದಿದ್ದ ಆನೆ ಶ್ರೀಕಂಠನ ಮಾವುತನಾಗಿದ್ದ. ಒಂದು ಸಲ ಮದವೇರಿದ ಶ್ರೀಕಂಠ ಕಟ್ಟಿಹಾಕಲು ಪ್ರಯತ್ನಿಸಿದ ಮಾದನನ್ನು ಕೊಂಬಿನಿಂದ ತಿವಿದು ಕೊಂದುಹಾಕಿಬಿಟ್ಟ. ಆಗ ನಾಯಕನಿಗೆ ಹತ್ತೋ

ಹನ್ನೆರಡೋ ವರ್ಷ ಪ್ರಾಯ. ಆಗಲೇ ಈ ಕುರುಬ ಹುಡುಗ ತಂದೆಯಿಂದ ಆನೆ ನಡೆಸುವ ವಿದ್ಯೆಯ ಮೊದಲಪಾಠಗಳನ್ನು ಕಲಿತಿದ್ದ.

ಮಾದನ ಮಡದಿಗೆ ಗಂಡ ಸತ್ತ ಕೆಲವು ತಿಂಗಳುಗಳಲ್ಲಿಯೇ ಬೇರೊಬ್ಬ ಕುರುಬ ದೊರೆತ. ಅವಳು ಮಗನನ್ನು ಪಾಪನ ತೊಡಿಯಲ್ಲಿ ಬಿಟ್ಟು ಆ ಕುರುಬನ ಬೆನ್ನ ಹಿಂದೆ ಓಡಿದಳು. ತಂದೆತಾಯಿಗಳನ್ನು ಕಳೆದುಕೊಂಡ ನಾಯಕನಿಗೆ ಪಾಪನ ತೊಡಿಯೇ ಆಸರೆಯಾಯಿತು. ಆನೆ ಸಾಕುವ ವಿದ್ಯೆ ಈ ಕುರುಬ ಹುಡುಗನಿಗೆ ತಂದೆಯಿಂದ ರಕ್ತಗತವಾಗಿ ಬಂದಿತ್ತು. ಮಾದನ ಅನಂತರ ಮಾವುತನಾಗಿ ಬಂದ ಶಂಗುಣ್ಣಿಯಿಂದ ನಾಯಕ ಮಾವುತತನವನ್ನು ಸಂಪೂರ್ಣವಾಗಿ ಕಲಿತು ಮೈಗೂಡಿಸಿಕೊಂಡ. ಈಗ ನಾಯಕ ಇಪ್ಪತ್ತು ವರ್ಷ ಪ್ರಾಯದ ತರುಣ. ಆದರೂ ಪಳಗಿದ ಆನೆಕಾರನಂತೆ ಶಂಕರನನ್ನು ಸಾಕಬಲ್ಲ; ಆತನಿಂದ ದುಡಿಸಬಲ್ಲ.

ಲಕ್ಷ್ಮಿಕ್ಕುಟ್ಟಿಯ ಮನಸ್ಸು ನಾಯಕನಿಂದ ಬೇರೊಂದು ವ್ಯಕ್ತಿಯ ಕಡೆಗೆ ಹರಿದಿತ್ತು. ಆತನೇ ಆಕೆಯ ಗಂಡ. ಅವಳಿಗೆ ಮದುವೆಯಾಗಿ ಮೂರು ವರ್ಷ ಕಳೆದಿತ್ತು. ಈ ಮೂರು ವರ್ಷಗಳಲ್ಲಿ ಅವಳು ಹತ್ತು ಹನ್ನೆರಡು ಸಲ ಗಂಡನನ್ನು ಭೇಟಿಯಾಗಿದ್ದಳು. ಅವಳ ಗಂಡನ ಹೆಸರು ರಾಮುಣ್ಣಿ ನಾಯರ. ಆತನೊಬ್ಬ ಪೋಲೀಸು ಇನ್ಸ್‌ಪೆಕ್ಟರನಾಗಿದ್ದ. ಆತನದು ತೋರ ದೇಹ. ಅವನ ತೋಳುಗಳು ಕಂಗು ಮರದಷ್ಟು ಗಾತ್ರವಾಗಿದ್ದವು. ಅವನ ಹುರಿಮೀಸೆ ಹೆಬ್ಬೆರಳು ಗಾತ್ರವಿತ್ತು.

ಈ ಗಂಡನನ್ನು ನೋಡಿದರೆ ಲಕ್ಷ್ಮಿಕ್ಕುಟ್ಟಿಗೆ ಭಯವಾಗುತಿತ್ತು. ಮಾವ ಆಕೆಯನ್ನು ಕೇಳಿ ಈ ಭೀಮಕಾಯನಿಗೆ ಮದುವೆ ಮಾಡಿಕೊಟ್ಟಿರಲಿಲ್ಲ. ಕುಲದ ಹಿರಿಯರ ಇಚ್ಛೆಯಂತೆ ಅವಳು ತನಗೆ ಇಷ್ಟವಿಲ್ಲದಿದರೂ ಈ ಪೋಲೀಸು ಇನ್ಸ್‌ಪೆಕ್ಟರನನ್ನು ಮದುವೆಯಾಗಬೇಕಾಗಿ ಬಂತು. ಆ ದೊಡ್ಡ ತರವಾಡಿನಲ್ಲಿ ಮಾವನೆಳೆದ ಗೆರೆಯನ್ನು ಯಾರೂ ದಾಟುವ ಹಾಗಿರಲಿಲ್ಲ. ಅತ್ತೆಯ ಸಲಹೆಯಂತೆ ಮಾವ, ರಾಮುಣ್ಣಿನಾಯರ ಒಳ್ಳೆಯ ಕುಲದಲ್ಲಿ ಹುಟ್ಟಿದಾತ; ಸರಕಾರೀ ಉದ್ಯೋಗ ಬೇರೆ ಇದೆ ಎಂದು ಹೇಳಿ ಸೊಸೆಯನ್ನು ಮದುವೆ ಮಾಡಿಕೊಟ್ಟಿದ್ದ.

ಪೊಡೆಮುರಿಯೆಂದು ಆಕೆ ಆ ಭೀಮಕಾಯನೊಡನೆ ಕಳೆದ ಇರು

ಳನ್ನು ನೆನಪಿಗೆ ತಂದು ಕೊಂಡಳು. ತನ್ನ ಗೆಳತಿಯರು ಆ ಇರುಳನ್ನು ಸೊಗಸು ನಲಿವುಗಳ ರಾತ್ರಿ ಎಂದು ಹೇಳುವುದನ್ನು ಅವಳು ಕೇಳಿದ್ದಳು. ಆದರೆ ಅದು ಅವಳ ಪಾಲಿಗೆ ಯಮಯಾತನೆಯ ರಾತ್ರಿಯಾಯಿತು. ಆ ಇರುಳು ಆಕೆಯಲ್ಲಿ ಪ್ರೇಮ, ವಿಶ್ವಾಸ ಮತ್ತು ಆಪತ್ತಿಗಳನ್ನು ಕುದುರಿಸುವುವರ ಬದಲು ಭಯ, ತಿರಸ್ಕಾರ ಮತ್ತು ಜಿಗುಪ್ಸೆಗಳನ್ನು ಪ್ರಚೋದಿಸಿತು. ಅಂದು ಹುಲಿಯ ಬಾಯಿಗೆ ಬಿದ್ದ ಚಿಗುರೆಯ ಸ್ಥಿತಿ ತನ್ನದಾಯಿತೆಂದು ಹುಲುಬಿದ್ದಳು. ಆದರೆ ಮನದ ಉಮ್ಮಳವನ್ನು ಯಾರೊಡನೆಯೂ ಹೇಳಿಕೊಳ್ಳುವ ಹಾಗಿರಲಿಲ್ಲ. ಅದು ಉಮಿಯೊಳಗಿನ ಬೆಂಕಿಯಂತೆ ಅವಳ ಅಂತರಂಗದಲ್ಲಿಯೇ ಉರಿದು ಅವಳ ಜೀವವನ್ನು ಉಸಿರುಗಟ್ಟಿಸುತಿದ್ದಿತು.

ಅದು ಮರುಮಕ್ಕತಾಯ ಕುಟುಂಬವಾದುದು ಲಕ್ಷ್ಮಿಯ ಪೂರ್ವ ಪುಣ್ಯವಾಗಿತ್ತು. ಅವಳು ಮಾವನ ಮನೆಯನ್ನು ತೊರೆದು ಗಂಡನ ಮನೆಗೆ ಹೋಗಿ ವಾಸಿಸಬೇಕಾದ ಪ್ರಸಂಗ ಬರಲಿಲ್ಲ. ಸೊಸೆ ತರವಾಡನ್ನು ಬಿಟ್ಟು ಹೋಗಲಾಗದು ಎಂಬುದು ಮಾವನ ನಿರ್ಧಾರ; ಆದುದರಿಂದಲೇ ಒಂದು ವರ್ಷದಲ್ಲಿ ನಾಲ್ಕು ಊರುಗಳಿಗೆ ವರ್ಗವಾಗುವ ಪೋಲೀಸು ಇನ್ಸ್‌ಪೆಕ್ಟರನನ್ನೇ ಆರಿಸಿ ಮದುವೆ ಮಾಡಿಕೊಟ್ಟದ್ದರೇನೋ ! ಎಲ್ಲಾದರೂ ತಾನು ಗಂಡನ ಮನೆಯಲ್ಲಿಯೇ ವಾಸಿಸಬೇಕಾದ ಪ್ರಸಂಗ ಬಂದಿದ್ದರೆ ಸರ್ಪನ ಹೆಡೆಯ ನೆರಳನ್ನು ಸೇರಿದ ಕಪ್ಪೆಯಂತಾಗುತಿದ್ದೆ ಎಂದು ಅವಳು ಅಂಜಿದ್ದಳು. ಗಂಡ ಎರಡು ಮೂರು ತಿಂಗಳಿಗೊಮ್ಮೆ ಮನೆಗೆ ಬರುತ್ತಾನೆ; ಎರಡು ಮೂರು ದಿನಗಳನ್ನು ಆಕೆಯೊಡನೆ ಕಳೆದು ಹೊರಟು ಹೋಗುತ್ತಾನೆ. ಆತನ ಹಿಂಸೆಯನ್ನು ಎರಡು ತಿಂಗಳಿಗೊಮ್ಮೆ ಅನುಭವಿಸಿದರೆ ಸಾಕಲ್ಲ ಎಂದು ಅವಳು ಸಮಾಧಾನ ತಳೆಯುತಿದ್ದಳು.

ಈಗ ಆರು ತಿಂಗಳ ಹಿಂದೆ ಮಾವನಿಗೂ ಈ ಪತಿದೇವನಿಗೂ ಒಂದು ಕಲಹ ನಡೆಯಿತು. ಕಲಹಕ್ಕೆ ಕಾರಣವೇನೆಂದು ಗಂಡನಾಗಲೀ ಮಾವನಾಗಲೀ ಲಕ್ಷ್ಮಿಗೆ ಹೇಳಲಿಲ್ಲ. ಆದರೂ ಅತ್ತೆ ಮಾವಂದಿರಾಡುವ ಮಾತುಗಳಿಂದ ಕಾರಣವೇನೆಂದು ಅವಳು ಊಹಿಸಿಕೊಂಡಳು. ಗಂಡ ಯಾವುದೋ ಒಂದು ಕೇಸಿನಲ್ಲಿ ಲಂಚ ತೆಗೆದುಕೊಂಡುದು ಮೇಲಿನ ಅಧಿಕಾರಿಗಳಿಗೆ ತಿಳಿದು ಬಂದು ದೊಡ್ಡ ರಂಪವೆದ್ದಿತಂತೆ. ರಾಮುಣ್ಣಿ

ನಾಯರ ಲಂಚದಿಂದೊಗಿದ ವಿಪತ್ತನ್ನು ಲಂಚದಿಂದಲೇ ಪರಿಹರಿಸಲು ನಿಶ್ಚಯಿಸಿದ. ಆದರೆ ಮೇಲಿನ ಅಧಿಕಾರಿಗಳ ಕಿಸೆ ತುಂಬಲು ಸಾಕಾಗು ವಷ್ಟು ಹಣ ಆತನಲ್ಲಿರಲಿಲ್ಲ. ಆದುದರಿಂದ ಅವನು ಲಕ್ಷ್ಮಿಯ ಮಾವ ನನ್ನು ಎರಡು ಸಾವಿರ ರೂಪಾಯಿಗಳನ್ನು ಕೊಡಿ ಎಂದು ಕೇಳಿದ. ಆದರೆ ಮಾವ, ತನ್ನ ರೊಕ್ಕದ ಸಂಚಿಯನ್ನು ಬಿಚ್ಚಲಿಲ್ಲ.

ಆ ಇರುಳು ಗಂಡನ ಆರ್ಭಟವೇನು! ಕೋಪಾಟೋಪವೇನು! ಆತ ಲಕ್ಷ್ಮಿಯನ್ನು ಸುಟ್ಟು ಬೂದಿ ಮಾಡಿ ಬಿಡುವಂತೆ ತನ್ನ ಕೆಂಗಣ್ಣು ಗಳಿಂದ ನೋಡಿದ. ಅವನು "ದೊಡ್ಡ ಕುಟುಂಬ; ಐನೂರು ಪೊದಿ ನೆಲ್ಲು ಗೇಣಿ ಬರುತ್ತದೆ. ಕಾಫಿ ಮತ್ತು ಮೆಣಸಿನ ತೋಟಗಳಿವೆ. ಆನೆ ಇದೆ. ಅನುಕೂಲವಂತರು; ನನ್ನ ಆಪತ್ಕಾಲದಲ್ಲಿ ನೆರವಿಗೆ ನಿಂತಾರು ಎಂದು ನಂಬಿ ನಿನ್ನ ಕೈ ಹಿಡಿದೆ. ಈಗ ನನ್ನ ಮಾನ ಹೋಗುವ ಪ್ರಸಂಗ ಬಂದರೂ ಎರಡು ಸಾವಿರ ರೂಪಾಯಿ ಬಿಚ್ಚಲು ಹಿಂದೆ ಮುಂದೆ ನೋಡುತ್ತಾರೆ. ನೀನಾದರೂ ಆ ನಿನ್ನ ಮಾವನಿಗೆ ಹೇಳು. ನೀನು ನಾಳೆಯ ದಿನದೊಳಗೆ ನನಗೆ ಎರಡು ಸಾವಿರ ರೂಪಾಯಿಗಳನ್ನು ಒದ ಗಿಸಿ ಕೊಡದಿದ್ದರೆ ಈ ಜನ್ಮದಲ್ಲಿ ನೀನು ನನ್ನ ಮೋರೆಯನ್ನು ನೋಡ ಲಾರೆ." ಎಂದು ಹೇಳಿದ.

ಕೋಪದಿಂದ ಕಪ್ಪೇರಿದ ಮೋರೆಯಲ್ಲಿ ಎದ್ದು ತೋರುತ್ತಿರುವ ನರ ಗಳು ಮತ್ತು ಕಿಡಿಕಾರುತ್ತಿರುವ ಕಣ್ಣುಗಳು ಇವುಗಳನ್ನು ನೋಡಿ ಲಕ್ಷ್ಮಿ ತಲ್ಲಣಿಸಿ ಹೋಗಿದ್ದಳು.

ಲಕ್ಷ್ಮಿ ಪತಿದೇವನ ಸಂದೇಶವನ್ನು ಮಾವನಿಗೆ ಅರುಹಿದಳು. ಆಕೆಯ ನುಡಿಗಳು ಕಿವಿಗೆ ಬಿದ್ದೊಡನೆಯೇ ಆ ಮಾವ ಇನ್ನೊಬ್ಬ ಕಾಲ ಭೈರವನಾದ. ಅವನು ಹುಬ್ಬುಗಂಟಿಕ್ಕಿ "ಛೀ! ಆ ಲಜ್ಜೆಗೇಡಿ ನನ್ನಿಂದ ಪಣ ಸುಲಿಯಲೆಂದು ಈಗ ಹೆಂಡತಿಯನ್ನು ಛೂ ಬಿಟ್ಟಿದ್ದಾನೆ! ಕುಲೀನ ಕುಟುಂಬ, ಬಿ. ಎ. ಓದಿದ್ದಾನೆ ಎಂದು ನಂಬಿ ನಾನು ಕುಲಸಂಪ್ರದಾಯ ವನ್ನು ಮೀರಿ ಸೊಸೆಯನ್ನು ಮದುವೆ ಮಾಡಿಕೊಟ್ಟೆ. ನಾಯಿ ಎಂಜ ಲೆಲೆಗೆ ನೆಗೆಯುವಂತೆ ಲಂಚಕ್ಕೆ ಕೈ ಚಾಚಿ ಹಲ್ಲು ಮುರಿಸಿಕೊಂಡ. ಈಗ ಅವನ ಮರ್ಯಾದೆ ಉಳಿಸಲು ನಾನು ದುಡ್ಡು ತೆರಬೇಕಂತೆ. ಲಂಚಕ್ಕೆ ಕೈ

ಯೊಡ್ಡುವವನು ನನ್ನ ಸೊಸೆಯ ಗಂಡನೇ ಅಲ್ಲ!'' ಎಂದು ಗುಡುಗುಡಿಸಿದ.

ಮಾವನ ಉತ್ತರವನ್ನು ಲಕ್ಷ್ಮಿ ನಡುಗುತ್ತಾ ಗಂಡನಿಗೆ ತಿಳಿಸಿದಳು. ಅವನು ಉರಿದು ಜ್ವಾಲಾಮುಖಿಯಾದ. ಅವನು ಅವಳನ್ನು ಬೂಟ್ಸ್ ಕಾಲಿನಿಂದ ಒದೆದು, ''ನನಗೆ ಈ ಜಿಪುಣರ ಸಹವಾಸವೇ ಬೇಡ! ಇನ್ನು ಮುಂದೆ ಈ ಮನೆಗೆ ನಾನು ಕಾಲಿಡಲಾರೆ! ಇನ್ನು ಮುಂದೆ ನಿನ್ನ ಹಾಳು ಮೋರೆಯನ್ನು ನೋಡಲಾರೆ!" ಎಂದು ಒದರಿದ,

ಮರುದಿನ ಮನೆಯನ್ನು ತೊರೆದು ಹೋದ ರಾಮುಣ್ಣಿನಾಯರ ಮರಳಿ ಲಕ್ಷ್ಮಿ, ಮಾವನ ಮನೆಯ ಕಡೆ ಸುಳಿಯಲಿಲ್ಲ.

ರಾಮುಣ್ಣಿನಾಯರ ಮುನಿಸು ತಾಳಿಕೊಂಡು ಹೋಗಿ ಒಂದು ತಿಂಗಳು ಕಳೆದ ಮೇಲೆ ಆತನಿಂದ ಒಂದು ಪತ್ರ ಬಂತು. ಅವನು ತಾನು ದಂಡಿಗೆ ಸೇರಿರುವೆನೆಂದೂ, ಇನ್ನು ಮುಂದೆ ಲಕ್ಷ್ಮಿಯ ಮೋರೆಯನ್ನು ನೋಡುವುದಿಲ್ಲವೆಂದೂ ಬರೆದು ಮಾವನನ್ನು ಬೇಕು ಬೇಕಾದಂತೆ ತೆಗಳಿದ. ಮಾವ, ''ನಮ್ಮ ತರವಾಡಿಗೆ ಅಂಟಿಕೊಂಡಿದ್ದ ಶನಿಯೊಂದು ತೊಲಗಿತೆ''ಂದು ಹೇಳಿ ಆ ಕಾಗದವನ್ನು ಹರಿದು ಹಾಕಿದರು, ಮೂರು ತಿಂಗಳು ಕಳೆದ ಮೇಲೆ ಈ ಪತಿದೇವನು ದಂಡಿನಲ್ಲಿ ಲೆಫ್ಟಿನೆಂಟೋ, ಕರ್ನಲ್ಲೋ ಆಗಿ ಮಲಯಕ್ಕೆ ತೆರಳಿರುವನೆಂಬ ಸುದ್ದಿ ಸಿಕ್ಕಿತು. ಈಗ ಮಲಯ ಜಪಾನಿಯರ ವಶವಾಗಿ ಹೋಗಿತ್ತು.

ಗಂಡ ತನ್ನಿಂದ ದೂರವಾದನು ಎಂದು ಲಕ್ಷ್ಮಿ ಮರುಗಲಿಲ್ಲ. ವಿರಹ ತಾಪದಿಂದ ಕಣ್ಣೀರು ಹಾಕಲಿಲ್ಲ. ತನ್ನನ್ನು ಕಾಡುತಿದ್ದ ಒಂದು ಪೀಡೆ ಕಳೆಯಿತೆಂದು ಅವಳ ಮನಸ್ಸು ಹಗುರವಾಯಿತು. ಅಂದಿನಿಂದ ಅವಳ ಪೈಕೈಗಳು ತುಂಬುತ್ತಾ ಬಂದುವು. ಅವಳಿಗೆ ತನ್ನ ಬಾಳುವೆಯಲ್ಲಿ ಗಂಡನೊಬ್ಬನ ಆವಶ್ಯಕತೆ ಇದೆ ಎಂದು ಅನಿಸಲಿಲ್ಲ.

ಲಕ್ಷ್ಮಿ ನಿಡುಸುಯ್ಯೊಂದನ್ನು ಹೊರಚೆಲ್ಲಿದಳು. ಪಕ್ಕದಲ್ಲಿ ಮಲಗಿದ ಚಿರುತೆ ಏನನ್ನೋ ಕನವರಿಸುತಿದ್ದಳು. ನಿದ್ದೆಯಲ್ಲಿ ದೇವತ್ತೆ ನರಳುವುದು ಅವಳಿಗೆ ಕೇಳಿಸಿತು. ಅಡುಗೆ ಮನೆಗೆ ಬಂದ ಇಲಿಯನ್ನು ಹಿಡಿಯುತಿದ ಬೆಕ್ಕು 'ಮಿಯಾಂವ್' ಎಂದು ಹೇಳುತಿತ್ತು. ಈ ದನಿಗಳೆಲ್ಲ

ಒಟ್ಟು ಸೇರಿಬಂದು ಲಕ್ಷ್ಮಿಯ ಆಲೋಚನೆಯನ್ನು ತುಂಡುಗೈದುವು.

ಅವಳ ಮನಸ್ಸಿನಲ್ಲಿ ಬೇರೊಂದು ಚಿತ್ರ ಗೋಚರಿಸಿತು. ಒಂದು ತಿಂಗಳು ಹಿಂದೆ ಮಾವನ ಮನೆಯಲ್ಲಿ ಉಳಿದುಕೊಳ್ಳಲೆಂದು ದೂರದ ನೆಂಟನಾದ ಕುಂಞಕಣ್ಣ ಮತ್ತು ಆತನ ಮಡದಿ ಭಾರ್ಗವಿ ಬಂದಿದ್ದರು. ಕುಂಞಕಣ್ಣನಿಗೆ ಇಪ್ಪತ್ತೈದು ವರ್ಷ ಪ್ರಾಯವಿರಬಹುದು. ಭಾರ್ಗವಿ ಯಂತೂ ಲಕ್ಷ್ಮಿಯ ಪ್ರಾಯದವಳೇ. ಅವಳು ಲಕ್ಷ್ಮಿಯ ಹಾಗೆ ತನ್ನ ಗಂಡನನ್ನು ನೋಡಿ ಹೆದರಿ ತಲ್ಲಣಗೊಳ್ಳುತ್ತಿರಲಿಲ್ಲ. ಅವಳು ಆತನ ಸಂಗಡ ನಕ್ಕು ನಲಿಯುತ್ತಾ ಮಾತಾಡುತಿದ್ದಳು. ಅವನೇನಾದರೂ ತಪ್ಪು ಮಾಡಿದರೆ ಚೇಷ್ಟೆ ಮಾಡುತಿದ್ದಳು; ಲೇವಡಿ ಎಬ್ಬಿಸುತಿದ್ದಳು; ಹುಸಿಮುನಿಸನ್ನು ತಾಳುತ್ತಿದ್ದಳು. ಕುಂಞಕಣ್ಣನಾದರೂ ತಾನು ಗಂಡ ನೆಂಬ ಗರ್ವ ಬಿಂಕಗಳನ್ನು ತೊರೆದು ಮಡದಿಯನ್ನು ಪ್ರೀತಿಸುತಿದ್ದ; ಕಾಡುತಿದ್ದ; ಬೇಡುತಿದ್ದ.

ಗಂಡ ಹೆಂಡಿರಲ್ಲಿರುವ ಈ ಅನ್ಯೋನ್ಯತೆಯನ್ನು ಕಂಡು ಲಕ್ಷ್ಮಿಗೆ ಆಶ್ಚರ್ಯವಾಯಿತು. ಅವಳು ಒಂದು ಸಲ ಭಾರ್ಗವಿಯೊಡನೆ, "ಅಲ್ಲ ಭಾರ್ಗವಿ, ನೀನು ಗಂಡನನ್ನು ಗದರಿಸುವಿಯಲ್ಲ ; ಅಣಕಿಸುವಿಯಲ್ಲ ! ಅವರು ಕೋಪಗೊಂಡು ಕೆರಳಿದರೆ ಏನು ಮಾಡುವೆ ? " ಎಂದು ಕೇಳಿ ದಳು.

"ಲಕ್ಷ್ಮಿ ! ಅವರಿಗೆ ನನ್ನ ಮೇಲೆ ಕೋಪ ತಾಳುವಷ್ಟು ಧೈರ್ಯ ಬರಬೇಕಲ್ಲ ! " ಭಾರ್ಗವಿ ಉತ್ತರಿಸಿದಳು : "ಗರುಡಮಂತ್ರವನ್ನು ಜಪಿಸಿದ ಮಂತ್ರವಾದಿಯ ಮುಂದೆ ಘಟಸರ್ಪ ಹೆಡೆಯನ್ನು ಮುದುಡಿ ಕೊಳ್ಳುವಂತೆ ಅವರ ಮುನಿಸು ನನ್ನ ಮುಂದೆ ಮುದುಡಿಕೊಳ್ಳುವದು ! "

ಭಾರ್ಗವಿಯ ಮಾತು ಕೇಳಿ ಲಕ್ಷ್ಮಿಯ ವಿಸ್ಮಯ ಹೆಚ್ಚಿತು. ಗಂಡ ನನ್ನು ವಶದಲ್ಲಿಟ್ಟುಕೊಳ್ಳಬಲ್ಲ ಗರುಡಮಂತ್ರವನ್ನು ತಾನು ಅರಿತಿದ್ದರೆ ತಾನು ರಾಮಣ್ಣೆಯನ್ನು ಅಂಕೆಯಲ್ಲಿ ಇಟ್ಟುಕೊಳ್ಳಬಹುದಿತ್ತು. ಎಂಬ ಕಿರು ಆಸೆ ಅವಳ ಅಂತರಂಗದಲ್ಲಿ ತೇಲಿತು.

ಅದೊಂದು ಹುಣ್ಣಿಮೆಯ ಸಂಜೆಯಂದು ಹೊಳೆಯಲ್ಲಿ ಸ್ನಾನ ಮಾಡಲೆಂದು ಕುಂಞ ಕಣ್ಣ ಮತ್ತು ಭಾರ್ಗವಿಯರು ಹೋಗಿದ್ದರು.

ಅವರು ಹೋದುದು ಲಕ್ಷ್ಮಿಗೆ ತಿಳಿಯದು. ಅಂದು ಸಂಜೆ ಮೇಯಲೆಂದು ಬಿಟ್ಟ ಕರುವೊಂದು ಹಟ್ಟಿಗೆ ಮರಳಿ ಬಂದಿರಲಿಲ್ಲ. ದೇವತ್ತೆಗೆ ಅದನ್ನು ಹಿತ್ತಲ ಬಾಳೆಯ ತೋಟದಲ್ಲಿ ಮನೆಯ ಮುಂದಿನ ಗದ್ದೆ ಬಯಲಿನಲ್ಲಿ ಹುಡುಕಿ ಹುಡುಕಿ ಸಾಕಾಯಿತು. ಅವಳು ಲಕ್ಷ್ಮಿಯನ್ನು ಕರೆದು "ಲಕ್ಷ್ಮೀ, ಬಿಳಿಯಪಟ್ಟಿ ಕರು ಕಾಣುವುದಿಲ್ಲ; ಅದನ್ನು ಅರಸಿ ಅರಸಿ ನನ್ನ ಕಣ್ಣು ಮತ್ತು ಕಾಲುಗಳು ನೊಂದು ಹೋದುವು. ಅದು ಮರಳಿ ಬಾರದಿದ್ದರೆ ಯಜಮಾನರು ನನ್ನ ಮೇಲೆ ರೇಗುವರು." ಎಂದು ತನ್ನ ಚಿಂತೆಯನ್ನು ತೋಡಿಕೊಂಡಳು.

"ಅತ್ತೆ, ನೀವು ಚಿಂತಿಸಬೇಡಿ; ನಾನು ಕರುವನ್ನು ಹುಡುಕಿ ತರುವೆನು." ಎಂದು ಹೇಳಿ ಮನೆಯಿಂದ ಹೊರಟಳು ಲಕ್ಷ್ಮಿ.

ಹೊಳೆಯ ದಂಡೆಯಲ್ಲಿ ಹಸಿರು ಹುಲ್ಲು ಸೊಗಸಾಗಿದೆ; ಅಲ್ಲಿ ಹುಲ್ಲನ್ನು ಮೇಯುತ್ತಾ ಕರು ಹಟ್ಟಿಗೆ ಬರಲು ಮರೆತಿರಬಹುದು ಎಂದು ಆಲೋಚಿಸಿದಳು ಲಕ್ಷ್ಮಿ. ಅವಳು ಹಾಗೆಯೇ ಹೊಳೆದಂಡೆಗೆ ಹೋದಳು. ಅವಳು ಪೊದೆಗಳ ಎಡೆಯಲ್ಲಿ ಕರುವನ್ನು ಅರಸುತ್ತಾ ಸ್ನಾನ ಮಾಡುವ ಕಡುವಿಗೆ ಬಂದಳು. ಅಲ್ಲಿ ಇಬ್ಬರು ಸ್ನಾನ ಮಾಡಲೆಂದು ಹೊಳಗೆ ದಿಳಿದಿರುವುದನ್ನು ಕಂಡಳು.

ಆಗ ಕತ್ತಲು ಹರಡತೊಡಗಿತ್ತು. ಬೆಳದಿಂಗಳು ಹೊಳೆಯ ನೀರ ಮೇಲೆ ಬಿದ್ದು ನದಿಯ ಎದೆಗೆ ಬೆಳ್ಳಿಯ ಬಣ್ಣವನ್ನು ಬಳಿಯುತಿದ್ದಿತು. ಬೇರೆ ಜನರು ಯಾರೂ ಕಡವಿನಲ್ಲಿರಲಿಲ್ಲ. ನದಿಯಲ್ಲಿ ಸ್ನಾನ ಮಾಡುತಿದ್ದವರು ಕುಂಞಿಕಣ್ಣ ಮತ್ತು ಭಾರ್ಗವಿಯರೆಂದು ಲಕ್ಷ್ಮಿಗೆ ತಿಳಿಯಿತು. ಈ ಕತ್ತಲಲ್ಲಿ ಗಂಡ ಹೆಂಡಿರೇಕೆ ಹೊಳೆಗೆ ಸ್ನಾನ ಮಾಡಲು ಹೋಗಿರುವರು; ಅಲ್ಲಿ ಅವರೇನು ಮಾಡುವರು ಎಂಬ ಕುತೂಹಲ ಆ ಹೆಣ್ಣಿನ ಮನಸ್ಸಿನಲ್ಲಿ ಕೆರಳಿತು. ಅವರು ತನ್ನ ಕಾಣದಿರಲಿ ಎಂದು ದಡದಲ್ಲಿ ಬೆಳೆದು ನಿಂತ ಮಾವಿನ ಮರದ ಮರೆಯಲ್ಲಿ ನಿಂತು ಅವಳು ಎವೆಯಿಕ್ಕದೆ ನಿಟ್ಟಿಸಿದಳು.

ನೀರಿಗಿಳಿದ ಗಂಡ ಹೆಂಡಿರಿಬ್ಬರೂ ಬೊಗಸೆಗಳಿಂದ ನೀರೆತ್ತಿ ಪರಸ್ಪರ ಎರಚಾಡ ತೊಡಗಿದರು. ಅವರಾಡುತಿದ್ದ ಮಾತುಗಳು ಗಾಳಿ

ಯಲ್ಲಿ ತೇಲಿ ಬಂದು ಲಕ್ಷ್ಮಿಯ ಕಿವಿಗಳಿಗೆ ಬಿದ್ದುವು. ಭಾರ್ಗವಿ "ನೀರೆಚುವದಲ್ಲಿ ನಾನು ನಿಮ್ಮನ್ನು ಸೋಲಿಸಿದರೆ ನೀವು ನನಗೇನು ಬಹುಮಾನ ಕೊಡುವಿರಿ ?" ಎಂದು ಕೇಳಿದಳು.

"ಏನನ್ನು ಕೊಡಬೇಕು ಹೇಳು ?"

"ನೀವು ಕೊಡುವುದನ್ನು ಹೇಳಿರಿ ನೋಡೋಣ."

"ಭಾರ್ಗವಿ, ನಾನು ಎರಡು ಮುತ್ತುಗಳನ್ನು ಕೊಡುವೆನು."

"ಅವು ಹೇಗಿದ್ದರೂ ನನಗೆ ದೊರೆಯುತ್ತವೆ; ಕೊಡದಿದ್ದರೆ ನಾನೇ ಕಸಿದುಕೊಳ್ಳುವೆನು !"

"ಭಾರ್ಗವಿ, ನಾನು ನಿನ್ನ ಸೋಲಿಸಿದರೆ ನೀನೇನು ಬಹುಮಾನ ಕೊಡುವೆ ?"

"ನನ್ನನ್ನೇ ಕೊಟ್ಟುಬಿಡುವೆನು !"

"ಬಲು ಜಾಣೆ. ನನ್ನನ್ನು ಮೋಸಗೊಳಿಸಲು ಹವಣಿಸುತ್ತಿರುವೆಯಲ್ಲ !"

"ಏಕೆ ?" ವಿಸ್ಮಯ ತುಂಬಿದ ದನಿಯಲ್ಲಿ ಕೇಳಿದಳು ಭಾರ್ಗವಿ.

"ಎರಡು ವರ್ಷಗಳ ಹಿಂದೆಯೇ ನಿನ್ನ ಕಾರಣವನು ನಿನ್ನ ನನಗೆ ಕೊಟ್ಟು ಬಿಟ್ಟಿದ್ದಾನೆ !"

ಇಬ್ಬರ ಕೊರಳುಗಳಿಂದ ಹೊರಟ ನಗುಗಳು ಅಲೆ ಅಲೆಯಾಗಿ ತೇಲಿ ಬಂದು ಲಕ್ಷ್ಮಿಯ ಕಿವಿಗಳನ್ನು ಸೇರಿದವು.

ಗಂಡಹೆಂಡಿರು ಪರಸ್ಪರ ರಭಸದಿಂದ ನೀರೆರಚಾಡಿದರು. ಇಬ್ಬರು ಇನ್ನೊಬ್ಬರಿಗೆ ಬಿಟ್ಟುಕೊಡುವ ಹಾಗಿರಲಿಲ್ಲ. ಇವರು ಎಷ್ಟು ಹೊತ್ತು ಸೆಣಗಾಡ ಬಲ್ಲರೆಂದು ಲಕ್ಷ್ಮಿಗೆ ಕಾತುರವಾಯಿತು. ಅವಳು ಎವೆಮಿಟುಕಿಸದೆ ನೀರಾಟವಾಡುವ ದಂಪತಿಗಳನ್ನೇ ನೋಡತೊಡಗಿದಳು. ಕೊನೆಗೆ ಭಾರ್ಗವಿಯ ಕೈ ಸೋಲುತ್ತಾ ಬಂತು. ಕುಂಞಕಣ್ಣ ಮಡದಿಯ ಎಡೆ ಮತ್ತು ಮೋರೆಗಳ ಮೇಲೆ ಗುರಿಯಿಟ್ಟು ನೀರು ಹಾರಿಸುತಿದ್ದ. ಕೊನೆಗೆ ಭಾರ್ಗವಿ ನಿಟ್ಟುಸಿರ್ಗರೆದು, "ನಾನೊಲ್ಲೆ. ನನ್ನ ಕೈಗಳು ಸೋತು ಸುಣ್ಣವಾದುವು !" ಎಂದು ಹೇಳಿ ನೀರೆರಚುವುದನ್ನು ನಿಲ್ಲಿಸಿದಳು.

ಕುಂಞಕಣ್ಣ ಸುಮ್ಮನಿರಲಿಲ್ಲ. ಅವನು ಭಾರ್ಗವಿಯ ಹತ್ತಿರ

ಸುಳಿದು ಎರಡು ತೋಳುಗಳನ್ನು ಚಾಚಿ ಆಕೆಯನ್ನು ತನ್ನ ಎದೆಗೆ ಅಪ್ಪಿಕೊಂಡ. ಆಕೆಯ ತುಂಗಕುಚಕೋರಕಗಳು ಅವನ ವಿಶಾಲ ವಕ್ಷದಲ್ಲಿ ಆಸರೆ ಪಡೆದುವು. ಭಾರ್ಗವಿ ಆಹ್ಲಾಹಭರಿತ ನಗುವೊಂದನ್ನು ಹೊರಚೆಲ್ಲಿ ಆತನ ತುಟಿಯ ಮೇಲೆ ತನ್ನ ತುಟಿಯನ್ನಿರಿಸಿ '' ಇಗೊಳ್ಳಿ! ನೀವು ಗೆದ್ದುವಕ್ಕೆ ಬಹುಮಾನ ಕೊಡುತ್ತೇನೆ! '' ಎಂದು ಉದ್ಗಾರವೆತ್ತುತ್ತಾ ಚುಂಬನದ ಮೆಚ್ಚನ್ನು ಕೊಟ್ಟಳು.

ಈ ನೋಟ ಮರದ ಮರೆಯಲ್ಲಿ ನಿಂತಿದ್ದ ಲಕ್ಷ್ಮಿಯ ವೈನವಿರೇಳಿಸಿತು. ಇದುವರೆಗೆ ತಾನು ನೋಡದಿದ್ದ ಒಂದು ಲೋಕ ಅವಳ ಕಣ್ಣ ಮುಂದೆ ಬಂದು ನಿಂತಂತಾಯಿತು. ದಾಂಪತ್ಯಜೀವನ ಇಷ್ಟೊಂದು ರಮಣೀಯವಾಗಿರಬಲ್ಲುದು; ಆಹ್ಲಾದಮಯವಾಗಿರಬಲ್ಲುದು ಎಂದು ಅವಳು ಎಣಿಸಿರಲಿಲ್ಲ.

ಅವಳ ಎದೆಯೊಳಗೆ ಕೂರಲಗನ್ನು ಹಾಕಿ ತಿರುಗಿಸಿದಂತಾಯಿತು. ತಾನು ಸುಖಮಯವಾದ, ಸೊಬಗಿನ ಆಗರವಾದ ಒಂದು ಬಾಳುವೆಯನ್ನು ಕಳೆದುಕೊಂಡೆನು; ನನ್ನ ಬಾಳು ನೀರು ನೆರಳುಗಳಿಲ್ಲದ ಬಂಜರು ನೆಲ ಎಂಬ ಬೋಧ ಅವಳ ಅಂತರಂಗದಲ್ಲಿ ಉದಿಸಿತು. ಅವಳಿಗೆ ಅಲ್ಲಿ ಮರದ ಮರೆಯಲ್ಲಿ ನಿಲ್ಲಲಾಗಲಿಲ್ಲ. ಅವಳು ನಿಡುಸುಯ್ಲೊಂದನ್ನು ಹೊರಚೆಲ್ಲಿ ತಲೆತಗ್ಗಿಸಿ ಮನೆಯ ಕಡೆ ಧಾವಿಸಿದಳು.

ಸ್ನಾನ ಮುಗಿಸಿ ಮಡಿ ವಸ್ತ್ರಗಳನ್ನು ತೊಟ್ಟುಕೊಂಡು ಬಂದು ಭಾರ್ಗವಿ ಕರೆದಾಗ ಲಕ್ಷ್ಮಿ ತನ್ನ ಕೋಣೆಯಲ್ಲಿ ಹಾಸಿಗೆಯ ಮೇಲೆ ಹೊರಳುತಿದ್ದಳು. ಅತ್ತು ಅತ್ತು ಅವಳ ಕಣ್ಣುಗಳು ಕೆಂಪಾಗಿದ್ದುವು. ಭಾರ್ಗವಿ ಬಂದು ಹಾಸಿಗೆಯಂಚಿನಲ್ಲಿ ಕುಳಿತು, '' ಲಕ್ಷ್ಮಿ, ಏಕೆ ಇಷ್ಟು ಬೇಗ ಮಲಗಿಕೊಂಡೆ? '' ಎಂದು ಕೇಳಿದಳು.

'' ಭಾರ್ಗವಿಯಕ್ಕ, ನನ್ನ ತಲೆ ಏಕೋ ವಿಪರೀತ ಸಿಡಿಯುತ್ತಿದೆ; ಸಹಿಸಲಾಗುವುದಿಲ್ಲ. ಹಾಗೆಯೇ ಹಾಸಿಗೆಯ ಮೇಲೆ ಹೊರಲಾಡಿದೆ. '' ಎಂದು ಸುಳ್ಳು ಹೇಳಿ ಲಕ್ಷ್ಮಿ ತನ್ನ ಅಂತರಂಗದ ಕುದಿತವನ್ನು ಗೆಳತಿಯಿಂದ ಮರೆಮಾಚಿದಳು.

೪

ಸೂರ್ಯನು ಉದಿಸಿ ಜಗತ್ತಿಗೆ ಹೊಸ ದಿನವೊಂದನ್ನು ನೀಡಿದ. ಹಗಲಿನ ಆರಂಭದೊಡನೆ ಮನೆಯ ಚಟುವಟಿಕೆಗಳೂ ಆರಂಭವಾದವು. ಲಕ್ಷ್ಮಿ ಎದ್ದು ಬಚ್ಚಲು ಮನೆಗೆ ಬೆಂಕಿ ಹಾಕಿ ಮಾವನ ಸ್ನಾನಕ್ಕೆ ನೀರು ಬಿಸಿ ಮಾಡಿದಳು. ಅವಳು ಬಿಸಿ ನೀರನ್ನು ಹದಗೊಳಿಸುತಿದ್ದಾಗ ತಂಗಿ ಚಿರುತೆ ಅಕ್ಕನ ಮೋರೆಯನ್ನು ನೋಡಿದಳು. ಲಕ್ಷ್ಮಿ, "ಇದೇನೇ ಚಿರುತೆ? ನೀನು ದೆವ್ವ ಬಡಿದವರ ಹಾಗೆ ನನ್ನನ್ನು ನೋಡುತ್ತಿರುವಿಯಲ್ಲ!" ಎಂದು ತಂಗಿಯನ್ನು ಕೇಳಿದಳು.

"ಅಕ್ಕ, ನಿನಗೇನಾಗಿದೆ?"

"ಏನೂ ಆಗಿಲ್ಲವಲ್ಲ; ನಾನು ಚೆನ್ನಾಗಿಯೇ ಇದ್ದೇನೆ."

"ನೋಡಕ್ಕ, ನಿನ್ನ ಕಣ್ಣುಗಳು ಕೇಪಳ ಹೂವಿನಂತೆ ಕೆಂಪಾಗಿವೆ. ಮೋರೆಯೋ ಸುಟ್ಟ ಹಪ್ಪಳವಾಗಿದೆ. ನೀನು ಎರಡು ದಿನ ಜ್ವರಬಂದು ಎದ್ದವರ ಹಾಗೆ ಕಾಣುಸುತ್ತೀಯೇ!"

ತಂಗಿಯ ಮಾತು ಕೇಳಿ ಲಕ್ಷ್ಮಿಗೆ ತುಸು ಆಶ್ಚರ್ಯವಾಯಿತು. ಅವಳು ಬೆಳಿಗ್ಗೆ ಎದ್ದು ಮೋರೆ ತೊಳೆದು ಕೊಂಡಾಗ ಮೇಲೆ ಕನ್ನಡಿಯಲ್ಲಿ ಮುಖ ನೋಡಿರಲಿಲ್ಲ. ಒಂದು ಇರುಳಿನ ನಿದ್ದೆಗೇಡು ಮತ್ತು ಚಿಂತೆಗಳು ತನ್ನ ಮೈಯಲ್ಲಿ ಇಷ್ಟೊಂದು ಮಾರ್ಪಾಡು ಎಸಗಬಲ್ಲವು ಎಂದು ಅವಳು ಊಹಿಸಿರಲಿಲ್ಲ. ಅವಳು "ಏನೋ ಸ್ವಲ್ಪ ತಲೆಸಿಡಿತ. ಇರುವಳು ನಿದ್ದೆಯೇ ಬರಲಿಲ್ಲ." ಎಂದು ಬೇಸರದ ದನೀಯಲ್ಲಿ ಉತ್ತರಿಸಿದಳು.

"ಅಕ್ಕ, ಮಲಯಕ್ಕೆ ಹೋದ ಆ ಭಾವನನ್ನು ನೆನೆಯುತ್ತಾ ಇದ್ದುದರಿಂದ ನಿನಗೆ ನಿದ್ದೆ ಬರಲಿಲ್ಲವೇನು? ನಿದ್ದೆಗೆಟ್ಟ ಮೇಲೆ ತಲೆನೋವು ಬಂದೇ ಬರುವುದು."

ಚಿರುತೆಯ ಅಣಕದ ಮಾತನ್ನು ಕೇಳಿ ಲಕ್ಷ್ಮಿಯ ಅಂತರಂಗದಲ್ಲಿ ಮುನಿಸು ಹೊಗೆಯಾಡಿತು. ಆದರೆ ತಂಗಿಯ ಪ್ರಾಯ ಇನ್ನೂ ಹನ್ನೆರಡರ ಮನೆಯನ್ನು ದಾಟಿರಲಿಲ್ಲ. ದಾಂಪತ್ಯಜೀವನದ ಜಟಿಲತೆ ಭೀಕರತೆಗಳು

ಆ ಎಳೆಯ ಬುದ್ಧಿಗೆ ನಿಲುಕವು. ಇತರರು ಅಕ್ಕನನ್ನು ಹಾಸ್ಯಮಾಡುವುದನ್ನು ಚಿರುತೆ ಕೇಳಿದ್ದಳು. ಅವರನ್ನು ಅನುಕರಿಸಿ ಈಗ ತಂಗಿ ತನ್ನ ಚೇಷ್ಟೆ ಮಾಡುತ್ತಿರುವಳು ಎಂದು ಅವಳು ಸಮಾಧಾನ ತಂದುಕೊಂಡಳು. ಅಕ್ಕ ಮಾತಾಡದೆ ಖಿನ್ನಳಾದುದನ್ನು ಕಂಡು ಚಿರುತೆ, "ಏನಕ್ಕ? ಸುಮ್ಮನಿರುವೆಯಲ್ಲ; ನನ್ನ ಮಾತಿನಿಂದ ಬೇಸರವಾಯಿತೆ?" ಎಂದು ಉಲಿದಳು.

"ನಿನ್ನ ಮಾತಿನಿಂದಲ್ಲ; ಬೇರೊಂದು ಸಂಗತಿಯಿಂದ ಬೇಸರ ಬಂತು."

"ಏನಕ್ಕ ಅದು? ಹೇಳು ನೋಡುವಾ."

"ನೋಡು ಆ ನಿನ್ನ ಭಾವ ನಿನ್ನ ಕೈ ಹಿಡಿಯುವ ಬದಲು ನನ್ನ ಕೈಹಿಡಿದನಲ್ಲಾ ಎಂದು!"

"ಭೇಷ್! ಬಹು ಸೊಗಸಾಗುತಿತ್ತು! ನೋಡು, ಭಾವ ಮಲಯದಿಂದ ಹಿಂದಿರುಗಿ ಬಂದ ಮೇಲೆ ನನ್ನನ್ನು ಮದುವೆ ಯಾಗಲು ನೀನೇ ಹೇಳಿ ಬಿಡು. ಭಾವನಂತಹ ಗಂಡ ಎಲ್ಲಿ ಸಿಕ್ಕಿಯಾನು ಎಂದು ನಾನು ಆಲೋಚಿಸುತಲಿದ್ದೆ."

"ಚಿರುತೆ, ಈ ಭಾವನಲ್ಲಿ ನಿನಗೇಕೆ ಇಷ್ಟೊಂದು ಆಸಕ್ತಿ?" ಲಕ್ಷ್ಮಿ ಚಿರಗುದನಿಯಲ್ಲಿ ಪ್ರಶ್ನಿಸಿದಳು.

"ನೋಡು, ನೀನು ಆ ಭಾವನ ಬೆರಳುಗಾತ್ರದ ಹುರಿ ಮೀಸೆ ಮತ್ತು ದೊಡ್ಡ ತೋಳುಗಳ ಉಪಯೋಗ ಮಾಡಿಕೊಳ್ಳಲೇ ಇಲ್ಲವಲ್ಲ ಎಂದು ನನ್ನ ಚಿಂತೆ."

"ಅವುಗಳಿಂದ ಏನು ಉಪಯೋಗ?"

"ನೋಡು. ನನಗೆ ಈ ಭಾವನಂತಹ ಗಂಡ ಸಿಕ್ಕಿದ್ದರೆ ಏನು ಮಾಡುತಿದ್ದೆ ಗೊತ್ತೇ?"

"ಹೇಳು ಮಹಾರಾಯತಿ ಈ ದ್ರಾವಿಡ ಪ್ರಾಣಾಯಾಮ ಬೇಡ!"

"ನೋಡು, ನಾನು ಎರಡು ಸಪೂರ ಬೆತ್ತಗಳನ್ನು ತಂದು ಆ ರಟ್ಟೆ ಗಾತ್ರದ ಮೀಸೆಯ ಎರಡು ತುದಿಗಳಿಗೆ ಕಟ್ಟುತಿದ್ದೆ. ಆ ಬೆತ್ತಗಳ ಕೆಳ ತುದಿಗೆ ಹಲಗೆ ಜೋಡಿಸಿ ಸೊಗಸಾಗಿ ಉಯ್ಯಾಲೆಯಾಡುತಿದ್ದೆ. ಆದುದರಿಂದ ತೋಳುಗಾತ್ರದ ಮೀಸೆಯುಳ್ಳ ಮಜಬೂತ ಗಂಡನೇ ಇರಬೇಕೆಂದು

ನನ್ನ ಆಸೆ!"

ತಂಗಿಯ ಹಾಸ್ಯವಚನವನ್ನು ಕೇಳಿ ಲಕ್ಷ್ಮಿಗೂ ನಗು ಬಂತು. ಅವಳ ಬೇಸರದ ಮಂಜು ನಗುವಿನ ಹೂಬಿಸಿಲಲ್ಲಿ ಕರಗಿ ನೀರಾಗಿ ಹೋಯಿತು.

"ಅಕ್ಕ, ಅದೆಂತಹ ಬೆನ್ನು ಆ ಭಾವನದು! ನಾವು ಬಟ್ಟೆ ಬರೆ ಒಗೆಯಬೇಕಾದರೆ ಹಾಸುಗಲ್ಲನ್ನು ಹುಡುಕುವುದೇ ಬೇಡ! ಬಟ್ಟೆಯನ್ನು ನೆನಸಿ ಸೋಪುಹಾಕಿ ಆ ದೊಡ್ಡ ಬೆನ್ನಮೇಲೆ ಬಡಿದರೆ ಆಯಿತು! ಅರೆ ವೆಯ ಕೊಳೆಯೆಲ್ಲ ಹೋಗಿ ಜಳಜಳ ಎನಿಸುವುದು."

"ಚಿರುತೆ, ನಿನಗೆ ಅಂತಹ ಮಜಭೂತ ಗಂಡನೇ ಬೇಕಾದರೆ ನಾನು ನನ್ನ ಗಂಡನನ್ನು ನಿನಗೆ ಬಿಟ್ಟುಕೊಡುವೆನು; ನೀನು ಆತನ ಮೀಸೆ ತುದಿಗಳಲ್ಲಿ ಉಯ್ಯಾಲೆಯಾಡಬಹುದು; ಬೆನ್ನಮೇಲೆ ಬಟ್ಟೆ ಬಡಿದು ಮಡಿ ಮಾಡಬಹುದು!"

"ಅಕ್ಕ, ಈ ಮಾತು ನಿಜವೇನು?" ಕುತೂಹಲ ಬೆರೆತ ಸ್ವರ ದಲ್ಲಿ ಕೇಳಿದಳು ಚಿರುತೆ.

ಆ ಎಳೆ ಹುಡುಗಿಯ ತಿಳಿಹೃದಯವನ್ನು ನೋಡಿ ಲಕ್ಷ್ಮಿಗೆ ಮರುಕ ಹುಟ್ಟಿತು. ಅದರ ಜತೆಗೆ ನಸು ಅಸೂಯೆಯೂ ಬೆರೆಯದಿರಲಿಲ್ಲ. ಅವಳು ದಾಂಪತ್ಯಜೀವನದ ವಿಷಮತೆಯ ವಿಷಗಾಳಿ ಸೋಂಕದ ತಿಳಿಹೃದಯ ತನಗೂ ಇರಬಾರದಿತ್ತೇ ಎಂದು ನೊಂದುಕೊಂಡಳು.

ಚಿರುತೆ ಮುಖ ತೊಳೆದು ಮುಗಿಸಿ ತನ್ನ ಕೆಲಸಕ್ಕೆ ಹೋದಳು. ಮನೆಯ ಕೆಲಸ ಬೊಗಸೆಗಳು ಲಕ್ಷ್ಮಿಯನ್ನು ಕಾದಿದ್ದುವು. ಅಡುಗೆ ಮನೆಯಿಂದ ಅತ್ತೆ, "ಲೇ ಲಕ್ಷ್ಮೀ, ಇಲ್ಲಿ ಬಾರೇ." ಎಂದು ಸೊಸೆ ಯನ್ನು ಕೂಗಿದಳು.

"ಏನತ್ತೆ?" ಲಕ್ಷ್ಮಿ ಅಡುಗೆ ಕೋಣೆಯೊಳಗೆ ನುಗ್ಗಿ ಕೇಳಿದಳು.

"ನಿನ್ನ ಮಾವನ ಮುದ್ದು ಅಳಿಯ ಆ ಆನೆಕಾರ ಇದ್ದಾನಲ್ಲ! ಅವನಿಗೆ ಒಂದಿಷ್ಟು ಪಿಂಡಹಾಕು!"

ಅತ್ತೆಗೆ ನಾಯಕನನ್ನು ಕಂಡರೆ ಆಗದು. ಮಾವ ಅವನನ್ನು ಸಲುಗೆ ಮತ್ತು ಪ್ರೀತಿಗಳಿಂದ ನಡೆಸಿಕೊಳ್ಳುವುದನ್ನು ಕಂಡು ಅವಳು

ಕಿಡಿಕಿಡಿಯಾಗುತ್ತಿದ್ದಳು. ಕುರುಬರ ಹುಡುಗನಿಗೆ ಇಷ್ಟೊಂದು ಸವರ ಕೊಟ್ಟರೆ ಹೇಗೆ ಎಂದು ಅವಳ ವಾದ. ಮನೆಯ ಮಕ್ಕಳು ಆನೆಕಾರನ ಜತೆಯಲ್ಲಿ ಆಟವಾಡುವುದು ಅವಳಿಗೆ ಇಷ್ಟವಾಗಿರಲಿಲ್ಲ. ಆದರೆ ಮನೆಯ ಒಳಗೂ ಹೊರಗೂ ಮಾವನದೇ ಸುಗ್ರೀವ ಶಾಸನ. ಯಾರೂ ಅವರ ಮಾತಿಗೆ ಎದಿರಾಡುವ ಹಾಗಿರಲಿಲ್ಲ; ಅಡ್ಡಿಬರುವ ಹಾಗಿರಲಿಲ್ಲ. ಆದುದರಿಂದಲೇ ಅತ್ತೆ ನಾಯಕನನ್ನು ಮನೆಯಿಂದೊಡಿಸುವ ಗೋಜಿಗೆ ಹೋಗದೆ ಅವನನ್ನು ಸೊಸೆಯಂದಿರ ಮುಂದೆ ಮಕ್ಕಳ ಮುಂದೆ, ಬೈಯುವುದರಲ್ಲಿ ತೃಪ್ತಿ ತಳೆಯುತ್ತಿದ್ದಳು.

ಲಕ್ಷ್ಮಿ ನಾಯಕನನ್ನು ಕೂಗಿ ಕರೆದಳು. ಅವನು ಕೈಯಲ್ಲಿ ತಟ್ಟೆ ಲೋಟಗಳನ್ನು ಹಿಡಿದುಕೊಂಡು ಹೊರಜಗಲಿಯಲ್ಲಿ ಸಿದ್ಧನಾದ.

ಲಕ್ಷ್ಮಿ ನಾಯಕನಿಗೆ ನಾಲ್ಕು ದೋಸೆಗಳನ್ನು ಬಡಿಸಿ ಒಂದು ಮುದ್ದೆ ಹುರುಳಿ ಚಟ್ನಿಯನ್ನು ಹಾಕಿದಳು. ಒಂದು ಗಿಂಡಿ ತುಂಬಾ ಬಿಸಿ ಕಾಫಿಯನ್ನು ಎರೆದು ಕೊಟ್ಟಳು. ನಾಯಕನ ಒಡಲು ದೊಡ್ಡದು. ಒಂದು ಸಲ ಕುಳಿತರೆ ಅಂಗೈ ಮಂದದ ಹನ್ನೆರಡು ಹದಿನೈದು ದೋಸೆಗಳನ್ನು ತಿಂದು ಬಿಡುತ್ತಿದ್ದ. ಒಂದು ದೊಡ್ಡ ಚೆಂಬು ಕಾಫಿಯನ್ನು ಗಟಗಟನೆ ಗಂಟಲುಕೆಳಗೆ ಇಳಿಸಿ ಬಿಡುತ್ತಿದ್ದ. ಅವನು ಈ ಪಾಟ ತಿನ್ನುವುದನ್ನು ಕಂಡು ಲಕ್ಷ್ಮಿಗೆ ಆಶ್ಚರ್ಯವಾಗುತ್ತಿತ್ತು. ಒಂದು ಸಲ ಅವಳು, "ನಾಯಕ, ನಿನ್ನದೇನು ಒಡಲೋ ಅಥವಾ ಕಡಿಕೆಯೋ?" ಎಂದು ಅವನನ್ನು ಪ್ರಶ್ನಿಸಿದ್ದಳು.

"ಏಕೆ ಪಾಪಾತಿ?"

"ಅಲ್ಲ. ನಮಗೆಲ್ಲ ಮೂರು ನಾಲ್ಕು ದೋಸೆಗಳನ್ನು ತಿನ್ನುವಾಗಲೇ ಒಡಲು ಬಿರಿದು ಹೋಗುತ್ತದೆ. ನೀನು ಒಂದು ಸಲ ಕುಳಿತರೆ ಹನ್ನೆರಡು, ಹದಿನ್ನೈದು ದೋಸೆಗಳನ್ನು ತಿಂದು ಬಿಡುವೆಯಲ್ಲ!"

"ನೋಡಿ ಪಾಪಾತಿ, ಮಳೆ ಬೆಳೆಗಳಿಲ್ಲದ ಅದು ಯಾವುದೋ ಒಂದು ಊರು ಬಹು ದೂರದಲ್ಲಿ ಇದೆಯಂತೆ. ಅಲ್ಲಿ ಬಹು ಸೋಜಿಗದ ಒಂದು ಪ್ರಾಣಿ ಇದೆಯಂತೆ. ಅದಕ್ಕೆ ಒಮ್ಮೆ ತಿನಸು ನೀರುಗಳನ್ನು ಕೊಟ್ಟರೆ ಮುಂದೆ ಹದಿನೈದು ದಿನಗಳವರೆಗೆ ಏನೂ ಆಹಾರ ಇಲ್ಲದೆ ಇರ

ಬಲ್ಲವಂತೆ. ನಾನು ಆ ಪ್ರಾಣಿಯ ಜಾತಿಗೆ ಸೇರಿದವನು. ಅದಕ್ಕೇನೋ ಒಂದು ಹೆಸರಿದೆ. ಅದು ನನಗೆ ಮರೆತು ಹೋಯಿತು."

"ಅದರ ಹೆಸರು ಒಂಟೆ." ಲಕ್ಷ್ಮಿ ಹೆಸರನ್ನು ನೆನಪು ಮಾಡಿ ಕೊಟ್ಟಳು.

"ಹೌದು. ಅದರ ಹೆಸರು ಒಂಟೆ. ನಾನು ಒಂಟೆಯ ಹಾಗೆ ಒಂದು ಸಲ ಗಡದ್ದಾಗಿ ತಿಂದರೆ ಮುಂದೆ ನಾಲ್ಕು ದಿವಸ ಊಟ ತಿಂಡಿಗಳೇನೂ ಇಲ್ಲದೆ ಇರಬಲ್ಲೆ. ಸ್ವಲ್ಪವೂ ದಣಿವಿಲ್ಲದೆ ದುಡಿಯ ಬಲ್ಲೆ. ನೀವು ನನ್ನ ಹಾಗೆ ಎರಡು ದಿನ ಉಪವಾಸವಿದ್ದು ಕೆಲಸ ಮಾಡಿ ನೋಡೋಣ. ಒಂದು ಹೊತ್ತು ಊಟ ಬಿಟ್ಟರೆ ನಿಮಗೆ ಕುಳಿತಲ್ಲಿಂದ ಏಳುವುದೇ ಕಷ್ಟವಾದೀತು."

ನಾಯಕನ ಮಾತಿನಲ್ಲಿ ಅತಿಶಯೋಕ್ತಿ ಏನೂ ಇರಲಿಲ್ಲ. ಅದು ಆತ್ಮ ಪ್ರಶಂಸೆಯಾಗಿರಲಿಲ್ಲ. ಬಕಾಸುರನಂತೆ ತಿನ್ನುವ ಆತ ಮೂರು ನಾಲ್ಕು ದಿನಗಳ ತನಕ ಆಹಾರವಿಲ್ಲದೆಯೂ ಇರಬಲ್ಲ. ಒಂದುಸಲ ಅಡವಿಯಲ್ಲಿ ಮೇಯಲೆಂದು ಬಿಟ್ಟ ಶಂಕರ ಹೆಣ್ಣಾನೆಯೊಂದನ್ನು ಕಂಡು ತಪ್ಪಿಸಿಕೊಂಡು ಹೋಗಿಬಿಟ್ಟ. ನಾಯಕ ಅಡವಿಯಲ್ಲಿ ಆನೆಯನ್ನು ಅರಸುತ್ತಾ, ಅರಸುತ್ತಾ ಪುದುಪಳ್ಳಿ ಮಲೆಯವರೆಗೆ ಹೋಗಿ ಆನೆಯನ್ನು ಅಟ್ಟಿಕೊಂಡು ಬಂದ. ಅವನು ಮರಳಿ ಪಾಪನ ತೊಡಿಯನ್ನು ಸೇರ ಬೇಕಾದರೆ ನಾಲ್ಕೋ ಐದೋ ದಿನಗಳಾಗಿದ್ದುವು. ಅಷ್ಟು ದಿನಗಳ ತನಕ ತೋಡು ತೊರೆಗಳ ನೀರೇ ಅವನ ಆಹಾರವಾಗಿತ್ತು.

ಲಕ್ಷ್ಮಿ ನಾಯಕನಿಗೆ ದೋಸೆ ಮತ್ತು ಚಟ್ನಿಗಳನ್ನು ಬಡಿಸಿದಳು. ಆದರೆ ಇಂದು ಅವನ ಮೋರೆಯನ್ನು ದೃಷ್ಟಿಸಿ ನೋಡಲು ಅವಳ ಮನಸ್ಸು ಅಳುಕುತಿತ್ತು. ನಾಯಕ ತಟ್ಟೆಯಿಂದ ಹಣ್ಣುಗಳನ್ನು ಮೇಲೆತ್ತಿ ಆಕೆಯ ಕಡೆಗೆ ದೃಷ್ಟಿ ಹೊರಳಿಸಿದಾಗ ಅವಳು ಕಣ್ಣುಗಳನ್ನು ಬೇರೊಂದು ದಿಕ್ಕಿಗೆ ಹೊರಳಿಸಿದಳು.

ಆನೆಕಾರರ ಕಾಫಿ ತಿಂಡಿಗಳ ಸಮಾರಾಧನೆಯನ್ನು ಮುಗಿಸುವ ಹೊತ್ತಿಗೆ ಮನೆಯ ಯಜಮಾನರು ಸ್ನಾನ, ಜಪ, ಪೂಜೆ ಮತ್ತು ಫಲಾ ಹಾರಗಳನ್ನು ತೀರಿಸಿಕೊಂಡು ಚಾವಡಿಗೆ ಬಂದರು. ಅವರು "ನಾಯಕಾ"

ಎಂದು ಆನೆಕಾರನನ್ನು ಕೂಗಿದರು. ಆ ಧ್ವನಿಯೇ, ಪಾಪ ತನ್ನ ಮೇಲೆ ರೇಗಿರುವನೆಂದು ನಾಯಕನಿಗೆ ಅರುಹಿತು; ವಿಪತ್ತೊಂದು ಆತನನ್ನು ಹಾದಿದೆ ಎಂದು ಸೂಚಿಸಿತು. ಅವನು ನಡುನಡುಗುತ್ತಾ ಹೋಗಿ ಪಾಪನ ಮುಂದೆ ನಿಂತ.

" ಹಟ್ಟಿಯ ಪಕ್ಕದಲ್ಲಿದ್ದ ನೇಂದ್ರ ಬಾಳೆಗಿಡಗಳು ಹೇಗೆ ಮುರಿದು ಬಿದ್ದುವು? " ಪಾಪ ಗುಡುಗಿದರು.

ನಾಯಕ ಉತ್ತರಿಸಲಿಲ್ಲ. ಪಾಪನ ಕೋಪಕ್ಕೆ ಮೌನವೇ ಮದ್ದೆಂದು ಅವನು ಅನುಭವದಿಂದ ತಿಳಿದಿದ್ದ.

"ನಾಯಕ, ಆನೆಯಿಂದ ಬಾಳೆಯನ್ನು ಹಾಳು ಮಾಡಿಸಿದೆ ಯೇನೋ? " .

ನಾಯಕ ಮಾರ್ನುಡಿಯಲಿಲ್ಲ.

"ಲೋ, ಹುಚ್ಚು ಮುಂಡೇದೆ! ಬೇಗ ಬೊಗುಳೋ. ಹೇಗೋ ಆನೆ ಬಾಳೆ ಮುರಿಯಿತು? "

" ಪಾಪನೇ, ಇರುಳು ಆನೆಯನ್ನು ಕಟ್ಟಿಹಾಕಲು ಮರೆತಿದ್ದೆ. "

" ಲೋ, ಬೆಪ್ಪೇ! ನೀನು ಇರುಳು ಕಳ್ಳು ಕುಡಿದಿದ್ದಿಯೋ? ಅಲ್ಲ ಭಂಗಿ ಮುಕ್ಕಿದ್ದಿಯೋ? "

"ಇಲ್ಲ ಪಾಪನೇ. ಇನ್ನು ಮುಂದೆ ಶಂಕರನನ್ನು ಕಟ್ಟಿ ಹಾಕಲು ಮರೆತು ಬಿಡುವುದಿಲ್ಲ. ''

'' ಎಂದೆಂದೂ ನಿನಗೆ ಮರವು ತಟ್ಟದ ಹಾಗೆ ಒಂದು ಮದ್ದು ಕೊಡುತ್ತೇನೆ! "

ಮಾತು ಮುಗಿಯುವುದರ ಜತೆಯಲ್ಲಿಯೇ ಪಾಪ ಸೂರಿಗೆ ಸೆಕ್ಕಿಸಿದ ಚಿತ್ತವನ್ನು ಎಳೆದು ನಾಯಕನ ಬೆನ್ನ ಮೇಲೆ ರಿಪರಿಪನೆ ಬಾರಿಸಿದರು. ನಾಯಕ ಬೆನ್ನ ಮೇಲೆ ಬೀಳುವ ಬಡಿತಗಳನ್ನು ತಡೆಯುವ ಗೋಜಿಗೆ ಹೋಗಲಿಲ್ಲ. ಹಾಗೆ ಪೆಟ್ಟುಗಳನ್ನು ತಡೆಯ ಹೋಗುವುದು ದೊಡ್ಡ ಪ್ರಮಾದ; ನಾಲ್ಕು ಬಡಿತಗಳ ಬದಲು ಹತ್ತು ಬಡಿತಗಳು ದೊರೆಯುವುವು ಎಂಬುದು ಅವನಿಗೆ ಅನುಭವವೇದ್ಯವಾಗಿತ್ತು. ಸುಮ್ಮನಿದ್ದರೆ ನಾಲ್ಕಾರು ಹೊಡೆತಗಳಲ್ಲಿಯೇ ಪಾಪನ ಮುನಿಸಿನ ಕಾವು ಆರಿ ಹೋಗು

ವುದು. ಅವರು ಮನಸ್ಸು ಶಾಂತವಾದ ಮೇಲೆ ಬೆತ್ತದ ಹೊಡೆತದ ಮೇಲೆ ಔದಾರ್ಯದ ಮದ್ದನ್ನು ಲೇಪಿಸುತ್ತಿದ್ದರು. ನಾಯಕನನ್ನು ಹೊಡೆದು ಸಿಟ್ಟು ತೀರಿಸಿಕೊಂಡ ಮೇಲೆ ಪಾಪ ಆತನಿಗೇ ದುಡ್ಡನ್ನೋ ವಸ್ತ್ರವನ್ನೋ ಕೊಡದೆ ಇರುತ್ತಿರಲಿಲ್ಲ. ಅದು ಅವರದೊಂದು ಅಭ್ಯಾಸ. ಕಳ್ಳು ಕುಡಿಯಬೇಕೆಂದು ಆಸೆಯಾದಾಗ ಪಾಪನನ್ನು ರೇಗಿಸಿ ನಾಲ್ಕು ಹೊಡೆತ ತಿಂದು ಕಳ್ಳಿಗಿರುವ ರೊಕ್ಕವನ್ನೇಕೆಗಳಿಸಬಾರದು ಎಂದು ನಾಯಕ ಆಲೋಚಿಸಿದುದೂ ಉಂಟು. ಆದರೆ ಅವನು ಈ ಆಲೋಚನೆಯನ್ನು ಈ ವರೆಗೆ ಕಾರ್ಯಗತ ಮಾಡಿರಲಿಲ್ಲ.

ಮಾವ ಆನೆಕಾರನನ್ನು ಬಡಿದುದನ್ನು ಲಕ್ಷ್ಮಿ ನೋಡಿದಳು. ಅವಳಿಗೆ ಅಯ್ಯೋ ಪಾಪ ಎನಿಸಿತು. ಆ ಹೊಡೆತ ತನ್ನ ಬೆನ್ನ ಮೇಲೆ ಬಿದ್ದಂತೆ ಅವಳ ಹೃದಯ ಕಂಪಿಸಿತು. ನಾಯಕನನ್ನು ಹೊಡೆದುದರಿಂದ ಮುರಿದು ಬಿದ್ದ ಬಾಳೆ ಎದ್ದು ನಿಲ್ಲಲಾರದು; ಮತ್ತೇಕೆ ಅವನನ್ನು ಹೊಡೆದು ನೋಯಿಸಬೇಕು; ಬಾಯಿಯಿಂದ ಗದರಿಸಿದರೆ ಸಾಲದೇ ಎಂದು ಅವಳು ಆಲೋಚಿಸಿದಳು.

"ನಾಯಕ, ನಿನಗೆ ತುಂಬಾ ನೋವಾಯಿತೇ?" ಲಕ್ಷ್ಮಿ ಪೆಟ್ಟು ತಿಂದು ಬಂದ ನಾಯಕನನ್ನು ಮರುಕ ತುಂಬಿದ ದನಿಯಲ್ಲಿ ಮಾತಾಡಿಸಿದಳು.

"ಪಾಪಾತಿ, ಬೆನ್ನಮೇಲೆ ಬೆತ್ತ ಕುಣಿದಾಗ ಯಾರಿಗೆ ತಾನೇ ನೋವಾಗುವುದಿಲ್ಲ?" ನೊಂದ ದನಿಯಲ್ಲಿ ಕುರುಬರ ಹುಡುಗ ಮಾರ್ನುಡಿದ: "ಜೀತದ ಆಳಾಗಿ ದುಡಿಯುವ ಕುರುಬ ಹುಡುಗನನ್ನು ಹೊಡಿದು, ಬಡಿದು ಕೊಂದರೆ ಕೇಳುವವರು ಯಾರಿದ್ದಾರೆ? ನನ್ನ ಮೈ ಹೊಡೆತಗಳನ್ನುಂಡುದಕ್ಕೆ ನೀವೇ ಹೊಣೆ!"

"ನಾನು ಹೊಣೆಯೇ?" ಸೋಜಿಗದ ದನಿಯನ್ನೆತ್ತಿದಳು ಲಕ್ಷ್ಮಿ.

"ನೀವು ಆ ಕೊಟ್ಟಿಗೆಯೊಳಗೆ ಹುಲ್ಲ ಬಣಜಿಯ ಎಡೆಯಲ್ಲಿ ಹಲಸಿನ ಕಾಯಿಗಳನ್ನು ತುಂಬಿರದಿದ್ದರೆ ಶಂಕರ ಅಲ್ಲಿಗೆ ಬರುತ್ತಲೂ ಇರಲಿಲ್ಲ; ಬಾಳೆಗಿಡ ಮುರಿಯುತ್ತಲೂ ಇರಲಿಲ್ಲ; ಪಾಪನ ಬೆತ್ತ ನನ್ನ ಬೆನ್ನ ಮೇಲೆ ಕುಣಿಯುತ್ತಲೂ ಇರಲಿಲ್ಲ!"

"ಸರಿ. ನಾನು ತಪ್ಪುಗಾರ್ತಿ ಎಂದು ಒಪ್ಪಿಕೊಂಡೆ. ನನ್ನ ತಪ್ಪಿಗೆ ನೀನು ಶಿಕ್ಷೆ ಮಾಡಿಬಿಡು." ಲಕ್ಷ್ಮಿ ನಗುತ್ತಾ ಉಲಿದಳು.

ಅವಳ ಮಾತು ಹುಡುಗನ ಮೋರೆಯ ಮೇಲೆ ತೋರುತ್ತಿದ್ದ ಮುನಿಸನ್ನು ಅಳಿಸಿತು. ಅವನ ಮೋರೆಯ ಮೇಲೆ ಈಗ ಎಳೆ ನಗೆಯ ಹೂಬಿಸಿಲು ಕಳೆಯಾಡಿತು. ಅವನು "ಪಾಪಾತಿ, ಎಂತಹ ಮಾತನ್ನಾಡುವಿರಿ? ಕುರುಬ ಹೈದ ನಾನು ನಿಮ್ಮ ಶಿಕ್ಷಿಸುವುದೇ? ನಾನು ಬೇಕಾದರೆ ನಿಮ್ಮ ಕಾಲ ಎಕ್ಕಡವಾದೇನು!" ಎಂದು ಮಾರ್ನುಡಿದ.

ಅಂದು ಅಡವಿಯಿಂದ ಮರ ಎಳೆದು ತರುವ ಕೆಲಸ ನಾಯಕನನ್ನು ಕಾದಿತ್ತು. ಆದುದರಿಂದ ಅವನು ಮರ ಎಳೆಯಲು ಶಂಕರನನ್ನು ಅರಣ್ಯಕ್ಕೆ ಒಯ್ಯಬೇಕಾಗಿತ್ತು. ಅವನು ಕೈಯಲ್ಲಿ ಅಂಕುಶ ಕತ್ತಿಗಳನ್ನು ಎತ್ತಿಕೊಂಡು ಹೊರಟ.

ಲಕ್ಷ್ಮಿ, "ಒಂದು ಕ್ಷಣ ನಿಲ್ಲು ನಾಯಕ. ಒಂದು ಹಿಡಿ ಎಲೆ ಕೊಡುವೆನು." ಎಂದು ಹೇಳಿ ಒಳಮನೆಗೆ ತೆರಳಿದಳು. ಅವಳು ಒಂದು ಹಿಡಿ ವೀಳ್ಯದೆಲೆ, ಒಂದು ಎಸಳು ಹೊಗೆ ಸೊಪ್ಪು ಮತ್ತು ಹತ್ತೆಂಟು ಚೂರು ಅಡಿಕೆಗಳನ್ನು ತಂದು ಕುರುಬ ಹುಡುಗನ ಕೈಗೆ ಹಾಕಿದಳು.

ನಾಯಕ ಕೃತಜ್ಞತೆ ತುಂಬಿದ ಕಣ್ಬೆಳಗನ್ನು ಪಾಪಾತಿಯ ಮೊಗದತ್ತ ಹರಡಿದ.



ಮಧ್ಯಾಹ್ನದ ವರೆಗೆ ಲಕ್ಷ್ಮಿಗೆ ಇತರ ಆಲೋಚನೆಗಳನ್ನು ಮಾಡಲು ಅವಕಾಶವಿಲ್ಲ. ಗದ್ದೆಗಳಲ್ಲಿ ದುಡಿಯುವ ಆಳುಕಾಳುಗಳಿಗೆ ಊಟದ ವ್ಯವಸ್ಥೆ ಮಾಡಬೇಕು. ಅವರಿಗೆ ಊಟ ಬಡಿಸಬೇಕು; ಕೆಲಸ ಮಾಡಿ ಬಂದ ಪಣಿಯರಿಗೆ ಬಲ್ಲಿಯನ್ನು ಅಳೆದುಕೊಡಬೇಕು. ಹೀಗೆ ಕೆಲಸ ಬೊಗಸೆಗಳು ಕೈ ತುಂಬಾ ಇದ್ದುದರಿಂದ ಆಕೆಗೆ ತಲೆ ಕೆರೆದುಕೊಳ್ಳಲು ಸಹ ಬಿಡುವು ದೊರೆಯುವುದು ವಿರಳ.

ಮಧ್ಯಾಹ್ನ ಕಳೆಯಿತೆಂದರೆ ಲಕ್ಷ್ಮಿಗೆ ಬಿಡುವು ದೊರಕುವುದು. ಮತ್ತೆ ಸಂಜೆಯವರೆಗೆ ವಿಶೇಷ ಕೆಲಸಗಳೇನೂ ಇರುವುದಿಲ್ಲ. ಅಂದು ಅವಳು ಮಧ್ಯಾಹ್ನದ ಊಟ ಮುಗಿಸಿದ ಮೇಲೆ ಮನೆಯ ಚಾವಡಿಯಲ್ಲಿ ಹಸೆಯನ್ನು ಹಾಸಿ ಮೆತ್ತನೆಯ ದಿಂಬಿಗೆ ಒರಗಿ ಕುಳಿತುಕೊಂಡಳು. ತಾನು ಅರೆವಾಸಿ ಓದಿ ಇರಿಸಿದ್ದ ಚೇರಮಾನ ಪೆರುಮಾಳನ್ನು ಕೈಯಲ್ಲಿ ಎತ್ತಿಕೊಂಡಳು. ದೇವತ್ತೆ ಮನೆಯ ಕೆಲಸ ಮುಗಿಸಿ ಬಂದು ಲಕ್ಷ್ಮಿಯಿಂದ ನಸು ದೂರದಲ್ಲಿ ಕುಳಿತು ಮೆಲ್ಲಲು ಎಲೆ ಅಡಿಕೆಗಳನ್ನು ಗುದ್ದುತಿದ್ದಳು. ಅತ್ತೆ ಒಳಮನೆಯಲ್ಲಿ ಮಲಗಿ ಸಣ್ಣ ನಿದ್ದೆ ತೆಗೆಯುತಿದ್ದಳು. ಮಾವ ಯಾವುದೋ ಒಂದು ಸಣ್ಣ ಕೇಸಿನ ಸಲುವಾಗಿ ಮಾನಂದವಾಡಿಗೆ ಹೋಗಿದ್ದರು. ಚಿರುತೆ ತೋಟದಲ್ಲಿ ಗುಮ್ಮಟಿ ಮತ್ತು ಕಿತ್ತಳೆ ಹಣ್ಣುಗಳು ಎಲ್ಲಿವೆ ಎಂದು ಅರಸಲು ಹೋಗಿದ್ದಳು.

ಲಕ್ಷ್ಮಿ ಹಾಳೆಯನ್ನು ಮುಗಚಿ ಓದಲಾರಂಭಿಸಿದಳು. ಆದರೆ ಇಂದು ಆ ಕಾದಂಬರಿಯನ್ನು ಓದಿ ಮುಗಿಸುವುದರಲ್ಲಿ ಆಕೆಗೆ ಉತ್ಸಾಹ ತೋರದು. ಮನಸ್ಸು ಕೈಯಲ್ಲಿ ಹಿಡಿದ ಪುಸ್ತಕವನ್ನು ತೊರೆದು ಬೇರೆಲ್ಲಿಯೋ ಸಂಚರಿಸುತಿದ್ದಿತು. ಅವಳ ಮನಸ್ಸಿನ ಮುಂದೆ ನಾಯಕನ ರೂಪ ನಾಲ್ಕೆಂಟು ಸಲ ಸುಳಿದು ಮಾಯವಾಯಿತು. ತಾನು ಕುಲೀನ ತರವಾಡಿನಲ್ಲಿ ಹುಟ್ಟಿ ಬೆಳೆದ ಹೆಣ್ಣು; ಕುರುಬ ಹುಡುಗನಲ್ಲಿ ಇಷ್ಟೊಂದು ಆಸಕ್ತಿಯನ್ನು ತೋರಿಸುವುದು ಅನುಚಿತ ಎಂದು ಅವಳು ತನ್ನಲ್ಲಿ ಹೇಳಿಕೊಂಡಳು. ಆದರೆ ಆಕೆಯ ಮನಸ್ಸು ಮಾತ್ರ ನಾಯಕನನ್ನು ಜಾನಿಸುವುದನ್ನು ನಿಲ್ಲಿಸಲಿಲ್ಲ.

ಒಂದು ವರ್ಷದ ಹಿಂದೆ ಮಾವನಿಗೆ ಕಾಹಿಲೆಯಾಗಿತ್ತು. ಅವರ ಮನೆಗೂ, ಹತ್ತಿರದ ಪೇಟೆ ಮಾನಂದವಾಡಿಗೂ ಎಂಟು ಮೈಲು ದೂರ. ಡಾಕ್ಟರರ ಅಥವಾ ಆಸ್ಪತ್ರೆಯ ಮೋರೆಯನ್ನು ನೋಡಬೇಕಾದರೆ ಮಾನಂದವಾಡಿಗೇ ಹೋಗಬೇಕು. ಎರಡು ದಿನಗಳ ಹಿಂದೆ ಮಾನಂದವಾಡಿಯಿಂದ ಡಾಕ್ಟರರು ಬಂದು ಮಾವನನ್ನು ಪರೀಕ್ಷಿಸಿ ಮದ್ದುಕೊಟ್ಟು ಹೋಗಿದ್ದರು. ಆದರೆ ಅವರು ಹೋದ ಎರಡು ದಿನಗಳಲ್ಲಿ ಮಾವನನ್ನು ಬಾಧಿಸಿದ ನಿಮೋನಿಯಾ ರೋಗ ಉಲ್ಬಣ ಸ್ಥಿತಿಗೆ ತಲುಪಿತು. ರಾತ್ರಿ

ಯಾಗಲು ಜ್ವರದ ತಾಪ ಹೆಚ್ಚಿತು. ಮಾವ ಹುಚ್ಚು ಹುಚ್ಚು ಮಾತಾಡ ತೊಡಗಿದರು. ಆಳುಗಳನ್ನು ಮಾನಂದವಾಡಿಗೆ ಡಾಕ್ಟರರನ್ನು ಕರೆ ತರಲು ಅಟ್ಟೋಣವೆಂದರೆ, ಆಳುಕಾಳು ಪಕ್ಕದ ಹಳ್ಳಿಯಲ್ಲಿ ನಡೆಯುವ ಜಾತ್ರೆಯನ್ನು ನೋಡಲೆಂದು ಹೋಗಿದ್ದರು. ತೊಡಿಯಲ್ಲಿ ನಾಯಕನಲ್ಲದೆ ಬೇರೆ ಯಾರೂ ಇರಲಿಲ್ಲ. ಮಾವನ ಸ್ಥಿತಿಯನ್ನು ನೋಡಿ ಅತ್ತೆ ಮತ್ತು ದೇವತ್ತೆ ಕೈಕಾಲು ಬಿಟ್ಟು ಕಣ್ಣೀರುಗರೆಯ ತೊಡಗಿದರು. ಅಂದು ಮನೆ ಯವರ ಪೈಕಿ ಸ್ವಲ್ಪ ಧೈರ್ಯದಿಂದ ಇದವಳೆಂದರೆ ಲಕ್ಷ್ಮಿಯೇ ಸರಿ. ಅವಳು ಧೈರ್ಯವನ್ನು ತಂದುಕೊಂಡು ಮಾವನಿಗೊದಗಿದ ವಿಪತ್ತನ್ನು ನಾಯಕನಿಗೆ ತಿಳಿಸಿದಳು.

"ಪಾಪಾತಿ, ನೀವೇನೂ ಚಿಂತಿಸಬೇಡಿ. ನಾನು ಮಾನಂದವಾಡಿಗೆ ಹೋಗಿ ಡಾಕ್ತರನ್ನ ಕರಕೊಂಡು ಬರುತೀನಿ." ಕುರುಬ ಹುಡುಗ ದಿಟ್ಟ ಸ್ವರದಲ್ಲಿ ಹೇಳಿದ.

"ನಾಯಕ, ಇರುಳು ಹೊತ್ತು; ಕಾಡು ದಾರಿ ಬೇರೆ. ನೀನು ಒಬ್ಬಂಟಿಗನಾಗಿ ಮಾನಂದವಾಡಿಗೆ ಹೋಗುವಿಯಾ?"

"ಪಾಪಾತಿ, ನಾನು ಕುರುಬ; ಮೀನಿಗೆ ನೀರಿದ್ದಂತೆ ಕುರುಬನಿಗೆ ಕಾಡು!" ನಾಯಕ ಧೀರ ಸ್ವರದಲ್ಲಿ ನುಡಿದ: "ನನಗೋಸುಗ ನೀವು ಭಯಪಡುವುದು ಬೇಡ. ನೀವು ಒಂದು ಚೀಟಿಯನ್ನು ಬರೆದುಕೊಡಿ. ಬೆಳಕು ಹರಿಯುವ ಮುನ್ನ ನಾನು ಡಾಕ್ತರನ್ನ ಕರೆದುಕೊಂಡು ಬರ ದಿದ್ದರೆ ನನ್ನ ಹೆಸರು ನಾಯಕನಲ್ಲ."

ಲಕ್ಷ್ಮಿ ಮಾವನ ಹೆಸರು ಹಾಕಿ ಡಾಕ್ಟರರಿಗೆ ಒಂದು ಕಾಗದವನ್ನು ಬರೆದುಕೊಟ್ಟಳು. ನಾಯಕ ಒಂದು ಲಾಂದ್ರ ಮತ್ತು ಒಂದು ಉದ್ದನ್ನ ಬಾಳನ್ನು ಹಿಡಿದುಕೊಂಡು ಆ ಇರುಳಲ್ಲಿ ಮಾನಂದವಾಡಿಗೆ ಹೊರಟೇ ಬಿಟ್ಟ.

ಈ ಇರುಳು ರಾಮು, ಕುಂಞಿಂಬು ಮತ್ತು ಚಿರುತೆ ಮಾತ್ರ ನಿದ್ರಿಸಿದರು. ಉಳಿದ ಮೂವರು ಹೆಂಗಸರು ಯಜಮಾನನ ಸುತ್ತ ಕುಳಿತು ನಿಮಿಷಗಳನ್ನು ಲೆಕ್ಕ ಮಾಡಿದರು. ಮಾವನ ಮೈಮೇಲೆ ನೆಲ್ಲು ಚೆಲ್ಲಿ ದರೆ ಅರಳಾಗುವ ಹಾಗೆ ಜ್ವರ ಇತ್ತು. ಅವರಿಗೆ ಮೈಮೇಲೆ ಪ್ರಜ್ಞೆ

ಇರಲಿಲ್ಲ. ಬಹು ಕಷ್ಟದಿಂದ ಉಸಿರಾಡುತಿದ್ದರು. ಹೆಂಗಸರು ನಾಯಕ ಯಾವಾಗ ಡಾಕ್ಟರರನ್ನು ಕರೆದುಕೊಂಡು ಬಂದಾನು ಎಂಬ ಉತ್ಸುಕತೆಯಿಂದ ಒಂದೊಂದು ನಿಮಿಷವನ್ನು ಒಂದೊಂದು ತಾಸೆಂದು ಭಾವಿಸಿಕೊಂಡು ರೋಗಿಯ ಹಾಸಿಗೆಯ ಸುತ್ತ ಕುಳಿತಿದ್ದರು.

ನಡುರಾತ್ರಿ ಕಳೆದಾಗ ಡಾಕ್ಟರರು ತಮ್ಮ ಕಾರಿನಲ್ಲಿ ಕುಳಿತು ಮನೆಗೆ ಬಂದರು. ಅವರ ಮೋರೆ ಗೋಚರಿಸಿದೊಡನೆ ಹೆಂಗಸರಿಗೆ ತಮ್ಮ ಎದೆಗಳ ಮೇಲಿಂದ ದೊಡ್ಡ ಬಂಡೆಗಳನ್ನು ಕೆಳಗೆ ಇಳಿಸಿದಂತಾಯಿತು. ಅವರು ಡಾಕ್ಟರರನ್ನು ನೇರಾಗಿ ರೋಗಿಯ ಕೋಣೆಗೆ ಕರೆದುಕೊಂಡು ಹೋದರು.

ರೋಗಿಯ ದೇಹವನ್ನು ಪರೀಕ್ಷೆ ಮಾಡಿನೋಡಿದ ಮೇಲೆ ಡಾಕ್ಟರರ ಮುಖ ಗಂಭೀರವಾಯಿತು. ಅವರು, " ಈ ಇರುಳೇ ನೀವು ಆಳನ್ನು ಕಳುಹಿಸಿದುದು ಲೇಸಾಯಿತು. ಬೆಳಕು ಹರಿಯುವವರೆಗೆ ನೀವು ಕಾದಿದ್ದರೆ ಪ್ರಮಾದವಾಗುತಿತ್ತು." ಎಂದು ನುಡಿದರು. ಅವರು ರೋಗಿಗೆ ಎರಡು ಇಂಜೆಕ್ಷನ್ನುಗಳನ್ನು ಕೊಟ್ಟರು. ಅವರು ರೋಗಿಯ ಎದೆಗೆ ಬಿಸಿ ಶಾಖವನ್ನು ಕೊಡಲು ಹೇಳಿದರು.

ಲಕ್ಷ್ಮಿ ನಾಯಕನನ್ನು ಮಾತಾಡಿಸಲೆಂದು ಹೋದಳು. ಅವನು ಎಡಗೈಯಿಂದ ಎಲೆಅಡಿಕೆ ಮತ್ತು ಹೊಗೆ ಸೊಪ್ಪಿನ ಚೂರುಗಳನ್ನು ಬಾಯೊಳಗೆ ಹಾಕಿಕೊಂಡು ಹೊರ ಜಗಲಿಯ ಮೇಲೆ ಕುಳಿತಿದ್ದ. ಅವನು ತನ್ನ ಬಲದೋಳಿಗೆ ಬಿಳಿಯ ಅರಿವೆ ಸುತ್ತಿಕೊಂಡುದನ್ನು ಅವಳು ಕಂಡಳು. ಆದರೆ ಅದೇಕೆ ಎಂದು ಅವಳಿಗೆ ಅರಿವಾಗಲಿಲ್ಲ. ಅವಳು ವಿಸ್ಮಯದಿಂದ " ನಾಯಕ, ಕೈಗೇಕೆ ಬಟ್ಟೆಯನ್ನು ಸುತ್ತಿಕೊಂಡಿರುವೆ ? " ಎಂದು ಕೇಳಿದಳು.

" ಪಾಪಾತಿ, ದಾರಿಯಲ್ಲಿ ಅದೊಂದು ದೊಡ್ಡ ಕತೆ ನಡೆದು ಹೋಯಿತು ! " ಕುರುಬ ಹುಡುಗನ ತುಟಿಯ ಮೇಲೆ ನೋವು ಬೆರೆತ ಕಿರುನಗುವೊಂದು ಮಿನುಗಿತು. " ನಾನು ನಿಮ್ಮ ಮುಂದೆ ಕೊಚ್ಚಿಕೊಂಡ ಹಾಗೆ ಡಾಕ್ಟರ ಪಾಪನ್ನ ಕರೆದುಕೊಂಡು ಬರಲು ಆಗುವುದೋ, ಇಲ್ಲವೋ ಎಂದು ಹೆದರಿದ್ದೆ. "

" ನಾಯಕ, ದಾರಿಯಲ್ಲಿ ಏನಾಯಿತು ? "

" ದಾರಿಯಲ್ಲಿ ಹೋಗುತಿದ್ದಾಗ ಒಂದು ಹಳ್ಳ ಸಿಕ್ಕಿತು. ಕತ್ತಲಲ್ಲಿ ಕಾಣಿಸಲಿಲ್ಲ. ಮುಗ್ಗುರಿಸಿ ಬಿದ್ದೆ. ಲಾಂದ್ರದ ಚಿಮಣಿ ಒಡೆದು ಹೋಗಿ ಬೆಳಕು ನಂದಿತು. ನಾನು ಆ ಯಮಕತ್ತಲೆಯಲ್ಲಿಯೇ ಮುಂದೆ ಸಾಗಿದೆ."

" ಬಿದ್ದಾಗ ನಿನಗೇನಾದರೂ ಪೆಟ್ಟಾಯಿತೇ ? "

" ಪೆಟ್ಟಾಗಿದ್ದರೆ ಲೇಸಾಗುತಿತ್ತು ; ಅದಕ್ಕಿಂತಲೂ ದೊಡ್ಡ ಗಂಡಾಂತರ ಇದಿರು ಬಂತು. "

" ಏನದು ? " ಉತ್ಸುಕತೆಯಿಂದ ಕೇಳಿದಳು ಲಕ್ಷ್ಮಿ.

" ದಾರಿಯಲ್ಲಿ ಕರಡಿ ಸಿಕ್ಕಿತು ! "

" ಅಬ್ಬಾ ! ಕರಡಿಯೇ ? ನಿನಗೇನು ಅಪಾಯವಾಗಿಲ್ಲ ತಾನೇ ! "

" ಪಾಪನ ಕೂಳಿನ ಋಣ ಇನ್ನೂ ಕೆಲವು ಸಮಯದ ವರೆಗೆ ಉಳಿದಿದೆ. ಆದುದರಿಂದ ಜೀವ ಉಳಿಸಿಕೊಂಡು ಬಂದೆ. "

" ಎಲ್ಲಾ ಸ್ವಲ್ಪ ಬಿಡಿಸಿ ಹೇಳು ನೋಡೋಣ. "

" ಪಾಪಾತಿ, ನೋಡಿ. ದಾರಿಯ ಒಂದು ತಿರುಗಿನಲ್ಲಿ ಕರಡಿ ಅಡ್ಡ ಬಂತು. ಅದು ಬಂದುದು ಕತ್ತಲಲ್ಲಿ; ನನಗೆ ತಿಳಿಯಲೇ ಇಲ್ಲ. ಅದು ನನ್ನ ಸಿಂಡು ಹಿಡಿದು ನನ್ನ ಮೇಲೇರಿ ಬಂತು. ಏನು ಮಾಡುವುದೆಂದು ನನಗೆ ಉಪಾಯವೇ ತೋಚಲಿಲ್ಲ. ದಾರಿಯ ಪಕ್ಕದಲ್ಲೊಂದು ಮರ ಕಂಡಿತು. ನಾನು ಮುಗ್ಗುರಿಸುತ್ತಾ ಓಡಿ ಹೋಗಿ ಆ ಮರವನ್ನು ಹತ್ತಿ ಬಿಟ್ಟೆ. ಆದರೆ ಅದು ಮುಳ್ಳು ಹಂಗಾರೆಯ ಮರ. ನಾನು ಮರ ಏರಿದಾಗ ಕೈತೋಳು ಕಾಲುತೊಡೆಗಳ ಚರ್ಮ ಕಿತ್ತುಹೋಯಿತು. ಮುಳ್ಳು ಹಂಗಾರೆಯೆಂದು ತಿಳಿದಾಗ ಬಾಳಿನಿಂದ ತೊಗಟೆಯನ್ನು ಸವರಿ ಹೇಗೋ ಮೇಲೇರಿ ಒಂದು ಕವಲ್ಲೊಂಚೆಯ ಮೇಲೆ ಹತ್ತಿ ಕುಳಿತೆ. ನಾನು ಮರವೇರಿದುದು ಕರಡಿಗೆ ತಿಳಿಯಿತು. ಅದು ನನ್ನ ಮೆದುಳನ್ನು ತಿಂದೇ ತೀರಬೇಕೆಂಬ ಹಟತೊಟ್ಟಿತು. ಅದು ಮರವನ್ನೇರಿ ಬರತೊಡಗಿತು. ಹೆದರಿಕೆಯಿಂದ ನನ್ನ ಕೈಕಾಲುಗಳು ನಡುಗಿದುವು. ತಲೆ ತಿರುಗಿ ಕೆಳಗೆ ಉರುಳಿ ಬೀಳುವಂತಾಯಿತು. ನಾನು ಅಜ್ಜನನ್ನು ನೆನೆದೆ; ಬೆಳ್ಳೂರು ಕಾವು ಅಮ್ಮನಿಗೆ ಹರಕೆ ಹೊತ್ತೆ ; ಚೌಂಡಿಗೆ ಕೋಳಿ ಬಲಿಕೊಡುವೆನೆಂದು ಹೇಳಿದೆ. ಕೊನೆಗೆ ಧೈರ್ಯತಾಳಿ ನನ್ನ ಕೈಯ ಬಾಳನ್ನೆತ್ತಿ

ಕರಡಿಯ ಮೂತಿಯ ಮೇಲೆ ಒಂದು ಪೆಟ್ಟು ಹಾಕಿದೆ. ಅದು ಭಯಂಕರ ದನಿಯಲ್ಲಿ, ಕಾಡೆಲ್ಲ ನಡುಗಿ ಹೋಗುವಂತೆ, ಕಿರುಚಿತು. ನಾನು ಎರಡನೆಯ ಸಲ ಬಾಳನ್ನೆತ್ತಿ ಅದರ ಮುಂಗೈಗೆ ಹೊಡೆದೆ. ಕರಡಿಯ ಮುಂಗೈ ತುಂಡಾಗಿ ಕೆಳಗೆ ಬಿತ್ತು. ಅದು ಅರಚುತ್ತಾ ಮರದಿಂದ ಕೆಳಗುರುಳಿತು. ಅದಕ್ಕೆ ತುಂಬಾ ದಿಗಿಲಾಯಿತೆಂದು ತೋರುವುದು. ಅದು ಮರಳಿ ಮರವನ್ನೇರಿ ನನ್ನ ಮೇಲೆ ಕೈಮಾಡಲು ಪ್ರಯತ್ನಿಸದೆ ಕಿರುಚುತ್ತಾ ಅಡವಿಯೊಳಗೆ ನುಸುಳಿತು. ಅದರ ಸದ್ದು ಅಡಗುವವರೆಗೆ ಆ ಹಂಗಾರೆ ಮರದ ಮಧ್ಯದಲ್ಲಿ ಮುಳ್ಳುಗಳಿಂದ ಮೈ ಚುಚ್ಚಿಸಿಕೊಳ್ಳುತ್ತಾ ಕುಳಿತಿದ್ದೆ. ಅದು ಹೋಗಿ ಬಹಳ ಹೊತ್ತಾದ ಮೇಲೆ ನಾನು ಮೆಲ್ಲನೆ ಮರದಿಂದಿಳಿದೆ. ನಾನು ನಡೆತವನ್ನು ಮುಂದುವರಿಸಿದೆ. ಮುಳ್ಳು ನಾಟಿ ನನ್ನ ಬಲಗೈಯ ಚರ್ಮ ಸುಲಿದು ಹೋಗಿದೆ. ಈ ಡಾಕ್ಟರ ಪಾಪ ಕೈಗೆ ನಾಟಿದ ಮುಳ್ಳುಗಳನ್ನೆಲ್ಲಾ ಕಿತ್ತು ತೆಗೆದು ಗಾಯಕ್ಕೆ ಉರಿಯುವ ಮದ್ದೊಂದನ್ನು ಹಚ್ಚಿದರು. ಗಾಯಕ್ಕೆ ಬಿಳಿ ಹತ್ತಿಯನ್ನಿರಿಸಿ ಬಟ್ಟೆ ಸುತ್ತಿದರು. ಅಲ್ಲದೆ ನನ್ನ ಎಡತೋಳಿಗೆ ಏನೋ ಒಂದು ಮದ್ದನ್ನು ಸೂಜಿಯಿಂದ ಚುಚ್ಚಿ ಇಳಿಸಿದ್ದಾರೆ. ದಾರಿಯಲ್ಲಿ ಈ ರದ್ಧಾಂತ ಆಗದಿದ್ದರೆ ಎರಡು ತಾಸು ಮೊದಲೇ ಡಾಕ್ಟರ ಪಾಪನ್ನ ತೊಡಿಗೆ ಕರೆದುಕೊಂಡು ಬರುತಿದ್ದೆ.'' ಎಂದು ನಾಯಕ ತನ್ನ ಸಾಹಸದ ಕತೆಯನ್ನು ಪಾಪಾತಿಗೆ ಹೇಳಿ ಮುಗಿಸಿದ.

ಇಪ್ಪತ್ತು ವರುಷ ಪ್ರಾಯದ ಕುರುಬರ ಹುಡುಗ ಕೆಚ್ಚಿನಿಂದ ಕರಡಿಯೊಡನೆ ಹೋರಾಡಿದ ಕತೆಯನ್ನು ಕೇಳಿ ಲಕ್ಷ್ಮಿ ಆಶ್ಚರ್ಯಪರವಶಳಾದಳು. ಅವಳ ಕಣ್ಣುಗಳಲ್ಲಿ ಕೃತಜ್ಞತೆ ತುಂಬಿ ಬಂತು. ಅವನು ಅಂದು ಇರುಳು ಊಟ ಸಹ ಮಾಡದೆ ಮಾನಂದವಾಡಿಗೆ ಓಡಿದುದು ಅವಳಿಗೆ ನೆನಪಾಯಿತು. ಅವಳ ಮನಸ್ಸಿನಲ್ಲಿ, ''ಅಯ್ಯೋ ಪಾಪ! ಹುಡುಗ ಊಟ ಸಹ ಮಾಡಿಕೊಂಡು ಹೋಗಿಲ್ಲ; ಹಸಿದು ಕಂಗಾಲಾಗಿರಬಹುದು.'' ಎಂಬ ಮರುಕ ಹುಟ್ಟಿತು. ಅವಳು ''ನಾಯಕ, ತಟ್ಟೆ ತೆಗೆದುಗೂಂಡು ಬಾ. ಊಟ ಬಡಿಸುತ್ತೇನೆ.'' ಎಂದು ಕರೆದಳು.

''ಪಾಪಾತಿ, ನನಗೆ ಊಟವೇನೂ ಬೇಡ. ಒಂದಿಷ್ಟು ಬಿಸಿ ಬಿಸಿ

ಕಾಫಿಯನ್ನು ಕೊಟ್ಟರೆ ಸಾಕು" ನಾಯಕ ಮಾರ್ನುಡಿದ.

ಡಾಕ್ಟರರಿಗೋಸ್ಕರ ತಯಾರಿಸಿದ ದಿವ್ಯ ಕಾಫಿಯಲ್ಲಿ ಒಂದು ಪಾಲನ್ನು ಲಕ್ಷ್ಮಿ ನಾಯಕನಿಗೆ ಕೊಡಲು ಮರೆಯಲಿಲ್ಲ.

ಮರುದಿನ ಬೆಳಕು ಹರಿಯುವ ತನಕ ಡಾಕ್ಟರರು ಮನೆಯಲ್ಲೇ ಉಳಿದರು. ಮೊದಲನೆಯ ಜಾವದ ಕೋಳಿ ಕೂಗಿದಾಗ ಮಾವನ ಮೈಯ ಜ್ವರ ಇಳಿಮುಖವಾಯಿತು. ಬೆಳಗಾದಾಗ ಅವರಿಗೆ ಪ್ರಜ್ಞೆ ಬಂತು. ಮನೆಯ ಯಜಮಾನನಿಗೆ ಒದಗಿದ ಕಂಟಕ ಕಳೆಯಿತೆಂದು ಮನೆಯ ಹೆಂಗಸರು ಅರಿತರು. ಅವರು ಗುಂಪುಕಟ್ಟಿಕೊಂಡು ಯಜಮಾನನ ಜೀವ ಉಳಿಸಿದುದಕ್ಕೆ ಡಾಕ್ಟರರಿಗೆ ಕೃತಜ್ಞತೆಯನ್ನು ಸೂಚಿಸಿದರು.

"ನಿಮ್ಮ ಯಜಮಾನರ ಪ್ರಾಣವನ್ನು ಉಳಿಸಿದವನು ನಾನಲ್ಲ." ಡಾಕ್ಟರರು ಮಾರ್ನುಡಿದರು: "ನೀವು ಕಳುಹಿದ ಕುರುಬರ ಹುಡುಗ ಅವರ ಪ್ರಾಣವನ್ನು ಉಳಿಸಿದ್ದಾನೆ. ಅವನು ಬರಲು ಎರಡು ಮೂರು ತಾಸು ತಡವಾಗಿದ್ದರೆ ಅಥವಾ ದಾರಿಯಲ್ಲಿ ಸಿಕ್ಕಿದ ಕರಡಿಗಂಜಿ ಅವನು ಹಿಮ್ಮೆಟ್ಟಿದ್ದರೆ ಅವರ ಜೀವವನ್ನು ಉಳಿಸಿಕೊಳ್ಳಲು ಆಗುತ್ತಿರಲಿಲ್ಲ. ಆತನ ಧೈರ್ಯ ಸಾಹಸಗಳೇ ಅವರ ಪ್ರಾಣವನ್ನು ಕಾದುವು!"

ಡಾಕ್ಟರರು ಮರುದಿನ ತಮ್ಮ ಕಾರನ್ನೇರಿ ಮಾನಂದವಾಡಿಗೆ ಮರಳುವ ಮುನ್ನ ನಾಯಕನನ್ನು ಕರೆದು, "ಹೀಗಿಯೇ ನೀನು ಧೈರ್ಯಶಾಲಿಯಾಗಿ ಬಾಳು!" ಎಂದು ಹರಸಿ ತಮ್ಮ ಜೇಬಿನಿಂದ ಬೆಳ್ಳಿಯ ಒಂದು ರೂಪಾಯಿಯನ್ನು ತೆಗೆದು ಅವನಿಗೆ ಮೆಚ್ಚುಗೆ ಕೊಟ್ಟರು.

ಅಂದಿನ ಆ ಪ್ರಸಂಗ ಓದು ಬರಹ ಕಲಿಯದ ಕುರುಬ ಹುಡುಗನು ಸಹ ಒಡೆಯನಿಗೋಸುಗ ಕಷ್ಟ ಆಪತ್ತುಗಳ ಮಡುವಿನಲ್ಲಿ ನೆಗೆಯಬಲ್ಲನೆಂಬ ಅನುಭವವನ್ನು ಲಕ್ಷ್ಮಿಗೆ ಒದಗಿಸಿಕೊಟ್ಟಿತು. ಕುರುಬ ಹುಡುಗನ ಈ ಗುಣ ವಿಶೇಷವನ್ನು ಗ್ರಹಿಸಿಯೇ ಮಾವ ಅತ್ತೆಯ ಮಾತನ್ನು ಕಿವಿಗೆ ಹಾಕಿಕೊಳ್ಳದೆ ಆತನನ್ನು ಮಮತೆಯಿಂದ ಕಾಣುತ್ತಿರುವರೆಂಬುದು ಅವಳಿಗೆ ಹೊಳೆಯಿತು.

"ಲಕ್ಷ್ಮೀ, ಪುಸ್ತಕವನ್ನು ಕೈಯಲ್ಲಿ ಹಿಡಿದು ಏನನ್ನೋ ಆಲೋಚಿಸುತ್ತಿರುವೆಯಲ್ಲ!" ಎಂದು ದೇವತ್ತೆ ಹೇಳಿದ ಮಾತು ಲಕ್ಷ್ಮಿಯನ್ನು

ತನ್ನ ಹಗಲುಗನಸಿನಿಂದ ಎಚ್ಚರಿಸಿತು.

ಲಕ್ಷ್ಮಿಗೆ ನಾಚಿಕೆಯಾಯಿತು. ಅವಳು ಕೈಯಲ್ಲಿ ಹಿಡಿದ ಪುಸ್ತಕವನ್ನು ಬದಿಗೆಸೆದು ಕುಳಿತಲ್ಲಿಂದ ಎದ್ದಳು. ಅಷ್ಟರಲ್ಲಿ ತೋಟದಲ್ಲಿ ಗುಮ್ಮಟಿ ಹಣ್ಣುಗಳನ್ನು ಅರಸಲೆಂದು ಹೋಗಿದ್ದ ಚಿರುತೆ ಓಡಿ ಬಂದಳು. ಅವಳು ಓಡಿ ಬರುವ ಸಂಭ್ರಮವನ್ನು ಕಂಡು ಲಕ್ಷ್ಮಿ ಕೌತುಕಗೊಂಡಳು. ಅವಳು "ಚಿರುತೆ, ಏನಾಯಿತೇ? ಏಕೆ ಇಷ್ಟೊಂದು ಗಡಿಬಿಡಿಯಲ್ಲಿ ಓಡಿ ಬರುತ್ತಿರುವೆ?" ಎಂದು ಕೇಳಿದಳು.

"ನಾಯಕ ಬಂದ, ಏನೋ ತಂದ!" ಎಂದು ಚಿರುತೆ ಪ್ರಾಸ ಕಟ್ಟಿ ಹೇಳಿದಳು.

"ಅಡವಿಗೆ ಹೋದಾತ ಹಣ್ಣು ಹಂಪಲನ್ನೋ, ಗೆಡ್ಡೆ ಗೆಣಸನ್ನೋ ತಂದಿರಬಹುದು. ಅದಕ್ಕೇಕೆ ಈ ಕೋಲಾಹಲ!" ಎಂದು ಲಕ್ಷ್ಮಿ ತಂಗಿಯ ಉತ್ಸಾಹಕ್ಕೆ ತಣ್ಣೀರನ್ನೆರಚಿದಳು.

ಚಿರುತೆ ಅಕ್ಕನನ್ನು ಬಿಡಲಿಲ್ಲ. ಅವಳು ಲಕ್ಷ್ಮಿಯ ಕೈ ಹಿಡಿದೆಳೆದು "ಬಾ, ಅಕ್ಕ. ಆನೇಕಾರ ಏನು ತಂದಿದ್ದಾನೆ ಎಂದು ನೋಡೋಣ." ಎಂದು ಹೇಳಿ ಮುಂದಿನ ಜಗಲಿಗೆ ಕರೆದುಕೊಂಡು ಹೋದಳು.



ನಾಯಕ ಆನೆಗೆ ಉಣಲು ಮಿದಿದ ನೆಲ್ಲನ್ನು ಬೇಯಲು ಹಾಕಿ ಪಾಪಾತಿಯವರ ಮುಂದೆ ಹಾಜರಾದ. ಅವನು ಎಡಗೈಯಲ್ಲೊಂದು ಗಂಟನ್ನು ಹಿಡಿದುಕೊಂಡಿದ್ದ.

"ಆನೇಕಾರ, ಆ ಗಂಟೇನು?" ನಾಯಕನ ಮೋರೆ ಕಣ್ಣಿಗೆ ಬೀಳುತ್ತಲೆ ಕೂಗಿ ಕೇಳಿದಳು ಚಿರುತೆ.

"ಪುಟ್ಟ ಪಾಪಾತಿ, ಗಂಟಿನಲ್ಲಿ ಎನಿದೆ ಹೇಳಿ ನೋಡೋಣ." ಆನೇಕಾರ ಬಾಯಲ್ಲಿ ತುಂಬಿದ ಹೊಗೆಸೊಪ್ಪಿನ ರಸವನ್ನು ಉಗುಳತ್ತಾ ನುಡಿದ. "ನೀವು ಹೇಳುದುದು ನಿಜವಾದರೆ ಗಂಟಿನಲ್ಲಿದ್ದುದನ್ನೆಲ್ಲಾ ನಿಮಗೇ ಕೊಟ್ಟು ಬಿಡುವೆನು."

" ಕಿತ್ತಳೇ ಹಣ್ಣು." ಆತುರದಿಂದ ಉಲಿದಳು ಚಿರುತೆ.

" ಅಲ್ಲ. " ನಾಯಕ ತಲೆಯನ್ನು ಅಲುಗಿಸಿದ.

" ಪೇರಳೆ ಹಣ್ಣು "

" ಊಹೂಂ "

" ಮಾವಿನಕಾಯಿ "

" ಅಲ್ಲ. "

" ನೇರಿಲೆ ಹಣ್ಣು. "

" ಖಂಡಿತ ಅಲ್ಲ. "

" ಹಾಗಾದರೆ ಇನ್ನೇನಾಗಿರಬಹುದು ? " ಚಿರುತೆ ಬೆರಳಿಂದ ತಲೆ ಕೆರೆದುಕೊಂಡಳು.

" ನೀವು ಸೋತಿರಾ ? " ನಾಯಕನ ಮೋರೆಯಲ್ಲಿ ಗೆಲುವು ಮಿಂಚಿತು.

" ಇಲ್ಲ, ಇಲ್ಲ. ಅದು ಕಾಡುಗೆಣಸಿರಬೇಕು. " ಚಿರುತೆ ಸೋಲನ್ನು ಒಪ್ಪಿಕೊಳ್ಳಲು ಇಷ್ಟವಿಲ್ಲದೆ ಉಲಿದಳು.

" ಅಲ್ಲ. "

" ಹಾಗಾದರೆ ಅದು ಮಾದಳೆ ಹಣ್ಣಿರಬೇಕು.

" ನಿಮ್ಮ ಊಹೆ ದಿಟವಲ್ಲ. "

ಚಿರುತೆಗೆ ಮುಂದೇನು ಹೇಳಬೇಕೆಂಬುದು ತಿಳಿಯಲಿಲ್ಲ. ಅವಳು ಕೂದಲೆಡೆಯಲ್ಲಿ ಬೆರಳುಗನ್ನಾಡಿಸುತ್ತಾ ತಲೆ ತಗ್ಗಿಸಿದಳು.

" ಅದೇನೆಂದು ತೋರಿಸು ನೋಡೋಣ. " ಎಂದಳು ಅವಳು.

" ಊಹುಂ. ಅದಾಗದು; ನೀವು ಮೊದಲು ಸೋಲನ್ನು ಒಪ್ಪಿಕೊಳ್ಳಬೇಕು. "

ಚಿರುತೆ ಬೇರೆ ಉಪಾಯಗಾಣದೆ 'ಸೋತೆ' ಎಂದು ಒಪ್ಪಿಕೊಂಡಳು.

ನಾಯಕ ಎಡಗೈಯಲ್ಲಿದ್ದ ಬಟ್ಟೆಯ ಗಂಟನ್ನು ಜಗಲಿಯ ಮೇಲಿರಿಸಿದ. ಅವನು ಗಂಟನ್ನು ಬಿಚ್ಚಿದ. ಗಂಟಿನೊಳಗೆ ಮುತ್ತುಗದ ಎಲೆಗಳ ಮೇಲೆ ಜೇನು ಎರಿಗಳಿದ್ದುವು. ಅವುಗಳನ್ನು ಕಂಡು ಚಿರುತೆಗೆ ಅಚ್ಚರಿಯಾಯಿತು. ಅವಳು ಹಿಗ್ಗು ತುಂಬಿದ ದನಿಯಲ್ಲಿ, " ನಾಯಕ

ಬಂದ; ಸವಿ ಜೇನುತಂದ ! ನಮಗೆಲ್ಲಾ ಆನಂದ ! " ಎಂದು ಹಾಡುತ್ತಾ ಕುಣಿದಾಡಿದಳು.

" ಪಾಪಾತಿ, ಇದನ್ನ ತೆಗೆದುಕೊಳ್ಳಿ. " ನಾಯಕ ಲಕ್ಷ್ಮಿಗೆ ಹೇಳಿದ.

ಲಕ್ಷ್ಮಿ ಒಳಮನೆಯಿಂದ ಕಲಾಯಿ ಪಾತ್ರೆಯೊಂದನ್ನು ತಂದು ಅದರಲ್ಲಿ ಜೇನು ಎರಿಗಳನ್ನು ತುಂಬಿಸಿದಳು. ಚಿರುತೆ, " ಅಕ್ಕ, ಇಲ್ಲಿ ಒಂದು ಎರಿಕೊಡು. " ಲಕ್ಷ್ಮಿಯನ್ನು ಕೇಳಿದಳು.

" ಚಿರುತೆ, ನಿನಗೇನು ಆತುರ ! ಸಾಲೆಗೆ ಹೋದ ರಾಮು, ಕುಂಞಂಬು ಬರಲಿ. " ಲಕ್ಷ್ಮಿ ಮಾರ್ನುಡಿದಳು: " ಎಲ್ಲರೂ ಒಟ್ಟಾಗಿ ಜೇನೆರಿಗಳನ್ನು ಮೆಲ್ಲೋಣವಂತೆ. "

" ನಾನೊಲ್ಲೆ. ನಾನು ಈಗಲೇ ಮೆಲ್ಲಬೇಕು. " ಎಂದು ಹೇಳಿ ಚಿರುತೆ ಕೈಹಾಕಿ ಎರಡು ಎರಿಗಳನ್ನು ಕಿತ್ತುಕೊಂಡಳು. ಅವಳು ಕೈ ಹಾಕಿ ಕಿತ್ತ ರಭಸಕ್ಕೆ ಹಿಡಿದ ಎರಿಗಳು ಹಿಚುಕಲ್ಪಟ್ಟವು. ಎರಿಗಳಿಂದ ಸಿಡಿದ ಜೇನ ಹನಿಗಳು ಸಿಡಿದು ಅವಳ ಮೋರೆ ಮತ್ತು ಎದೆಗಳ ಮೇಲೆ ಬಿದ್ದುವು. ಅವಳು " ಇಸ್ಸೀ ! ಮೈ ಮೋರೆಯೆಲ್ಲ ಜೇನಾಯಿತು ! " ಎಂದು ಹೇಳಿ ಜೇನ ಎರಿಗಳನ್ನು ಬಾಯೊಳಗೆ ಹಾಕಿಕೊಂಡು ಮೆಲ್ಲ ತೊಡಗಿದಳು.

ಲಕ್ಷ್ಮಿ ಎರಿಗಳು ತುಂಬಿದ ಪಾತ್ರೆಯನ್ನು ಮನೆಯೊಳಗೆ ಒಯ್ದಳು. ಚಿರುತೆ " ಸವಿ, ಸವಿ ! ಜೇನು ಬಲು ಸವಿ ! " ಎಂದು ಹಾಡುತ್ತಾ ಕುಣಿದಾಡಿದಳು. ಅವಳ ದೃಷ್ಟಿ ನಾಯಕನ ಕಡೆ ಹೊರಳಿತು. ಅವಳು " ನಾಯಕ, ನೀನು ಜೇನು ತೆಗೆದುದು ಹೇಗೆ ? " ಎಂದು ಪ್ರಶ್ನಿಸಿದಳು.

" ಗೂಡಿನೊಳಗೆ ಕೈ ಹಾಕಿ. "

" ಜೇನು ನೊಣ ಕಚ್ಚೋದಿಲ್ವೇ ? ಅಬ್ಬಾ ! ಜೇನುನೊಣ ಕಚ್ಚುವುದನ್ನು ಆಲೋಚಿಸಿದರೆ ಮೈ ನಡುಗುತ್ತೆ. ಕಳೆದ ತಿಂಗಳು ನಾನು ಅಕ್ಕನ ಜತೆಯಲ್ಲಿ ಕಾಫಿ ತೋಟದಲ್ಲಿ ಅಡ್ಡಾಡುತಿದ್ದೆ. ಗಿಡಗಳ ಮೇಲೆ ಬಿಳಿಯ ಕಾಫಿ ಹೂಗಳು ಅರಳಿ ಮಗಮಗಿಸುತಿದ್ದುವು. ಹೂಗಳ ಮೇಲೆ ನೊಣಗಳು ಜೋಂಯ್ ಜೋಂಯ್ ಎಂದು ಹಾರಾಡುತಿದ್ದುವು.

ನಾನೊಂದು ಹೂ ಗೊಂಚಲ ಹತ್ತಿರ ಹೋಗಿ ಜೇನು ನೊಣವನ್ನು ಹಿಡಿಯಲೆಂದು ಕೈಬೀಸಿದೆ. ಒಂದು ಜೇನು ನೊಣ ಹಾರಿ ಬಂದು ನನ್ನ ಕಚ್ಚಿತು. ಉರಿಯಿಂದ ನನ್ನ ಮೈಯೆಲ್ಲಾ ಬೆವರಿ ಹೋಯಿತು!"

"ಎಲ್ಲಿಗೆ ಕಚ್ಚಿತು ಪಾಪಾತಿ?" ನಾಯಕ ಪ್ರಶ್ನಿಸಿದ.

"ನಾಯಕ, ನೀನು ನಗಬೇಡ. ಅದು ಹಾರಿಬಂದು ನನ್ನ ಮೂಗಿನ ತುದಿಗೆ ಕಡಿದು ಬಿಟ್ಟಿತು. ಆ ಮೇಲೆ ಕನ್ನಡಿ ತೆಗೆದುಕೊಂಡು ನೋಡಿದರೆ ಮೂಗು ಕುಂಬಳಕಾಯಿಯಷ್ಟು ಗಾತ್ರ ಊದಿ ಹೋಗಿದೆ. ನಾನು ನಾಚಿಕೆಯಿಂದ ಮನೆಯಿಂದ ಹೊರಗೆ ಮೂರು ದಿನಗಳ ತನಕ ಹೆಜ್ಜೆ ಇರಿಸಲಿಲ್ಲ. ನಿನಗೆ ಒಂದೇ ಒಂದು ನೊಣ ಕಡಿಯಲಿಲ್ಲವೇ?"

"ಇಲ್ಲ ಪಾಪಾತಿ. ನನಗೆ ಕಡಿಯಲೇ ಇಲ್ಲ."

"ಶುದ್ಧ ಸುಳ್ಳು. ಗೂಡಿಗೆ ಕೈಹಾಕಿ ಜೇನು ಕೀಳುವಾಗ ಯಾವ ನೊಣ ತಾನೇ ಕಚ್ಚದೆ ಇದ್ದೀತು!"

"ಪಾಪಾತಿ, ನೀವು ನೊಣಕ್ಕೆ ಹೆದರುತ್ತೀರಿ; ಆದರೆ ಜೇನ ನೊಣಗಳು ನನಗೆ ಹೆದರುತ್ತವೆ!"

"ಅವೇಕೆ ನಿನಗೆ ಹೆದರಬೇಕು?"

"ಯಾಕೆಂದರೆ ನಾನು ಜೇನು ಕುರುಬ."

"ಜೇನು ಕುರುಬನಾದರೆ ಏನಂತೆ ?"

"ಜೇನು ನೊಣಗಳನ್ನು ಮಂಕುಗೊಳಿಸುವ ಮಂತ್ರ ನನಗೆ ಗೊತ್ತಿದೆ. ನಾನು ಛೂ ಎಂದು ಒಂದು ಮಂತ್ರ ಹಾಕಿ ಊದಿ ಬಿಟ್ಟರೆ ಸಾಕು; ನೊಣಗಳೆಲ್ಲ ಗೂಡನ್ನು ಬಿಟ್ಟು ದೂರ ಹೋಗಿ ಕುಳಿತು ಬಿಡುತ್ತವೆ!"

"ಹಸಿ ಸುಳ್ಳು!"

"ಒಂದು ಜೇನು ನೊಣ ಕಚ್ಚಲು ನಿಮ್ಮ ಮೂಗು ಕುಂಬಳಕಾಯಿಯಂತೆ ಹಾಗಿರುವಾಗ ಜೇನು ಕೀಳುವಾಗ ನನಗೆ ಎಷ್ಟು ನೊಣಗಳು ಕಚ್ಚಿರಬೇಡ? ಈಗ ಊದಿ ಹಂಡೆಗಾತ್ರವಾಗಿ ಹೋಗಬೇಕಾಗಿತ್ತು! ನನ್ನ ಮೈಕೈಗಳನ್ನು ನೋಡಿ. ಎಲ್ಲಾದರೂ ಊದಿದಿಯೇ?"

"ನಿನ್ನ ಮಂತ್ರವನ್ನು ಹೇಳಿಕೊಡು ನೋಡೋಣ."

" ಅದಾಗದು ಪಾಪಾತಿ, ಅದು ನಮ್ಮ ಕುಲಮಂತ್ರ. "

ಜೇನು ತುಂಬಿದ ಪಾತ್ರೆಯನ್ನು ಮನೆಯೊಳಗೆ ಇಡಲೆಂದು ಹೋದ ಲಕ್ಷ್ಮಿ ಮರಳಿ ಜಗಲಿಗೆ ಬಂದಳು. ತಂಗಿ ನಾಯಕನನ್ನು ಹರಟೆ ಹೊಡೆಯಲು ನಿಲ್ಲಿಸಿಕೊಂಡಿರುವುದನ್ನು ಅವಳು ಕಂಡಳು. ಅವಳು, " ಚಿರುತೆ ನಿನಗೆ ಹರಟೆ ಹೊಡೆಯಲು ನಾಯಕ ಸಿಕ್ಕಿಬಿಟ್ಟರಾಯಿತು; ಅವನ ಕಷ್ಟಸುಖಗಳನ್ನು ಆಲೋಚಿಸುವ ಗೋಜಿಗೆ ನೀನು ಹೋಗುವ ಹಾಗಿಲ್ಲ!"

" ಅಕ್ಕ, ನಮ್ಮ ನಾಯಕನಿಗೆ ಏನು ಕಷ್ಟ ಬಂದಿದೆ ? "

" ಚಿರುತೆ, ಹಸಿದ ಹೊಟ್ಟೆಯ ಸಂಕಟ ನಿನಗೆ ಹೇಗೆ ಗೊತ್ತಾದೀತು ಹೇಳು. ಬೆಳಿಗ್ಗೆ ಅಡವಿಗೆ ಆನೆಯನ್ನು ಅಟ್ಟಿಕೊಂಡು ಹೋದವನು ಈಗ ಬಂದಿದ್ದಾನೆ. ಅವನಿಗೆ ಇನ್ನೂ ಊಟ ಸಹ ಆಗಿಲ್ಲ. ನೀನು ಅವನನ್ನು ತಡೆದು ನಿಲ್ಲಿಸಿಕೊಂಡಿದ್ದೀಯಲ್ಲ ! "

" ಪರವಾ ಇಲ್ಲ ಪಾಪಾತಿ, ನನಗೆ ಮರಿಪಾಪಾತಿಯ ಮಾತು ಕೇಳಿ ಹೊಟ್ಟೆ ತುಂಬಿದಷ್ಟು ಸಂತೋಷವಾಯಿತು ! "

" ಅಕ್ಕ ! ಅಕ್ಕ ! ನೀನು ಈವತ್ತಿನಿಂದ ನಾಯಕನಿಗೆ ಅನ್ನ ಹಾಕಬೇಡ ! " ಚಿರುತೆ ಆತುರತುಂಬಿದ ದನಿಯಲ್ಲಿ ಕೂಗಿ ಹೇಳಿದಳು.

" ಚಿರುತೆ, ಅವನಿಗೇಕೆ ಅನ್ನಹಾಕಬಾರದು ? ಅವನೇನು ತಪ್ಪು ಮಾಡಿದ ? "

" ನೋಡು, ಅಕ್ಕ, ನಾಯಕನಾಡಿದ ಮಾತನ್ನು ನೀನೇ ಕೇಳಲಿಲ್ಲವೇ ? ನನ್ನ ಮಾತು ಕೇಳುತ್ತಾ ಇದ್ದರೆ ಅವನಿಗೆ ಹೊಟ್ಟೆ ತುಂಬುತ್ತದೆ ಅಂತೆ. ನಿತ್ಯ ಮೂರು ಹೊತ್ತು ನಾನು ಅವನ ಮುಂದೆ ಮಾತಾಡುತ್ತಾ ನಿಂತು ಬಿಡುತ್ತೇನೆ. ಅವನ ಹೊಟ್ಟೆಯೂ ತುಂಬುವುದು; ನಮಗೆ ಅಕ್ಕಿಯೂ ಉಳಿಯುವುದು ! "

" ನೀನು ಬಲು ತರಲೆ ಕಣೆ ! " ಲಕ್ಷ್ಮಿ ತಂಗಿಯನ್ನು ಗದರಿಸುತ್ತಾ ನಾಯಕನನ್ನು ನೋಡಿದಳು : " ನಾಯಕ, ಈ ಪುಚ್ಚು ಫರಂಗಿಯ ಮಾತಿಗೆ ತುದಿಯಿಲ್ಲ; ಬುಡವಿಲ್ಲ. ಅವಳ ಮಾತನ್ನು ಕೇಳುತ್ತಾ ನಿಂತರೆ ನಿನ್ನ ಊಟಕ್ಕೆ ಸೊನ್ನೆ ಬಿದ್ದೀತು. ಹೋಗು, ನಿನ್ನ ಊಟದ ತಟ್ಟೆಯನ್ನು ತೆಗೆದುಕೊಂಡು ಬಾ. "

ನಾಯಕ ಊಟದ ತಟ್ಟೆಯನ್ನು ತೆಗೆದುಕೊಂಡು ಹಿತ್ತಲ ಜಗಲಿಗೆ ಹೋದ. ಅವನು ಬೆಳಗಿನಿಂದ ಆನೆಯಿಂದ ಮರ ಎಳೆಸಿ ತುಂಬಾ ಆಯಾಸ ಗೊಂಡಿದ್ದ. ಅವನಿಗೆ ಭೀಮನಷ್ಟು ಹಸಿವೆಯಾಗಿತ್ತು. ಅವನು ತಟ್ಟೆಗೆ ಬಡಿಸಿದ ಅನ್ನ ಸಾರುಗಳನ್ನು ಕಲಿಸಿ ಉಂಡೆಗಟ್ಟಿ ಗಬಗಬನೆ ಉಣ್ಣತೊಡ ಗಿದ.

ಚಿರುತೆ ಜೇನು ಎರಿಗಳನ್ನು ಮೆದ್ದು ಮುಗಿಸಿದಳು. ಅವಳ ಸವಾರಿ ಹಿತ್ತಲ ಜಗಲಿಗೆ ಚಿತ್ತೈಸಿತು. ನಾಯಕ ಬಾಯಲ್ಲಿ ತುಂಬಿದ ತುತ್ತನ್ನು ನುಂಗುತ್ತಾ, "ಮರಿಪಾಪಾತಿಯವರು ಈ ಕಡೆ ದಯಮಾಡಿಸಿದಿರಲ್ಲಾ" ಎಂದು ಕೇಳಿದ.

"ನಾಯಕ, ನೀನು ನನಗೊಂದು ಉಪಕಾರ ಮಾಡಿಕೊಡಬೇಕು."

"ಏನದು ಪಾಪಾತಿ?"

"ಮೊನ್ನೆ ದಿನ ಮಾವ ಬುಟ್ಟಿ ಹೆಣೆಯಲೆಂದು ಕಾಡಿನಿಂದ ಬೆತ್ತ ತರಿಸಿದಿರಲ್ಲ. ಆ ಬೆತ್ತಗಳ ಪೈಕಿ ಉದ್ದವಾಗಿರುವ ಎರಡನ್ನು ತೆಗೆದು ನಾನು ಅಡಗಿಸಿ ಇರಿಸಿದ್ದೇನೆ."

"ಅವೇಕೆ ಮರಿಪಾಪಾತಿ?"

"ನನಗೆ ಉಯ್ಯಾಲೆಯಾಡಬೇಕೆಂದು ತುಂಬಾ ಆಸೆ. ನೋಡು, ಬಾಳೆಯ ತೋಟದಾಚೆ ಮೆಣಸು ಒಣಗಿಸುವ ಕಳವಿದೆಯಲ್ಲ; ಆ ಕಳ ದಂಚಿನಲ್ಲಿ ಒಂದು ಮಾವಿನ ಮರವಿದೆ. ಆ ಮಾವಿನಮರದ ಕೊಂಬೆಗೆ ಬೆತ್ತ ಬಿಗಿದು ಉಯ್ಯಾಲೆ ಹಾಕಿಕೊಡು. ನಾನು ಉಯ್ಯಾಲೆಯಾಡುತ್ತಾ ಹೊತ್ತು ಕಳೆಯುತ್ತೇನೆ. ನಿನಗೂ ಒಳ್ಳೆಯದು."

"ಅದರಿಂದ ನನಗೇನು ಒಳ್ಳೆಯದು?" ನಾಯಕ ಬಾಯೊಳಗಿನ ತುತ್ತನ್ನು ನುಂಗುತ್ತ ಕೇಳಿದ.

"ನಾನು ನಿನ್ನನ್ನು ಹರಟೆ ಹೊಡೆಯಲು ನಿಲ್ಲಿಸಿಕೊಂಡು ಊಟಕ್ಕೆ ಸೊನ್ನೆ ಸುತ್ತುವುದಿಲ್ಲ."

"ಆಗಲಿ ಪಾಪಾತಿ. ಮೊದಲು ನನ್ನ ಊಟ ಮುಗಿಯಲಿ." ಎಂದು ಹೇಳಿ ನಾಯಕ ಚಿರುತೆಗೆ ಉಯ್ಯಾಲೆ ಕಟ್ಟಿಕೊಡಲು ಒಪ್ಪಿಕೊಂಡ.

ಊಟ ಮುಗಿಯಿತು. ನಾಯಕ ಎಂಜಲು ತಟ್ಟೆಯನ್ನು ತೊಳೆದು

ಕೊಂಡು ಬಂದು ಉಂಡಸ್ಥಳಕ್ಕೆ ಸೆಗಣಿ ಹಚ್ಚಿದ.

"ಬಾ, ನಾಯಕ. ನಾನು ಚಿತ್ತ ಎಲ್ಲಿದೆ ಎಂದು ನಿನಗೆ ತೋರಿಸಿ ಕೊಡುತ್ತೇವೆ." ಚಿರುತೆ ಸಂಚಿಯಿಂದ ಎಲೆ ಅಡಿಕೆಗಳನ್ನು ತೆಗೆಯುತಿದ್ದ ನಾಯಕನ ಕೈಹಿಡಿದೆಳೆದಳು.

ತಂಗಿ ಕುರುಬರನ ಕೈ ಹಿಡಿದೆಳೆದುದನ್ನು ಲಕ್ಷ್ಮಿ ಕಂಡಳು. ಅವಳು "ಚಿರುತೆ, ನಿನಗೆ ಮಡಿ ಐತ ಎಂಬುದು ಏನೂ ಇಲ್ಲವೇನೇ? ನೀನು ಕುರುಬ ಹುಡುಗನನ್ನು ಮುಟ್ಟಿ ಅವನ ಕೈ ಹಿಡಿದೆಳೆದೆಯಲ್ಲ!" ಎಂದು ಸಿಡುಕು ಸ್ವರದಲ್ಲಿ ಕೇಳಿದಳು.

ಚಿರುತೆ ನಾಯಕನ ಕೈಯನ್ನು ಬಿಟ್ಟಳು. ಅವಳು ಅಕ್ಕನ ಮೋರೆಯನ್ನೊಮ್ಮೆ ದುರುಗಟ್ಟಿ ನೋಡಿದಳು. ಆಕೆಯ ನೋಟಕ್ಕೆ ಸುಡುವ ಶಕ್ತಿಯೇನಾದರೂ ಇದ್ದಿದ್ದರೆ, ಲಕ್ಷ್ಮಿ ಆ ಕ್ಷಣದಲ್ಲಿ ಬೆಂದು ಬೂದಿಯಾಗಿ ಹೋಗುತಿದ್ದಳು. ಲಕ್ಷ್ಮಿ, "ಚಿರುತೆ, ನೀನು ನನ್ನ ನುಂಗಿ ಬಿಡುವ ಹಾಗೆ ನೋಡುತ್ತಿರುವೆಯಲ್ಲ?" ಎಂದು ಪ್ರಶ್ನಿಸಿದಳು.

"ಅಕ್ಕ, ಈ ಮಡಿ ಮೈಲಿಗೆ ನನಗೆ ಮಾತ್ರವೇ?' "

"ನಿನಗೊಬ್ಬಳಿಗೆಂದು ಯಾರು ಹೇಳಿದರು? ಎಲ್ಲರಿಗೂ ಇದೆ."

"ಅಕ್ಕ, ನಾಯಕ ಜೇನೆರಿಗಳ ಗಂಟನ್ನು ನೆಲದ ಮೇಲಿಡುವಾಗ ನೀನು ಆತುರದಿಂದ ಹೆಕ್ಕಲಿಲ್ಲವೇ? ಆಗ ನಿನ್ನ ಬೆರಳುಗಳ ತುದಿ ಅವನ ಕೈಗೆ ಸೋಂಕಿತು. ಅದು ಐತವಲ್ಲವೇ?"

ಚಿರುತೆಯ ಬಾಯಿಯಿಂದ ಹೊರಟ ನುಡಿ ತನ್ನ ಬೆನ್ನಮೇಲೆ ಬಿಗಿದ ಚಾಟಿಯ ಪೆಟ್ಟಿನಂತೆ ಲಕ್ಷ್ಮಿಗೆ ತೋರಿತು. ಚಿರುತೆಯ ದೃಷ್ಟಿ ಇಷ್ಟು ಸೂಕ್ಷ್ಮವಾಗಿರಬಹುದೆಂದು ಅವಳು ಎಣಿಸಿರಲಿಲ್ಲ. ಅವಳ ಬೆರಳ ತುದಿ ನಾಯಕನ ಕೈಯನ್ನು ಸೋಂಕಿದುದು ನಿಜ; ಆ ಸ್ಪರ್ಶದಿಂದ ಅವಳು ಅನಿರ್ವಚನೀಯ ಆನಂದವನ್ನು ಅನುಭವಿಸಿದ್ದಳೆಂಬುದೂ ದಿಟ. ಚಿರುತೆಯ ಹದ್ದಿನ ದೃಷ್ಟಿ ಈ ಸೊಗದ ಸುಧೆಗೆ ಹುಳಿ ಹಿಂಡಿತಲ್ಲ ಎಂದು ಅವಳು ಮನಸ್ಸಿನಲ್ಲಿಯೇ ನೊಂದುಕೊಂಡಳು. ಅವಳು ಚಿರುತೆಗೆ ಮಾರ್ನುಡಿಯುವ ಗೋಜಿಗೆ ಹೋಗದೆ ಅಲ್ಲಿಂದ ಹೊರಟು ಹೋದಳು.

ಚಿರುತೆ, ನಾಯಕನನ್ನು ಹುಲ್ಲು ಬಣಚಿಯ ಹತ್ತಿರ ಕರೆದುಕೊಂಡು ಹೋದಳು. ಅವಳು ಬಣಚಿಯ ಸಂದಿನಲ್ಲಿ ಕೈ ಹಾಕಿ, " ನಾಯಕ, ಇಲ್ಲಿ ನೋಡು " ಎಂದು ಉಸುರಿದಳು. ಅವಳು ತೋರಿಸಿದೆಡೆಯಲ್ಲಿ ನಾಯಕ ಕೈ ತೂರಿಸಿದ. ಅವನ ಕೈಗೆ ಎರಡು ಉದ್ದವಾದ ಬೆತ್ತಗಳು ದೊರೆತುವು. ಅವಳು " ಈ ಬೆತ್ತಗಳಿಂದ ಉಯ್ಯಾಲೆ ಕಟ್ಟಬಹುದಲ್ಲವೇ ? " ಎಂದು ಕುರುಬ ಹುಡುಗನನ್ನು ಕೇಳಿದಳು.

" ಈ ಬೆತ್ತಗಳಿಂದ ಸೊಗಸಾದ ಉಯ್ಯಾಲೆ ಕಟ್ಟಬಹುದು " ನಾಯಕ ಉತ್ತರಿಸಿದ.

ಹಿತ್ತಲ ಬಾಳೆ ತೋಟದಾಚೆ ಕರಿಮೆಣಸನ್ನು ಒಣಗಿಸುವ ಕಳವಿತ್ತು. ಕಳದಂಚಿನಲ್ಲಿ ದೊಡ್ಡ ಮಾವಿನ ಮರವೊಂದಿತ್ತು. ಆ ಮಾಮರವು ತಳಿರ ಹಂದರವಾಗಿತ್ತು. ನೆಲದಿಂದ ಐದಾರು ಮಾರುಗಳ ಎತ್ತರದಲ್ಲಿ ಕೊಂಬೆಗಳು ಕವಲೊಡೆದಿದ್ದುವು. ನಾಯಕ ಬೆತ್ತದ ತುದಿಯನ್ನು ಹಲ್ಲುಗಳಿಂದ ಕಚ್ಚಿಕೊಂಡು ಮರವನ್ನು ಸರಸರನೆ ಏರಿದ. ಮರ ಹತ್ತುವುದರಲ್ಲಿ ನಾಯಕ ತೋರಿದ ಚಟುಲತೆಯನ್ನು ಕಂಡು ಚಿರುತೆಗೆ ಆಶ್ಚರ್ಯವಾಯಿತು. ಅವಳು, " ನಾಯಕ, ನಿನಗೆ ಈಗಿರುವ ಹೆಸರು ಒಪ್ಪುವುದಿಲ್ಲ. ಬೇರೊಂದು ಹೆಸರು ಇಡಬೇಕೆಂದು ನಾನು ಆಲೋಚಿಸಿದ್ದೇನೆ " ಎಂದು ಉದ್ಗಾರವೆತ್ತಿದಳು.

" ಮರಿ ಪಾಪಾತಿ, ಯಾವ ಹೆಸರದು ? " ನಾಯಕ ಬಾಯಿ ತೆರೆದು ಕೇಳಿದ. ಅವನು ಹಲ್ಲುಗಳಿಂದ ಕಚ್ಚಿಕೊಂಡಿದ್ದ ಬೆತ್ತದ ತುದಿ ಕೆಳಗೆ ಬಿತ್ತು. ಅವನಿಗೆ ತನ್ನ ತಿಳಿಗೇಡಿತನವನ್ನು ನೆನೆದು ನಾಚಿಕೆಯಾಯಿತು. ಕೆಳಗೆ ಬಿದ್ದ ಬೆತ್ತವನ್ನು ಹೆಕ್ಕಿಕೊಳ್ಳಲು ಅವನು ಮರದಿಂದ ಇಳಿಯಬೇಕಾಯಿತು.

" ನಾಯಕ, ನಿನ್ನ ತಿಳಿಗೇಡಿತನಕ್ಕೆ ನಾನು ಕೊಡುವ ಹೆಸರು ಸರಿಯಾಗಿಯೇ ಇದೆ ! "

" ಅದನ್ನು ಹೇಳಿರೆಂದು ಆಗಲೇ ಹೇಳಿದೆನಲ್ಲ. "

" ನೋಡು ಆ ಹೆಸರು ಎಷ್ಟು ಮುದ್ದಾಗಿದೆ ಬಲ್ಲೆಯಾ ? ನಿನಗೊಪ್ಪುವ ಹೆಸರು.. ಆ ಹೆಸರು ಮಂಗ ! "

ಮರಿಪಾಪಾತಿ ಮಾಡಿದ ಹೊಸ ನಾಮಕರಣ ಅರಿವಾಗಲು ನಾಯ ಕನ ಕಿವಿಗಳು ಕೆಂಪಡರಿದುವು. ಬೇರೆ ಯಾರಾದರೂ ಅವನನ್ನು ಮಂಗ ನೆಂದು ಕರೆದಿದ್ದರೆ, ಹೊಡೆದು ಅವರ ಹಲ್ಲೆರಡನ್ನು ಉದುರಿಸಿ ಕೈಗೆ ಕೊಡು ತಿದ್ದ. ಪಾಪನ ಕುಟುಂಬದವರೊಡನೆ ಸಿಟ್ಟು ಮಾಡುವುದೆಂದರೆ 'ಬಡ ಎತ್ತು ಬರೆಯ ಮೇಲಿನ ಹುಲ್ಲನ್ನು ಮೇಯಲು ಹೋದ ಹಾಗೆ' ಎಂದು ಅವನು ಬಲ್ಲ. ಆದುದರಿಂದ ಮನಸ್ಸಿನೊಳಗೆ ಉರಿದು ಬಂದ ಮುನಿಸನ್ನು ಹೊರಗೆ ತೋರಗೊಡದೆ ನುಂಗಿಕೊಂಡ. ಅವನು ನೊಂದ ದನಿಯಲ್ಲಿ "ಮರಿ ಪಾಪಾತಿ, ನೀವು ನನ್ನ ತುಂಬಾ ಚೇಷ್ಟೆ ಮಾಡತಿದ್ದೀರಿ!" ಎಂದು ಉದ್ಗಾರವೆತ್ತಿದ.

"ಇಲ್ಲ ನಾಯಕ, ಇನ್ನು ಮುಂದೆ ನಾನು ನಿನ್ನ ಚೇಷ್ಟೆ ಮಾಡು ವುದಿಲ್ಲ." ಚಿರುತೆ ಸಂತೈಸುವ ದನಿಯಲ್ಲಿ ಉಸುರಿದಳು: "ನೀನು ಸರ ಸರನೆ ಮರಹತ್ತುವುದನ್ನು ನೋಡಿ ನನಗೆ ಮಂಗನ ನೆನಪಾಯಿತು. ನೀನು ನನ್ನ ಮಾತು ಕೇಳಿ ಬಾಯ್ದೆರೆದು ನಿನ್ನ ಮಂಗತನವನ್ನೇ ತೋರಿಸಿದೆ. ನಾನೇನು ಮಾಡಲಿ?"

ನಾಯಕ ಮಾತಾಡಲಿಲ್ಲ. ಅವನು ಮರಳಿ ಬೆತ್ತದ ತುದಿಯನ್ನು ಹಲ್ಲುಗಳಿಂದ ಕಚ್ಚಿಕೊಂಡ. ಅವನು ಮರವನ್ನೇರಿ ಕವಲ್ಗೊಂಬೆಗೆ ಹೋದ. ಅವನು ಅಡ್ಡಲಾಗಿ ಹೋದ ಕೊಂಬೆಗೆ ಬೆತ್ತವನ್ನು ಕಟ್ಟಿದ. ಅವನು ಬೆತ್ತವನ್ನು ಕೆಳಗೆ ಇಳಿಯ ಬಿಟ್ಟ. ಅದರ ಇನ್ನೊಂದು ತುದಿ ನೆಲವನ್ನು ಮುಟ್ಟಿತು. ಅವನು ಇಳಿಬಿಟ್ಟ ಬೆತ್ತದ ತುದಿಗೆ ಎರಡನೆಯ ಬೆತ್ತವನ್ನು ಜೋಡಿಸಿ ಕಟ್ಟಲು ಚಿರುತೆಗೆ ಹೇಳಿದ. ಅವನ ನುಡಿಯಂತೆ ಎರಡು ಬೆತ್ತಗಳನ್ನು ಅವಳು ಜೋಡಿಸಿ ಬಿಗಿದಳು. ಅವನು ಬೆತ್ತಗಳನ್ನು ತಾನು ಅಡರಿ ನಿಂತಿದ್ದ ಕೊಂಬೆಗೆ ಹಿಡಿದೆಳೆದುಕೊಂಡ. ಅವನು ಎರಡ ನೆಯ ಬೆತ್ತವನ್ನು ಮೊದಲನೆಯ ಬೆತ್ತದಿಂದ ಒಂದು ಮೊಳ ದೂರದಲ್ಲಿ ಅದೇ ಕೊಂಬೆಗೆ ಕಟ್ಟಿದ. ಈಗ ಕೊಂಬೆಯಿಂದ ಎರಡು ಬೆತ್ತಗಳು ತೂಗಾಡತೊಡಗಿದವು. ಅವನು ಮರದಿಂದ ಕೆಳಗಿಳಿದು ಚಿರುತೆಗೆ "ಮರಿಪಾಪಾತಿ, ಈಗ ಉಯ್ಯಾಲೆಗೆ ಕಟ್ಟಲೊಂದು ಹಲಗೆ ಬೇಕಲ್ಲ! ಎಂದು ನುಡಿದ.

ಚಿರುತೆ ಬಚ್ಚಲು ಮನೆಗೆ ಹೋಗಿ, ಅಲ್ಲಿ ಎಣ್ಣೆ ಹಚ್ಚಿದಾಗ ಕುಳಿತು ಕೊಳ್ಳುವುದಕ್ಕೆ ಮೀಸಲಾಗಿದ್ದ ಒಂದು ಪುಟ್ಟ ಹಲಗೆಯನ್ನು ತಂದಳು. ಆ ಸಣ್ಣ ಹಲಗೆಯನ್ನು ಕಂಡು ನಾಯಕನಿಗೆ ನಗುಬಂತು. ಅವನು "ಮರಿಪಾಪಾತಿ, ನೀವು ಸಣ್ಣವರಾಗಿರುವಂತೆ ನಿಮ್ಮ ಬುದ್ಧಿಯೂ ಸಣ್ಣದು, ಆದುದರಿಂದಲೇ ನೀರು ಮನೆಯಿಂದ ಈ ಸಣ್ಣ ಹಗಲೆಯನ್ನು ಎತ್ತಿಕೊಂಡು ಬಂದಿರಿ. ನಿಮಗೊಂದು ಸಣ್ಣ ಮಗುವಾದಾಗ, ಅದಕ್ಕೆ ಉಯ್ಯಾಲೆಯನ್ನು ಹಾಕಿಕೊಡಲು ಈ ಹಲಗೆಯನ್ನು ಬಳಸಬಹುದು" ಎಂದು ಹೇಳಿ ತನ್ನ ಸೇಡನ್ನು ತೀರಿಸಿಕೊಂಡ.

ನಾಯಕ ದನಗಳ ಹಟ್ಟಿಗೆ ಹೋಗಿ ಅಲ್ಲಿ ಅಟ್ಟದಲ್ಲಿ ಹುಡುಕಿದ. ಅಲ್ಲಿ ಅವನಿಗೆ ಅರ್ಧ ಮಾರುದ್ದ ಮತ್ತು ಒಂದು ಮೊಳವಿರುವ ಹಲಗೆ ಸಿಕ್ಕಿತು. ಅವನು ಆ ಹಲಗೆಯನ್ನು ತಂದ. ತೂಗುತ್ತಿರುವ ಬೆತ್ತಗಳ ಕೆಳ ತುದಿಗಳನ್ನು ಚೂರಿಯಿಂದ ಸೀಳಿದ. ಹಲಗೆಯನ್ನು ಸಿಗಿದ ಬೆತ್ತ ಗಳ ನಡುವೆ ತೂರಿಸಿ ಬಿಗಿಯಾಗಿ ಕಟ್ಟಿದ.

ಹೀಗೆ ನಾಯಕನ ಪ್ರಯತ್ನದಿಂದ ಉಯ್ಯಾಲೆ ಸಿದ್ಧವಾಯಿತು.

ಇಷ್ಟರಲ್ಲಿ ಚಿರುತೆ ಉಯ್ಯಾಲೆ ಅಣಿಯಾದ ಸಂಗತಿಯನ್ನು ಅರುಹ ಲೆಂದು ಮನೆಗೆ ಓಡಿದಳು. ಆಗ ರಾಮು ಮತ್ತು ಕುಂಞಂಬು ಶಾಲೆ ಯಿಂದ ಬಂದಿದ್ದರು. ಅವಳು ಉತ್ಸಾಹ ತುಂಬಿದ ದನಿಯಲ್ಲಿ, "ಬಾ ರಾಮು, ಬಾ ಕುಂಞಂಬು. ಮೆಣಸಿನ ಕಳದಂಚಿನಲ್ಲಿ ನಾಯಕ ಉಯ್ಯಾಲೆ ಹಾಕಿದ್ದಾನೆ; ನಾವೆಲ್ಲ ಉಯ್ಯಾಲೆ ತೂಗೋಣ!" ಎಂದು ಕರೆದಳು.

ಆಗ ತಾನೇ ಕಾಫಿ ಕುಡಿದು ತಿಂಡಿ ಮೆದ್ದ ಹುಡುಗರಿಗೆ ಅಷ್ಟೇ ಬೇಕಾಗಿತ್ತು. ಅವರು ಹೊತ್ತು ಕಳೆಯಲು ಯಾವ ಹೊಸ ಆಟ ಸಿಕ್ಕೀ ತೆಂದು ಆಲೋಚಿಸುತಿದ್ದರು. ಅಕ್ಕನ ಮಾತು ಕೇಳಿದೊಡನೆ ಅವರ ಮೊಗಗಳು ಅರಳಿ ಹೀರೇ ಹೂವಾದುವು. ಇಬ್ಬರೂ, "ಅಕ್ಕ, ನಾಯಕ ಎಲ್ಲಿ ಉಯ್ಯಾಲೆ ಹಾಕಿದ್ದಾನೆ?" ಎಂದು ಕೇಳಿದರು.

"ಅಗೋ ಅಲ್ಲಿ, ಮೆಣಸಿನ ಕಳದಂಚಿನಲ್ಲಿ; ಮಾವಿನ ಮರದಲ್ಲಿ!" ಎಂದು ನುಡಿದು ತಮ್ಮಂದಿರ ಮರುಮಾತನ್ನು ಕಾಯದೆ ಉಯ್ಯಾಲೆ ಇದ್ದಲ್ಲಿಗೆ ಮರಳಿ ಓಡಿದಳು. ಕುಂಞಂಬು, "ಉಯ್ಯಾಲೆ ತೂಗುಯ್ಯಾಲೆ;

ತೂಗಿ ನಲಿಯೋಣ ಈಗಲೇ '' ಎಂದು ಹಾಡುತ್ತಾ ಅಕ್ಕನನ್ನು ಹಿಂಬಾಲಿಸಿದ.

ಉಯ್ಯಾಲೆಯನ್ನು ಕಟ್ಟಿಕೊಟ್ಟ ನಾಯಕ ಗಜಸೇವೆಯನ್ನು ಪೂರೈಸುವುದಕ್ಕೆಂದು ಹೊರಟು ಹೋಗಿದ್ದ. ಮಾವಿನ ಮರದ ಕೊಂಬೆಯಲ್ಲಿ ತೂಗುತಿದ್ದ ಉಯ್ಯಾಲೆ ಹುಡುಗರನ್ನು ಕರೆಯಿತು. 'ಕುಂಞಂಬು ''ನಾನೇ ಮೊದಲು'' ಎಂದು ಹೇಳಿ ಹಲಗೆಯ ಮೇಲೆ ಕುಳಿತು ಬಿಟ್ಟ.

ಅವನನ್ನು ಹಿಂಬಾಲಿಸಿಕೊಂಡು ಬಂದ ರಾಮು, " ಬಿಡೋ! ನಾನು ನಿನಗಿಂತ ದೊಡ್ಡವನು; ನಾನೇ ಮೊದಲು ಕುಳಿತುಕೊಳ್ಳಬೇಕು " ಎಂದು ಹೇಳಿ ತನ್ನ ಹಕ್ಕು ಸ್ಥಾಪನೆ ಮಾಡಿದ. ಅವನು ಹಲಗೆಯ ಮೇಲೆ ಕುಳಿತಿದ್ದ ತಮ್ಮನನ್ನು ಕೈಹಿಡಿದು ಎಳೆದ.

"ನಾನು ಮೊದಲು ಕುಳಿತಿದ್ದೇನೆ; ಏನೇ ಬರಲಿ, ನಾನು ಉಯ್ಯಾಲೆಯನ್ನು ಬಿಟ್ಟು ಕೊಡಲೊಲ್ಲೆ! '' ಎಂದು ಹೇಳಿ ಕುಂಞಂಬು ಎರಡು ಮುಷ್ಟಿಗಳಲ್ಲಿಯೂ ಉಯ್ಯಾಲೆಯ ಬೆತ್ತವನ್ನು ಬಿಗಿಯಾಗಿ ಹಿಡಿದುಕೊಂಡ.

" ಬಿಡೋ! ಜೋಕೆ! ನಿನ್ನ ಬೆನ್ನು ಮುರಿದೇನು; ಹಲ್ಲು ಉದುರಿಸೇನು! " ರಾಮು ತನ್ನ ಮುಷ್ಟಿಯನ್ನು ಬಿಗಿ ಹಿಡಿದು ತಮ್ಮನ ಬೆನ್ನ ಮೇಲೆ ಡಬಡಬನೆ ಗುದ್ದಿದ.

ಕುಂಞಂಬು ಅಣ್ಣನೊಡನೆ ಗುದ್ದಾಡಿ ಗೆಲ್ಲಲಾರ. ಅವನು " ಅಕ್ಕ, ರಾಮು ನನ್ನ ಗುದ್ದುತ್ತಾನೆ. '' ಎಂದು ತನ್ನ ಬತ್ತಳಿಕೆಯಿಂದ ರೋದನಾಸ್ತ್ರವನ್ನು ಹೊರತೆಗೆದ.

ಈ ಸುಂದೋಪಸಂದರ ಕಾಳಗವನ್ನು ತಡೆದು ಸಂಧಾನ ಮಾಡಲು ಚಿರುತೆಯೇ ಕೈಹಾಕಬೇಕಾಯಿತು. ಅವಳು ರಾಮುವಿನ ಕಿವಿ ಹಿಡಿದು ಎರಡು ಸುತ್ತು ತಿರುಗಿಸಿ, " ಲೋ ಕೀಚಕ! ಕುಂಞಂಬು ನಿನ್ನ ಹಗೆಯೇನೋ? ಅವನು ಮೊದಲು ಉಯ್ಯಾಲೆಯೊಬ್ಬಿದರೆ ನಿನ್ನ ಗಂಟೇನು ಖರ್ಚಾಗುವುದು! " ಎಂದು ಗದರಿಸಿದಳು.

ಅಣ್ಣನಿಗಾದ ಶಾಸ್ತಿಯನ್ನು ಕಂಡು ಕುಂಞಂಬುವಿನ ಮೋರೆ ಅರಳಿತು. ಆದರೆ ಅಷ್ಟರಲ್ಲಿಯೇ ಚಿರುತೆ ಅವನ ಹತ್ತಿರ ಬಂದು, " ಲೋ

ಬೆಪ್ಪು ಮುಂಡೇದೆ! ಯಾವಾಗಲೂ ಅಳುಮೋರೆ ನಿನ್ನದು. ಎರಡು ಗುದ್ದು ತಾಳಿಕೊಳ್ಳಲಾಗದವನು ಏನು ಉಯ್ಯಾಲೆ ಬಿಚ್ಚುತ್ತೀಯೋ!" ಎಂದು ಬೈದಳು.

ಕೊನೆಗೆ ಚಿರುತೆ ಅಣ್ಣ-ತಮ್ಮಂದಿರ ಕಲಹದಲ್ಲಿ ತನ್ನ ತೀರ್ಮಾನವನ್ನು ಕೊಟ್ಟಳು. ಅವಳು, "ನೀವಿಬ್ಬರೂ ಜಗಳವಾಡುವುದು ಬೇಡ. ನಾಯಕನಿಗೆ ಹೇಳಿ ಉಯ್ಯಾಲೆಯನ್ನು ಕಟ್ಟಿಸಿದವಳು ನಾನು. ಆದುದರಿಂದ ಮೊದಲು ನಾನೇ ಉಯ್ಯಾಲೆಯ ಮೇಲೆ ಕುಳ್ಳಿರಬೇಕು" ಎಂದು ಹೇಳಿ ಕುಂಞಂಬುವನ್ನು ಹಲಗೆಯ ಮೇಲಿಂದ ಎಬ್ಬಿಸಿದಳು; ಆತನ ಬದಲು ತಾನು ಹಲಗೆಯಮೇಲೆ ಆಸೀನಳಾದಳು.

"ಕುಂಞಂಬು, ನಿನ್ನ ಹಟಕ್ಕೆ ತಕ್ಕ ಶಾಸ್ತಿಯಾಯಿತು ಕಣೋ!" ರಾಮು ನಗುತ್ತಾ ಕೈತಟ್ಟಿ ಕುಣಿದ. ಕುಂಞಂಬು ಪೆಚ್ಚು ಮೋರೆಯನ್ನು ಹಾಕಿಕೊಂಡು ನಿಂತ.

ಚಿರುತೆ ತಮ್ಮಂದಿರನ್ನು ಕರೆದು, "ನೀವೇನು ನೋಡುತ್ತಾ ನಿಂತಿದ್ದೀರಿ? ನೀವು ನನ್ನನ್ನು ದೂಡಿ; ನೀವು ಕುಳಿತಾಗ ನಾನು ನಿಮ್ಮನ್ನು ಬಿಚ್ಚುವೆನು" ಎಂದು ಅಪ್ಪಣೆ ಮಾಡಿದಳು.

ಹುಡುಗರು ಉಯ್ಯಾಲೆಯ ಹಲಗೆಯನ್ನು ಹಿಡಿದು ದೂಡಿದರು. ಉಯ್ಯಾಲೆ ಚಲಿಸಲಾರಂಭಿಸಿತು. ಅದು ತೂಗುತ್ತಾ ಮರಳಿ ಬಂದಾಗ ಹುಡುಗರು ಮತ್ತೆ ದೂಡಿದರು. ಉಯ್ಯಾಲೆ ತೂಗಾಡಿದಂತೆ ಬಾಲಕರ ಉತ್ಸಾಹ ಹೆಚ್ಚಿತು. ರಾಮು ಉಯ್ಯಾಲೆಯ ಸರಿತಗಳನ್ನು ಒಂದು, ಎರಡು, ಮೂರು ಎಂದು ಎಣಿಸತೊಡಗಿದ. ಉಯ್ಯಾಲೆ ವೇಗ ಹೆಚ್ಚಿದಂತೆ, "ರಾಮು, ಕುಂಞಂಬು, ಇನ್ನೂ ಜೋರು ಮಾಡಿರಿ" ಎಂದು ತಮ್ಮಂದಿರಿಗೆ ಹೇಳಿದಳು.

ಉಯ್ಯಾಲೆಯನ್ನು ದೂಡಿ ದೂಡಿ ಹುಡುಗರಿಗೆ ಆಯಾಸವಾಯಿತು. ಅವರ ಮೊಗಗಳ ಮೇಲೆ ಬೆವರ ಹನಿಗಳು ಮೂಡಿದುವು. ಅವರ ತೋಳುಗಳು ಸೋತುವು. ರಾಮು, "ಅಕ್ಕ, ಮೂವತ್ತು ಸರಿತಗಳಾದುವು. ಇನ್ನು ಇಳಿ. ನಾವು ಕುಳ್ಳಿರುವೆವು" ಎಂದು ಹೇಳಿದ.

ಚಿರುತೆಗೆ ಅಷ್ಟು ಬೇಗ ಉಯ್ಯಾಲೆಯಿಂದ ಇಳಿಯಲು ಇಷ್ಟವಿರ

ಲಿಲ್ಲ. ಅವಳು " ರಾಮು, ನೀವು ಇನ್ನೂ ಇಪ್ಪತ್ತು ಸಲ ಒಚ್ಚಿರಿ; ಆಗ ಸರಿ ಐವತ್ತಾಗುವುದು "ಎಂದು ಹೇಳಿದಳು.

" ನಾನೊಲ್ಲೆ ಅಕ್ಕ. ಉಯ್ಯಾಲೆಯನ್ನು ದೂಡಿ, ದೂಡಿ ನಮ್ಮ ತೋಳುಗಳು ಸೋತು ಸುಣ್ಣವಾದವು " ಎಂದು ರಾಮ ಹಟ ಹಿಡಿದು ಸತ್ಯಾಗ್ರಹಮಾಡಿದ.

ಚಿರುತೆ ಉಯ್ಯಾಲೆಯ ಹಲಗೆಯ ಮೇಲಿಂದಿಳಿಯಲೇಬೇಕಾಯಿತು.

" ನೀವಿಬ್ಬರೂ ಈಗ ಉಯ್ಯಾಲೆಯ ಮೇಲೆ ಕುಳ್ಳಿರಿ." ಚಿರುತೆ ತಮ್ಮಂದಿರಿಗೆ ಹೇಳಿದಳು: " ನಾನು ಇಬ್ಬರನ್ನೂ ಒಚ್ಚಬಲ್ಲೆ. "

ಹುಡುಗರು ಉಯ್ಯಾಲೆಯಲ್ಲಿ ಕುಳಿತರು. ಚಿರುತೆ ಬೆತ್ತವನ್ನು ಹಿಡಿದು ದೂಡಲಾರಂಭಿಸಿದಳು. ಉಯ್ಯಾಲೆ ರುಂ ಎಂದು ಗಾಳಿಯನ್ನು ಸೀಳುತ್ತಾ ಮುಂದೆ ಸಾಗಿತು.



ಮನೆಯೊಳಗೆ ಚಿರುತೆಯ ಗದ್ದಲವಿಲ್ಲ; ಸಾಲೆಯಿಂದ ಬಂದ ಹುಡುಗರ ಸದ್ದಿಲ್ಲ. ಇವರೆಲ್ಲ ಎಲ್ಲಿ ಹೋದರು ಎಂದು ಲಕ್ಷ್ಮಿಗೆ ಆಶ್ಚರ್ಯವಾಯಿತು.

ಅವಳು ಜಗಲಿಯಿಂದ ಇಳಿದು ಹಿತ್ತಲ ಅಂಗಳಕ್ಕೆ ಬಂದಳು. ಬಾಳೆ ತೋಟದಾಚೆ ಇರುವ ಮೆಣಸಿನ ಕಳದಿಂದ ಮಾತು ಮತ್ತು ನಗುಗಳು ಅಲೆ ಅಲೆಯಾಗಿ ತೇಲಿ ಬಂದುವು. ಹುಡುಗರೆಲ್ಲ ಅಲ್ಲಿ ಸೇರಿರುವರೆಂದು ಅವಳಿಗೆ ಅರಿವಾಯಿತು. ಮಣಸಿನ ಕಳದಲ್ಲಿ ಅವರೇನು ಮಾಡುತ್ತಿರುವರೆಂದು ತಿಳಿಯೋಣವೆಂದು ಅವಳು ಬಾಳೆಯ ತೋಟವನ್ನು ಹಾಯ್ದು ಕಳದೆಡೆಗೆ ಹೆಜ್ಜೆಗಳನ್ನಿರಿಸಿದಳು. ಚಿರುತೆ ಉಯ್ಯಾಲೆ ಮೇಲೆ ಕುಳಿತಿರುವುದನ್ನೂ, ಹುಡುಗರು ಬಚ್ಚುತ್ತಿರುವುದನ್ನೂ ಅವಳು ಕಂಡಳು; ತಾನೂ ಉಯ್ಯಾಲೆಯ ಮೇಲೆ ಕುಳಿತು ತುಸ ಆಟವಾಡೋಣ ಎಂಬ ಬಯಕೆ ಅವಳ ಅಂತರಂಗದಲ್ಲಿ ಮೂಡಿತು.

ಅವಳು ಮಾವಿನ ಮರದೆಡೆಗೆ ಬಂದಳು. ಅವಳು, " ಚಿರುತೆ,

ಉಯ್ಯಾಲೆಯನ್ನು ಯಾರು ಕಟ್ಟಿಕೊಟ್ಟರು ?" ಎಂದು ತಂಗಿಯನ್ನು ಕೇಳಿದಳು.

"ಬೇರೆ ಯಾರು ಕಟ್ಟಿಕೊಡುವರು ? ನನ್ನ ಕುರುಬ ಹುಡುಗ ನಾಯಕ ಇದ್ದಾನಲ್ಲ;" ಚಿರುತೆ ಹೆಮ್ಮೆತುಂಬಿದ ದನಿಯಲ್ಲಿ ಉತ್ತರಿಸಿದಳು: "ಅವನೇ ಕಟ್ಟಿಕೊಟ್ಟ. ನಾನು ಹೇಳಿದ ಮೇಲೆ ಅವನು ಕಟ್ಟಿಕೊಡದೆ ಇರುತ್ತಾನೆಯೇ ?"

"'ನನ್ನ ಕುರುಬ ಹುಡುಗ' ಎಂದು ಹೇಳುತ್ತಿರುವೆಯಲ್ಲ ?"

"ಹಾಗೆ ಹೇಳಬಾರದೇ ?"

"ಕುರುಬ ಹುಡುಗ ನಿನಗೆ ಬಹಳ ಹತ್ತಿರದವನಾಗಿ ಹೋಗಿದ್ದಾನಲ್ಲ !" ಲಕ್ಷ್ಮಿಯ ಕೊರಳಿಂದ ಕೊಂಕು ನುಡಿ ಹೊರಟಿತು.

"ಅಕ್ಕ, ಅವನು ಯಾವಾಗಲೂ ಹತ್ತಿರದವನೇ !" ಲಕ್ಷ್ಮಿಯ ವಕ್ರೋಕ್ತಿಯನ್ನು ಅರಿತುಕೊಳ್ಳದೆ ಚಿರುತೆ ಮಾರುಲಿದಳು.

"ಆದುದರಿಂದ ನೀನು — —"

"ಆದುದರಿಂದ ನಾನೇನು ಮಾಡಬೇಕು ?" ಚಿರುತೆ ನಡುವೆ ಬಾಯಿ ಹಾಕಿದಳು.

"ನೀನು ಅವನನ್ನು ಮದುವೆಯಾಗಿ ಬಿಡು !"

"ಆಗುತ್ತೇನೆ ! ಬಿಡೇ," ಅಕ್ಕನ ಅಣಕ ಮಾತನ್ನು ಕೇಳಿ ಚಿರುತೆ ಸಿಡುಮಿಡಿಗೊಂಡು ಜ್ವಾಲಾಮುಖಿಯಾದಳು: "ನಾಯಕ, ನಿನ್ನ ಗಂಡ ಆ ತೋರ ಮಿಸೆ ಮಲ್ಲನಿಗಿಂತ ಹತ್ತು ಪಾಲು ಮೇಲು ! ನೀನು ಆ ಗಂಡನನ್ನು ಕಂಡರೆ ನಾಯಿಯನ್ನು ಕಂಡ ಬೆಕ್ಕಿನ ಹಾಗೆ ಆಡುತ್ತೀಯೆ. ನನಗೆ ಅಂತಹ ಭಯವೇನೂ ಇಲ್ಲ. ಆ ಮೀಸೆ ಉಯ್ಯಾಲೆಗಿಂತ ಬೆತ್ತದ ಉಯ್ಯಾಲೆ ನೂರಪಾಲು ಮೇಲು ! ಈ ಆನೆಕಾರನನ್ನು ಮದುವೆಯಾದರೆ ಅತ ನನಗೆ ಉಯ್ಯಾಲೆ ಹಾಕಿ ಕೊಡುತ್ತಾನೆ; ಕಾಡಿನಿಂದ ಜೇನು ತಂದು ಕೊಡುತ್ತಾನೆ. ಆ ಮೇಲೆ ಆನೆ ಮೇಲೆ ಕುಳ್ಳಿರಿಸಿ ಸವಾರಿಮಾಡಿಸಿಯಾನು !"

"ಸವಾರಿಯಲ್ಲ; ಮೆರವಣಿಗೆ ಎಂದು ಹೇಳು."

"ಹೂಂ ಮೆರವಣಿಗೆ !" ಚಿರುತೆ ಕಣ್ಣರಳಿಸಿ ಕೋಪಸ್ವರದಲ್ಲಿ

ಹೇಳಿದಳು: "ನಾನು ಆನೆಯ ಮೇಲೆ ಕುಳಿತು ಮೆರವಣಿಗೆ ಮಾಡಿಸಿ ಕೊಳ್ಳುತ್ತೇನೆ. ನಿನ್ನ ಗಂಟೇನು ಹೋಯಿತು?"

"ಮಹಾರಾಯಿತಿ, ನೀನು ಸಿಡಿಮಿಡಿಗೊಂಡು ದುಗ್ಗಮ್ಮನಾಗ ಬೇಡ." ಲಕ್ಷ್ಮಿ ತಂಗಿಯನ್ನು ಸಂತೈಸುವ ಸ್ವರದಲ್ಲಿ ಉಲಿದಳು: "ನಾನು ತಮಾಷೆಗೆ ಹಾಗೆ ಹೇಳಿದೆನಷ್ಟೆ ಅದನ್ನೇ ನೀನು ಬ್ರಹ್ಮಾಂಡ ಮಾಡುತ್ತೀಯಲ್ಲ! ಎಲ್ಲಿ ಸ್ವಲ್ಪ ಬಿಡು. ನಾನೂ ಉಯ್ಯಾಲೆಯಲ್ಲಿ ಕುಳಿತು ನೋಡುವೇನು."

"ಅಕ್ಕ, ನಾನು ಸುಮ್ಮನೆ ಉಯ್ಯಾಲೆಯನ್ನು ಬಿಟ್ಟುಕೊಡುವ ಹಾಗಿಲ್ಲ. ನಾನು ಹೇಳಿದ ಹಾಗೆ ನೀನು ಕೇಳಬೇಕು."

"ಅದೇನೆಂದು ಹೇಳು."

"ಅಕ್ಕ, ಮೊದಲು ನಿನ್ನ ಹಣೆಯಿಂದ ಬೆವರು ಸುರಿಯುವವರೆಗೆ ನನ್ನನ್ನು ಒಚ್ಚಬೇಕು."

"ನಾನು ಉಯ್ಯಾಲೆ ಒಚ್ಚುವ ರಭಸಕ್ಕೆ ನೀನು ಹೆದರಿ ಚೀರಿ ಬಿಡುವೆ."

"ಇಲ್ಲ ಅಕ್ಕ. ನಿನ್ನಾಣೆಯಾಗಿಯೂ ನಾನು ಹೆದರಲೊಲ್ಲೆ".

ಲಕ್ಷ್ಮಿ ಹಲಗೆಗೆ ಕೈಹಾಕಿದಳು. ಹಲಗೆಯನ್ನು ದೂಡುವ ತೊಂದರೆ ತಪ್ಪಿತೆಂದು ಹುಡುಗರು ಹಿಂದೆ ಸರಿದರು. ಲಕ್ಷ್ಮಿ ಹಲಿಗೆಯನ್ನು ಹಿಡಿದು ದೂಡಿದಳು. ಉಯ್ಯಾಲೆಯ ಸರಿತದ ವೇಗ ಹೆಚ್ಚಿತು. ತಾನು ಹಲಗೆ ಯಿಂದ ಕೆಳಗುರುಳಿ ಬಿದ್ದೇನೆಂಬ ಭಯದಿಂದ ಚಿರುತೆ ಎರಡು ಮುಷ್ಟಿ ಗಳಲ್ಲಿಯೂ ಬೆತ್ತವನ್ನು ಬಿಗಿಯಾಗಿ ಹಿಡಿದುಕೊಂಡಳು. ಲಕ್ಷ್ಮಿ ಕಸುವಿನಿಂದ ಮರಳಿ ಬಂದ ಉಯ್ಯಾಲೆಯನ್ನು ಒಚ್ಚಿದಳು. ಉಯ್ಯಾ ಲೆಯ ಸರಿತದ ವೇಗ ಇಮ್ಮಡಿಸಿತು. ಅದು ರುಂ ರುಂ ಎಂದು ಮೇಲೇ ರಿತು. ಚಿರುತೆ ಕೆಳಗೊಮ್ಮೆ ಕಣ್ಣು ಹಾಯಿಸಿದಳು. ನೆಲ ಆರೆಂಟು ಮಾರುಗಳ ಅಡಿಯಲ್ಲಿತ್ತು. ಮಾವಿನ ಮರದ ಕೊಂಬೆಗಳು ಅವಳ ನೆತ್ತಿಗೆ ಬಡಿದುವು. ಮರದ ಮೇಲಿನಿಂದ ಉದುರಿದ ಹಲಸಿನಕಾಯಿಯಂತೆ ಅವಳನ್ನು ಹೊತ್ತ ಉಯ್ಯಾಲೆ ಸರ ಸರನೆ ಕೆಳಗಿಳಿಯಿತು. ಅವಳಿಗೆ ಉಸಿರು ತೆಗೆದುಕೊಳ್ಳಲು ಅವಕಾಶವಿಲ್ಲ. ಕೆಳಗೆ ಬಂದ ಉಯ್ಯಾಲೆಯನ್ನು

ಲಕ್ಷ್ಮಿ ತನ್ನ ತೋಳಕಸುವನ್ನೆಲ್ಲಾ ಉಪಯೋಗಿಸಿ ಒಚ್ಚಿದಳು. ಎಸೆದ ಕಣೆಯಂತೆ ಉಯ್ಯಾಲೆ ಮೇಲೇರಿತು. ಮಾವಿನ ಎಲೆಗಳು ಚಿರುತೆಯ ನೆತ್ತಿಗೆ ಮುತ್ತಿಕ್ಕಿದುವು. ಅವಳ ತಲೆ ತಿರುಗಿತು. ಕಣ್ಣುಗೆಳಿಗೆ ಕತ್ತಲೆ ಕವಿದಂತಾಯಿತು. ತಾನೀಗ ಉಯ್ಯಾಲೆಯಿಂದ ಕೆಳಗೆ ಉರುಳುವೆನೆಂಬ ಅಂಜಿಕೆ ತಲೆದೋರಿತು. ಅವಳು "ಅಯ್ಯೋ, ಅಕ್ಕ! ಒಚ್ಚುವುದ ನ್ನೊಮ್ಮೆ ನಿಲ್ಲಿಸು!" ಎಂದು ತಲ್ಲಣಗೊಂಡ ಸ್ವರದಲ್ಲಿ ಚೀರಿದಳು.

ಲಕ್ಷ್ಮಿ ಉಯ್ಯಾಲೆ ಒಚ್ಚುವುದನ್ನು ನಿಲ್ಲಿಸಿದಳು. ಅವಳ ಮೋರೆ ಯಲ್ಲಿ ಗೆಲುವು ಕುಣಿದಾಟಿತು. ಚಿರುತೆ ಮೆಲ್ಲನೆ ಉಯ್ಯಾಲೆಯಿಂದ ಕೆಳ ಗಿಳಿದಳು. ಲಕ್ಷ್ಮಿ, "ಚಿರುತೆ, ನೀನು ಸೋತೆಯೋ, ಇಲ್ಲವೋ? ನೀನು ಹೆದರಿ ಹೈರಣಗೊಂಡೆ!" ಎಂದು ತಂಗಿಯನ್ನು ಹಂಗಿಸಿ ಹಲಿಗೆಯ ಮೇಲೆ ಕುಳಿತುಕೊಂಡಳು.

ಚಿರುತೆ ಅಕ್ಕನನ್ನು ಹೆದರಿಸಬೇಕೆಂದು ತನ್ನ ಪುಟ್ಟ ಮೈಯಲ್ಲಿರುವ ಶಕ್ತಿಯನ್ನೆಲ್ಲಾ ಉಪಯೋಗಿಸಿ ಉಯ್ಯಾಲೆಯನ್ನು ಒಚ್ಚಿದಳು. ಆದರೆ ಲಕ್ಷ್ಮಿ "ಚಿರುತೆ, ಇನ್ನೂ ಜೋರಾಗಿ ಒಚ್ಚು" ಎಂದು ನಗುನಗುತ್ತಾ ಹೇಳಿದಳು.

ನಾಯಕ ಉಯ್ಯಾಲೆಯನ್ನು ಕಟ್ಟಿಯಾದ ಮೇಲೆ ತಾನು ಬೇಯಲು ಹಾಕಿದ ಮಿದಿದ ನೆಲ್ಲನ್ನು ನೋಡಲು ಹೋದ. ಆದರೆ ಒಲೆಯಲ್ಲಿ ಉರಿಸಿದ ಬೆಂಕಿ ನಂದಿ ಹೋದುದರಿಂದ ನೆಲ್ಲು ಬೆಂದಿರಲಿಲ್ಲ. ಅವನು ಒಲೆಯೊಳಗೆ ಕಟ್ಟಿಗೆತುಂಡುಗಳನ್ನು ಒಟ್ಟಿ ಮರಳಿ ಬೆಂಕಿ ಮಾಡಿದ. ಶಂಕರನಿಗೆ ಬೆಳಗಿನಿಂದ ಆಹಾರವಿಲ್ಲ; ಹಸಿದ ಆನೆ ಅನಾಹುತವನ್ನು ಎಬ್ಬಿಸೀತು ಎಂದು ಅವನು ಆಲೋಚಿಸಿದ. ಹಾಗೆಯೇ ಅವನು ಬಾಳೆಯ ತೋಟ ದೊಳಗೆ ನುಗ್ಗಿ ಬಾಳೆದಿಂಡುಗಳನ್ನು ಕಡಿದು ತಂದು ಆನೆಗೆ ಮೆಲ್ಲಲು ಹಾಕಿದ. ಹಸಿದ ಆನೆ ಬಾಳೆದಿಂಡುಗಳನ್ನು ಸೊಂಡಿಲಿನಿಂದ ಎತ್ತಿ ಬಾಯೊಳಗೆ ಹಾಕಿಕೊಂಡು ಜಗಿಯತೊಡಗಿತು.

ಶಂಕರ ಬಾಳೆದಿಂಡುಗಳನ್ನು ಮೆದ್ದು ಮುಗಿಸುವಷ್ಟರಲ್ಲಿ ತಾನು ಹೊಳೆಗೆ ಹೋಗಿ ಮಿಂದುಬರುವೆನೆಂದು ನಾಯಕ ಆಲೋಚಿಸಿದ. ಹಾಗೆಯೇ ಅವನು ತನ್ನ ಕೊಳೆವಸ್ತ್ರಗಳನ್ನು ಎತ್ತಿಕೊಂಡು ಹೊಳೆಗೆ

ಹೋದ.

ಶಂಕರ ಬಾಳೆದಿಂಡುಗಳನ್ನು ತಿಂದು ಮುಗಿಸಿದ. ಆದರೆ ಆನೆಯ ಹಸಿವೆ ಹಿಂಗಲಿಲ್ಲ. ನಾಯಕ ಮೀಯಲು ಹೋಗುವಾಗ ಶಂಕರನನ್ನು ಕಟ್ಟಿ ಹಾಕಿರಲಿಲ್ಲ. ತನ್ನಿಂದ ಐವತ್ತು ಅರವತ್ತು ಮಾರುಗಳ ದೂರ ದಲ್ಲಿರುವ ಬಾಳೆಯ ತೋಟ ಆನೆಗೆ ಕಾಣಿಸಿತು. ಗಾಳಿಯಲ್ಲಿ ಕುಣಿ ದಾಡುತ್ತಿರುವ ಸುಳಿ ಬಾಳೆ ಎಲೆಗಳು ತನ್ನನ್ನು ಕೈಮಾಡಿ ಕರೆಯುವಂತೆ ಶಂಕರನಿಗೆ ತೋರಿದುವು. ಅವನು ಆ ಬಾಳೆಗಿಡಗಳನ್ನೆಲ್ಲಾ ಕಿತ್ತು ತನ್ನ ಒಡಲೊಳಗೆ ನೆಡುವೆನು ಎಂದು ಆಲೋಚಿಸಿದ. ಅವನು ಮೆಲ್ಲ ಮೆಲ್ಲನೆ ಬಾಳೆಯ ತೋಟದೆಡೆಗೆ ಅಡಿಗಳನ್ನಿರಿಸುತ್ತಾ ಮೆಣಸಿನ ಕಳದ ಹತ್ತಿರ ಬಂದ.

ಮಾವಿನ ಮರ ಶಂಕರನದಾರಿಗೆ ಅಡ್ಡ ಬಂತು. ಅವನು ಮರದ ಕೊಂಬೆಗಳಿಂದ ಇಳಿದ ಎರಡು ಬಳ್ಳಿಗಳ ನಡುವೆ ಹೆಣ್ಣೊಂದು ತೂಗಾಡು ತ್ತಿರುವುದನ್ನು ನೋಡಿದ. ಇದೇನು ಸೋಜಿಗವೆಂದು ಅವನು ತನ್ನ ಪುಟ್ಟ ಕಣ್ಣುಗಳನ್ನು ಆದಷ್ಟು ಹಿಗ್ಗಿಸಿ ನೋಡಿದ. ಇಲ್ಲೊಂದು ಕೀಟಲೆ ಎಬ್ಬಿಸಿ ಹುಡುಗಿಯರಿಗೆ ಗಾಬರಿ ಮಾಡಬೇಕೆಂಬ ಆಲೋಚನೆ ಅವನಿಗೆ ಹುಟ್ಟಿತು.

ಆ ವೇಳೆಗೆ ಹುಡುಗರಿಬ್ಬರು ಉಯ್ಯಾಲೆ ಅಕ್ಕಂದಿರಿಬ್ಬರಿಗೇ ಮೀಸಲು, ಅವರು ತಮಗೆ ಎಡೆಕೊಡುವ ಹಾಗಿಲ್ಲ ಎಂದು ನಿರಾಶೆ ತಳೆ ದರು. ಅವರು ಅಕ್ಕಂದಿರು ಉಯ್ಯಾಲೆ ಒಚ್ಚುವುದನ್ನು ನೋಡುತ್ತಾ ಕುಳ್ಳಿರುವದರ ಬದಲು ಗುಮ್ಮಟಿ ಮತ್ತು ಪೇರಳೆ ಹಣ್ಣುಗಳನ್ನು ಹುಡುಕು ವುದರಲ್ಲಿ ಹೊತ್ತು ಕಳೆಯುವುದು ಲೇಸೆಂದು ತೋಟದೊಳಗೆ ನುಗ್ಗಿದರು.

ಶಂಕರ ಸದ್ದು ಮಾಡದೆ ಹೆಜ್ಜೆಯ ಮೇಲೆ ಹೆಜ್ಜೆಯನ್ನಿರಿಸುತ್ತಾ ಬಂದು ಮಾವಿನ ಮರದ ಮರೆಯಲ್ಲಿ ನಿಂತ. ಆನೆ ಬಂದುದನ್ನು ಉಯ್ಯಾಲೆ ಯೊಚ್ಚುತ್ತಿದ್ದ ಚಿರುತೆಯಾಗಲೀ ಉಯ್ಯಾಲೆಯಾಡುತಿದ್ದ ಲಕ್ಷ್ಮಿಯಾ ಗಲೀ ಕಾಣಲಿಲ್ಲ. ಚಿರುತೆ ಉಬ್ಬಸ ಬಿಡುತ್ತಾ ತೋಳು ಚಾಚಿ ಉಯ್ಯಾಲೆ ಒಚ್ಚಿದಳು. ಶಂಕರ ಮಾವಿನ ಮರದಡಿಯಿಂದ ಸರಿದು ಚಿರುತೆಯ ಬೆನ್ನ ಹಿಂದೆ ಬಂದು ನಿಂತ ಆನೆ ಇನ್ನೊಂದು ಹೆಜ್ಜೆಯನ್ನು ತೆಗೆದಿರಿಸಿದರೆ ಅದು

ಚಿರುತೆಯ ಮೇಲೆ ಆಗುತ್ತಿತ್ತು. ಆದರೆ ಶಂಕರ ಅಡಿ ಮುಂದಿಡಲಿಲ್ಲ.

ಒಚ್ಚಿದ ಉಯ್ಯಾಲೆ ಮರಳಿ ಸರಿದು ಬಂತು. ಅದನ್ನು ದೂಡಲೆಂದು ಚಿರುತೆ ತೋಳನ್ನೆತ್ತಿದಳು. ಜತೆಯಲ್ಲೇ ಶಂಕರನೂ ತನ್ನ ಸೊಂಡಿಲನ್ನು ಮೇಲೆತ್ತಿದ. ಚಿರುತೆ ತನ್ನ ರಟ್ಟೆಗಳ ಕಸುವನ್ನೆಲ್ಲಾ ಉಪಯೋಗಿಸಿ ಉಯ್ಯಾಲೆಯನ್ನು ದೂಡಿದಳು; ಆದರೆ ಅದು ಮಾತ್ರ ಮುಂದೆ ಸರಿಯಲಿಲ್ಲ.

ಉಯ್ಯಾಲೆ ಏಕೆ ಸಾಗಲಿಲ್ಲವೆಂದು ಚಿರುತೆ ತಲೆ ಎತ್ತಿ ನೋಡಿದಳು.

ಬೆನ್ನ ಹಿಂದೆ ನಿಂತ ಶಂಕರನ ಭೀಮಕಾಯ ಅವಳ ದೃಷ್ಟಿಗೆ ಬಿತ್ತು. ಅವನು ಸೊಂಡಿಲುಚಾಚಿ ಉಯ್ಯಾಲೆಯ ಬೆತ್ತವನ್ನು ಹಿಡಿದಿದ್ದ. ಎಂಟು ಹತ್ತು ಅಡಿಗಳ ಎತ್ತರದಲ್ಲಿದ್ದ ಉಯ್ಯಾಲೆಯ ಹಲಗೆ ಓರೆಯಾಗಿತ್ತು ಲಕ್ಷ್ಮಿ ಭೀತಿಯಿಂದ ಎರಡು ಕೈಗಳಿಂದಲೂ ಬೆತ್ತಗಳನ್ನು ಭದ್ರವಾಗಿ ಹಿಡಿದುಕೊಂಡಳು. ಅವಳು, " ಚಿರುತೆ, ಉಯ್ಯಾಲೆ ಓರೆಯಾಗುತ್ತಿದೆ. ಏಕೆ ಯದ್ವಾ ತದ್ವಾ ಒಚ್ಚುತ್ತಿರುವೆ ? " ಎಂದು ತಂಗಿಗೆ ಹೇಳಿದಳು.

ಭಯದಿಂದ ತತ್ತರಿಸಿ ಹೋದ ಚಿರುತೆ, "ಶಂಕರ ಬಂದಿದ್ದಾನೆ; ಅಕ್ಕ ನನ್ನೀಗ ಕೊಂದು ಬಿಡುತ್ತಾನೆ ! " ಎಂದು ಉಚ್ಚ ದನಿಯಲ್ಲಿ ಚೀರಿದಳು. ಅವಳ ಕೂಗು ಹೊಳೆಯಲ್ಲಿ ಮೀಯಲೆದ್ದ ನಾಯಕನಿಗೆ ಕೇಳಿಸಿತು.

ನಾಯಕ ಆಗ ತಾನೇ ಹೊಳೆಗಿಳಿದು ಒಂದು ಮುಳುಗು ಹಾಕಿ ಬಟ್ಟೆಯ ಸಾಬೂನನ್ನು ಮೈಗುಜ್ಜಿಕೊಂಡು ಕೊಳೆಯನ್ನು ಕಳೆಯುತಿದ್ದ. ಅವನು ಸೋಪನ್ನುಜ್ಜಿ ನೀರಲ್ಲಿ ಒಂದು ಮುಳುಗು ಹಾಕಿ ತಲೆಯೆತ್ತಿದಾಗ ಚಿರುತೆಯ ರೋದನ ಧ್ವನಿ ಕೇಳಿಸಿತು. ತುಂಟ ಶಂಕರ ಬೇರೇನೋ ಗೊಂದಲವೆಬ್ಬಿಸಿದ್ದಾನೆ ಎಂದು ಅವನಿಗೆ ಖಚಿತವಾಯಿತು. ಅವನು ಒದ್ದೆ ಮೈಯನ್ನು ಸಹ ಒರೆಸಿಕೊಳ್ಳದೆ ದಡದ ಮೇಲಿದ್ದ ತುಂಡು ಪಂಚೆಯನ್ನು ಸೊಂಟಕ್ಕೆ ಸುತ್ತಿಕೊಂಡು ಮೆಣಸಿನ ಕಳದೆಡೆಗೆ ಧಾವಿಸಿದ; ಈಗ ಅಂಕುಶ ಅವನ ಬಳಿಯಲ್ಲಿರಲಿಲ್ಲ. ಅದನ್ನು ಪತ್ತಾಯ ಮನೆಯ ಹೊರಜಗಲಿಯಲ್ಲಿ ಬಿಟ್ಟು ಬಂದಿದ್ದ. ಈಗ ಹೋಗಿ ಅದನ್ನೆತ್ತಿಕೊಳ್ಳಲು ಸಮಯವಿರಲಿಲ್ಲ. ಹೊಳೆಯ ಬದಿಯಲ್ಲಿ ಕೈಗೆ ಸಿಕ್ಕಿದ ಬಿದಿರುದೊಣ್ಣೆಯನ್ನೇ ಎತ್ತಿಕೊಂಡು ಓಡಿ ಬಂದ.

ಆನೆಯ ಕಾಲ ಬುಡದಲ್ಲಿದ್ದ ಚಿರುತೆ ಅಲ್ಲಿಂದ ನುಸುಳಿ ಹೋಗಿ ಹತ್ತು ಮಾರು ದೂರದಲ್ಲಿ ನಿಂತಿದ್ದಳು. ಶಂಕರ ತಾನು ಸೊಂಡಿಲಲ್ಲಿ ಹಿಡಿದ ಬೆತ್ತವನ್ನು ಬಿಟ್ಟಿರಲಿಲ್ಲ. ಲಕ್ಷ್ಮಿಯ ಪೃಷ್ಠಭಾಗ ಹಲಗೆಯ ಮೇಲಿಂದ ತಪ್ಪಿ ಹೋಗಿತ್ತು. ಅವಳು ಎರಡೂ ಕೈಗಳಿಂದಲೂ ಉಯ್ಯಾಲೆಯ ಹಲಿಗೆ ಯನ್ನು ಹಿಡಿದು ನೇಲುತ್ತಿದ್ದಳು. ಆ ಮೊಗದಲ್ಲಿ ಭಯ ಕಾತರತೆಗಳು ತುಂಬಿದ್ದುವು. ಅವಳು ಚೀರಲು ಪ್ರಯತ್ನಿಸಿದಳು. ಆದರೆ ಕೊರಳಿಂದ ಧ್ವನಿ ಹೊರಡಲಿಲ್ಲ. ನಾಯಕನನ್ನು ಕಂಡೊಡನೆ ವಿಹ್ವಲತೆಗೊಂಡ ಆಕೆಯ ಕಣ್ಣುಗಳು, " ನನ್ನ ಜೀವ ಉಳಿಸಿಕೊಡು " ಎಂದು ಬೇಡಿ ಕೊಂಡುವು.

ನಾಯಕ ಆನೆಯ ಹತ್ತಿರ ಸರಿದು, "ಶಂಕರ, ಇದೇನು ನಿನ್ನ ಪುಂಡು ! ನೀನು ಪುಟ್ಟ ಪಾಪಾತಿಗೆ ಕೇಡು ಮಾಡುವುದೇ ? ಬಿಡು ! " ಎಂದು ಗಜರಿದ.

ಆನೆ ತನ್ನ ಪುಟ್ಟ ಕಣ್ಣುಗಳನ್ನೊಮ್ಮೆ ಅಗಲಿಸಿ ನಾಯಕನ ಮೋರೆ ಯನ್ನು ನೋಡಿತು. ಅದರ ನೋಟ, " ನೀನು ಹೇಳಿದಂತೆಯೇ ನಾನು ಹಗಲೆಲ್ಲ ಕಾಡಿನಿಂದ ಮರವನ್ನೆಳೆದೆ. ಈಗ ನನ್ನ ವಿನೋದಕ್ಕೆ ಅಡ್ಡಿ ಬರ ಬೇಡ. " ಎಂದು ಹೇಳುವಂತಿತ್ತು.

" ಬಿಡು ಬಿಡು; ಇಲ್ಲದಿದ್ದರೆ ನಿನ್ನನ್ನು ಸೀಳಿಹಾಕಿ ಬಿಡುತ್ತೇನೆ ! " ಎಂದು ಒದರುತ್ತಾ ನಾಯಕ ತಾನು ಕೈಯಲ್ಲಿ ಹಿಡಿದ ಬಿದಿರ ದೊಣ್ಣೆ ಯಿಂದ ಆನೆಯ ಸೊಂಡಿಲಿಗೆ ಪಠಾರನೆ ಬಡಿದ.

ಮಾವುತನು ಕೊಟ್ಟ ಪೆಟ್ಟು ಶಂಕರವನ್ನು ಹೆದರಿಸುವುದರ ಬದಲು ಕೆರಳಿಸಿತು. ಅದು ತನ್ನ ಸೊಂಡಿಲಿನಿಂದ ಇಮ್ಮಡಿ ಶಕ್ತಿಯನ್ನು ಉಪ ಯೋಗಿಸಿ ಬೆತ್ತವನ್ನು ಎಳೆಯಿತು. ಆನೆಯ ಎಳೆತದ ಕಸುವನ್ನು ತಾಳಿ ಕೊಳ್ಳುವ ತ್ರಾಣ ಬೆತ್ತಗಳನ್ನು ಬಿಗಿದ ಮಾವಿನ ಕೊಂಬೆಗಿರಲಿಲ್ಲ. ಅದು ಝರಝಟಸಿ ಮುರಿಯಿತು. ಆನೆಯ ಸೆಳೆತದ ರಭಸಕ್ಕೆ ಉಯ್ಯಾಲೆಯ ಹಲಿಗೆ ಬಿರುಗಾಳಿಗೆ ಸಿಲುಕಿದ ಮರದ ಕೊಂಬೆಯಂತೆ ಓಲಾಡಿತು.

ಉಯ್ಯಾಲೆಯ ಹಲಿಗೆ ನೆಲದಿಂದ ಸುಮಾರು ಎಂಟಡಿ ಎತ್ತರದಲ್ಲಿದ್ದಿತು. ಲಕ್ಷ್ಮಿ ಅಷ್ಟು ಎತ್ತರದಿಂದ ಬಿದ್ದರೆ ಆಕೆಯ ಕೈ ಕಾಲುಗಳು ಮುರಿಯದೆ

ಇರವು. ಹಲಗೆಯ ಓಲಾಟದಲ್ಲಿ ಲಕ್ಷ್ಮಿಯ ಹಿಡಿತ ತಪ್ಪಿಹೋಯಿತು. ಶಂಕರ ಎಳೆತದ ಸ್ಪರ್ಧೆಯಲ್ಲಿ ತಾನು ಗೆಲುವನ್ನು ಗಳಿಸಿದೆಂಬ ಹೆಮ್ಮೆ ಯಿಂದ ಆನೆಕಾರನನ್ನೊಮ್ಮೆ ನೋಡಿ, ಉಯ್ಯಾಲೆಯನ್ನೂ ಉಯ್ಯಾಲೆ ಯನ್ನು ಬಿಗಿದ ಮಾವಿನ ಕೊಂಬೆಯನ್ನೂ ನಾಲ್ಕು ಮಾರು ಎಳೆದು ಕೊಂಡು ಹೋಗಿ ನಿಂತಿತು.

ಲಕ್ಷ್ಮಿ ನೆಲದ ಮೇಲೆ ಬಿದ್ದು ಕೈಕಾಲುಗಳನ್ನು ಮುರಿದುಕೊಳ್ಳುವ ಪ್ರಸಂಗ ಬಂದೇ ಬಿಟ್ಟಿತು. ಆದರೆ ರೆಪ್ಪೆ ಮಿಟುಕಿಸುವ ವೇಳೆಯಲ್ಲಿ ನಾಯಕ ಮುಂದೆ ನೆಗೆದು ತನ್ನ ಎರಡು ತೋಳುಗಳನ್ನೂ ಒಡ್ಡಿದ. ಲಕ್ಷ್ಮಿ ರಭಸದಿಂದ ಅವನೊಡ್ಡಿದ ತೋಳುಗಳ ಮೇಲೆ ಬಿದ್ದಳು. ಮರದ ತುದಿ ಯಿಂದ ಎಸೆದ ಹಲಸಿನ ಕಾಯಿಯನ್ನು ಹಿಡಿಯುವಂತೆ ಅವನು ಆ ಹುಡುಗಿಯನ್ನು ತನ್ನ ತೋಳುಗಳಲ್ಲಿ ಹಿಡಿದ. ಆದರೆ ಅವಳು ಮೇಲಿ ನಿಂದ ಬಿದ್ದ ರಭಸವನ್ನು ತಾಳಿಕೊಳ್ಳಲು ಅವನಿಂದಾಗಲಿಲ್ಲ. ಅವನು ನೆಲದ ಮೇಲೆ ಬಿದ್ದು ಹೋದ. ಅವನ ಕುಂಡಿ ಮತ್ತು ಬೆನ್ನುಗಳು ಜಜ್ಜಿ ಹೋದುವು. ಆದರೆ ಲಕ್ಷ್ಮಿ ಅವನ ಮೇಲೆ ಬಿದ್ದುದರಿಂದ ಆಕೆ ಗೇನೂ ಪೆಟ್ಟಾಗಲಿಲ್ಲ. ಅವಳು ನೆಲದ ಮೇಲೆಸೆದ ಚಂಡಿನಂತೆ ಬಿದ್ದ ಲ್ಲಿಂದ ಪುಟಿದೆದ್ದಳು.

ಭಯ, ವಿಸ್ಮಯ, ಲಜ್ಜೆ, ಹೀಗೆ ವಿವಿಧ ಭಾವಗಳು ಏಕಕಾಲದಲ್ಲಿ ಆಕೆಯ ಮೋರೆಯ ಮೇಲೆ ಮೂಡಿ ಮಿನುಗಿದುವು. ಕುರುಬ ಹುಡುಗನ ದೇಹಸ್ಪರ್ಶದಿಂದ ಒದಗಿದ ಸುಖಸಂವೇದನೆಯ ಮೊದಲು ತಲೆ ದೋರಿದ ಭಯ ವಿಸ್ಮಯಗಳನ್ನು ತೊಡೆದು ಹಾಕಿತು. ದೂರದಲ್ಲಿ ನಿಂತು ಕಣ್ಣಾಗಲಿಸಿ ನೋಡುತ್ತಿದ್ದ ಚಿರುತೆ ಅಲ್ಲಿರದಿದ್ದರೆ ಲಕ್ಷ್ಮಿ ಬಿದ್ದಲ್ಲಿಂದ ಏಳಲು ಇನ್ನೂ ಒಂದೆರಡು ನಿಮಿಷ ತಡ ಮಾಡುತ್ತಿದ್ದಳು.

ಈ ಘಟನೆ ಮಾವನ ಕಿವಿಗಳಿಗೆ ಏನಾದರೂ ಬಿದ್ದರೆ ಇರುಳು ನಾಯಕನಿಗೆ ಮತ್ತೊಮ್ಮೆ ಬೆತ್ತದ ಪೂಜೆಯಾಗುವುದು ಎಂಬುದನ್ನು ಲಕ್ಷ್ಮಿ ಬಲ್ಲಳು. ಆದುದರಿಂದ ಅವಳು ತಂಗಿಯನ್ನು ಕರೆದು, " ನೋಡು, ಚಿರುತೆ ಈಗ ನಡೆದ ಸಂಗತಿಯನ್ನು ಮಾವನ ಮುಂದಾಗಲೀ, ಅತ್ತೆಯ ಮುಂದಾಗಲೀ ಎತ್ತಬೇಡ. ನೀನೇನಾದರೂ ಬಾಯಿ ಬಿಟ್ಟರೆ ನಮಗೆಲ್ಲ

ರಿಗೂ ಮಾವನಿಂದ ಬೆತ್ತದ ಪೂಜೆಯಾಗುವುದು ಖಂಡಿತ!" ಎಂದು ಎಚ್ಚರಿಕೆ ಹೇಳಿದಳು.

ನಾಯಕ ಬಿದ್ದಲ್ಲಿಂದ ಎದ್ದು ತನ್ನ ಬೆನ್ನು ಮತ್ತು ಕುಂಡಿಗಳನ್ನು ಕೈಗಳಿಂದ ಉಜ್ಜಿಕೊಂಡ. ಲಕ್ಷ್ಮಿ "ನಾಯಕ, ನಿನಗೆ ತುಂಬಾ ಪೆಟ್ಟಾಯಿತೆ?" ಎಂದು ಕೇಳಿದಳು.

"ನನಗೆ ಪೆಟ್ಟಾದುದು ನಿಮ್ಮ ಜೀವಕ್ಕಿಂತ ಹೆಚ್ಚಾದುದಲ್ಲ. ಶಂಕರನಿಗೆ ಬಾಳೆದಿಂಡುಗಳನ್ನು ಕಡಿದು ಹಾಕಿ, ನಾನು ಮೀಯಲೆಂದು ಹೋದೆ. ಅವನಿಷ್ಟು ಅನರ್ಥವೆಬ್ಬಿಸಿಯಾನು ಎಂದು ನಾನು ಎಣಿಸಿರಲಿಲ್ಲ" ಎಂದು ನುಡಿದು ನಾಯಕ ಶಂಕರನನ್ನು ಕಟ್ಟಿಹಾಕಲೆಂದು ಅಟ್ಟಿಕೊಂಡು ಹೋದ.



ಕೊನೆಗೊಮ್ಮೆ ನಾಯಕನಿಗೆ ಪಾಪನ ಮನೆಯನ್ನು ಬಿಟ್ಟು ದೂರ ವಾಸಮಾಡಬೇಕಾದ ಪ್ರಸಂಗವೊದಗಿತು. ಕಲ್ಲಾಯಿಮರದ ವ್ಯಾಪಾರಿ ಪೋಕರಕಾಕ ಕುಪ್ಪತ್ತೋಡಿ ಮಲೆಯನ್ನು ಗೇಣಿಗೆ ಹಿಡಿದುಕೊಂಡಿದ್ದ. ಅಲ್ಲಿರುವ ಮರಗಳನ್ನೆಲ್ಲಾ ಕಡಿಸಿ ಕಲ್ಲಾಯಿಯ ಮರ ಸಿಗಿಯುವ ಕಾರ್ಖಾನೆಗಳಿಗೆ ಮಾರುವುದೇ ಅವನ ಮುಖ್ಯ ಕಾಯಕ. ಕಾಡಿನಲ್ಲಿ ಕಡಿದುರುಳಿಸಿದ ಮರದ ತೊಲೆಗಳನ್ನು ಲಾರಿಗಳು ಓಡುವ ಮಾರ್ಗದ ಬದಿಗೆ ಸಾಗಿಸಲು ಆತನಿಗೆ ಆನೆಗಳು ಬೇಕಾಗಿದ್ದುವು. ಅವನು ಶಂಕರನ ಯಜಮಾನ ಕೇಳುಕುಟ್ಟಿ ನಾಯರರನ್ನು ಆನೆಯನ್ನು ಕೆಲವು ತಿಂಗಳ ಮಟ್ಟಿಗೆ ತನಗೆ ಬಾಡಿಗೆಗೆ ಕೊಡಬೇಕೆಂದು ಕೇಳಿದ. ವ್ಯಾಪಾರಿ ಎಲ್ಲಾ ಖರ್ಚು ಕಳೆದು ಆನೆಗೆ ದಿನಕ್ಕೆ ಹತ್ತುರೂಪಾಯಿ ಬಾಡಿಗೆ ಕೊಡುವೆನೆಂದು ಹೇಳಿದ. ಇದು ನಾಯರರಿಗೆ ತುಂಬಾ ಆಕರ್ಷಕವಾಗಿ ಕಂಡಿತು. ಅವರು ಶಂಕರನನ್ನು ಬಾಡಿಗೆಗೆ ಕೊಡುವೆನೆಂದು ಮರವ್ಯಾಪಾರಿಗೆ ಮಾತುಕೊಟ್ಟುಬಿಟ್ಟರು.

ತಮಗೆ ದುಡ್ಡು ಬರುವುದೆಂದು ನಾಯರರಿಗೆ ಸಂತೋಷವಾದರೂ

ನಾಯಕನಿಗೆ ಮಾತ್ರ ದುಃಖವಾಯಿತು. ಕುಪ್ಪತ್ತ್ರೋಡಿನಲ್ಲಿ ಅವನಿಗೆ ಅನ್ನ ಹಾಕುವವರು ಯಾರೂ ಇರಲಿಲ್ಲ. ಮರದ ವ್ಯಾಪಾರಿಯ ಕಾರ್ಯಕಾರ ಮೂಸೆ ಚೆಟ್ಟಿಯು ಅನ್ನ ಹಾಕುವೆನೆಂದು ಹೇಳಿದರೂ ಚೆಟ್ಟಿಯನ ಅನ್ನ ವನ್ನುಣುವುದು ನಾಯಕನ ಜಾತಿ ಪದ್ಧತಿಗೆ ನಿಷಿದ್ಧ. ಆದುದರಿಂದ ಅವನು ಕುಪ್ಪತ್ತ್ರೋಡಿನಲ್ಲಿ ತನ್ನ ಕೂಳನ್ನು ತಾನೇ ಬೇಯಿಸಿಕೊಳ್ಳ ಬೇಕಾಯಿತು. ಪಾಪನ ಮನೆಯಲ್ಲಿ ದೊರೆಯುವ ಸವಿಸವಿಯಾದ ತಿಂಡಿ ಗಳು ಅಲ್ಲಿ ಅವನಿಗೆ ದೊರೆಯುವ ಹಾಗಿಲ್ಲ. ಪುಟ್ಟ ಪಾಪತಿಯರ ನಗು ಮಾತುಗಳು, ಪುಟ್ಟ ಪಾಪಂದಿರ ಆಟ ವಿನೋದಗಳು ಅಲ್ಲಿ ಅವನ ಜೀವ ವನ್ನು ಅರಳಿಸುವಂತಿಲ್ಲ. ಕಾಡನ್ನೇ ನಾಡೆಂದು ಬಗೆಯುವ ಕುರುಬರ ಕುಲದಲ್ಲಿ ಅವನು ಹುಟ್ಟಿದ್ದರೂ, ಅವನಿಗೆ ಕುಪ್ಪತ್ತ್ರೋಡು ಮಲೆ ಬೇಸ ರಿಕೆಯನ್ನು ತಂದೊಡ್ಡಿತು. ಸಾಲದುದಕ್ಕೆ ದುಡಿತವನ್ನು ತೆಗೆದುಕೊಳ್ಳುವ ಕಾರ್ಯಕಾರ ಮೂಸೆ ಚೆಟ್ಟಿಯು ಕರುಣೆಯುಳ್ಳ ಆಸಾಮಿಯಾಗಿರಲಿಲ್ಲ. ಕಬ್ಬಿನಲ್ಲಿರುವ ರಸವನ್ನೆಲ್ಲಾ ಹಿಂಡುವ ಹಾಗೆ ಆನೆಯಿಂದ ಆದಷ್ಟು ದುಡಿಸಿ ಕೊಳ್ಳಬೇಕೆಂಬ ಹಂಬಲ ಆತನದು. ಆದುದರಿಂದ ಅವನು ದುಡಿವ ಆನೆಗಳಿಗೆ ಸಾಕಷ್ಟು ವಿಶ್ರಾಂತಿಯನ್ನು ಕೊಡುತ್ತಿರಲಿಲ್ಲ.

ನಾಯಕ, "ಆನೆಯಿಂದ ಒಂದೇಸಮನೆ ದುಡಿಸಲಾಗುವುದಿಲ್ಲ; ಆನೆಗೆ ವಿಶ್ರಾಂತಿಬೇಕು. ನನಗೆ ಆನೆಯ ಸೇವೆ ಮತ್ತು ಉಪಚಾರಗಳನ್ನು ಮಾಡಲು ವೇಳೆಬೇಕು." ಎಂದು ವಾದಿಸಿದರೆ ಮೂಸೆ ಚೆಟ್ಟಿಯು ಕಿಡಿ ಕಿಡಿಯಾಗುತಿದ್ದ. ಅವನು ಕಣ್ಣು ಕೆರಳಿಸಿಕೊಂಡು, "ನಾವು ಆನೆಗೆ ದಿನಕ್ಕೆ ಹತ್ತು ರೂಪಾಯಿ ಬಾಡಿಗೆ ಕೊಡುತಿದ್ದೇವೆ. ನಮಗೆ ಆನೆ ಸಾಕುವ ವಿಷಯದಲ್ಲಿ ಉಪದೇಶಕೊಡಿಸಲು ನಿನ್ನ ಕರೆಸಲಿಲ್ಲ. ನಾವು ಹೇಳಿದಷ್ಟು ಹೊತ್ತು ಆನೆಯಿಂದ ದುಡಿಸುವುದು ನಿನ್ನ ಕೆಲಸ." ಎಂದು ನಾಯಕನನ್ನು ಗದರಿಸುತಿದ್ದ.

ಕುರುಬನೆಂದರೆ ಈ ಚೆಟ್ಟಿಯರಿಗೆಲ್ಲಾ ಅಸಡ್ಡೆ; ತನ್ನ ಮಾತಿಗೆ ಅವರು ಬೆಲೆ ಕೊಡಲಾರರು; ಆದಷ್ಟು ಬೇಗ ಈ ಕತ್ತರಿಯೊಳಗಿಂದ ಪಾರಾಗಿ ಹೋದರೆ ಸಾಕು ಎಂದು ನಾಯಕ ದಿನಗಳನ್ನು ಎಣಿಸುತಲಿದ್ದ.

ಕುಪ್ಪತ್ತ್ರೋಡು ಮಲೆಯಂಚಿನಲ್ಲಿಯೇ ಮಾನಂದವಾಡಿ ಹೊಳೆ

ಹರಿದು ಬರುವುದು. ನಾಯಕ ಅದೊಂದು ದಿನ ಮಧ್ಯಾಹ್ನ ಎರಡು ಗಂಟೆಯವರೆಗೆ ಆನೆಯಿಂದ ಮರವನ್ನೆಳಸಿದ. ತೊಲೆಗಳನ್ನು ಎಳೆದು ತಂದು ಲಾರಿ ಓಡುವ ಮಾರ್ಗದ ಅಂಚಿನಲ್ಲಿ ಹಾಕಿ ಶಂಕರ ದಣಿದು ಹೋದ. ಶಂಕರನ ಇಮ್ಮಡಿ ನಾಯಕ ಬಳಲಿದ್ದ. ಎರಡು ಗಂಟೆಯಾಗಲು ನಾಯಕ ಕೆಲಸವನ್ನು ನಿಲ್ಲಿಸಿ ಮಾನಂದವಾಡಿ ಹೊಳೆಯ ದಂಡೆಯಲ್ಲಿ ಮೂರು ಕಲ್ಲುಗಳನ್ನು ಜೋಡಿಸಿ ಒಲೆ ಹಾಕಿದ. ನಾಲ್ಕು ಓಣಕೊಂಬೆ ಗಳನ್ನು ಮುರಿದು ತಂದು ಒಲೆಯೊಳಗೆ ಸೇರಿಸಿ ಬೆಂಕಿಯನ್ನುರಿಸಿದ. ಮಡಿಕೆಯೊಳಗೆ ಒಂದು ಬೋಗಸೆ ಅಕ್ಕಿಯನ್ನು ಹಾಕಿ ಒಲೆಯ ಮೇಲೆ ಗಂಜಿಯನ್ನು ಬೇಯಲಿರಿಸಿದ. ಹೊಳೆ ದಂಡೆಯಲ್ಲಿದ್ದ ಒಂದು ಹಲಸಿನ ಮರವನ್ನು ಹತ್ತಿ ಕೊಂಬೆಗಳನ್ನು ಕಡಿದು ಆನೆಗೆ ಮೆಲ್ಲಲು ಹಲಸಿನ ಸೊಪ್ಪನ್ನು ಹಾಕಿದ. ಶಂಕರ ಹಸಿರು ಹಲಸಿನೆಲೆಗಳನ್ನು ಆನಂದದಿಂದ ಮೆಲ್ಲತೊಡಗಿದ.

ಗಂಜಿ ಬೇಯುವ ಹೊತ್ತಿನಲ್ಲಿ ತಾನು ಹೊಳೆಯ ತಣ್ಣೀರಿನಲ್ಲಿ ಮಿಂದು ದಣಿವಾರಿಸಿಕೊಳ್ಳುವೆನೆಂದು ನಾಯಕ ಹೊಳೆಗಿಳಿದ. ನದಿ ಬೆಟ್ಟದ ಮಗ್ಗುಲಲ್ಲಿ ಹರಿದು ಬರುತಿದ್ದಿತು. ಇಕ್ಕಡೆಗಳಲ್ಲಿ ಬೆಳೆದ ಮರ ಗಳು ನದಿಯ ಮೇಲೆ ಕೊಂಬೆಗಳನ್ನು ಚಾಚಿ ನೆರಳನ್ನು ಹರಡಿದ್ದುವು. ಆದುದರಿಂದ ನಡುಮಧ್ಯಾಹ್ನದ ಹೊತ್ತು ಸಹ ನದಿಯ ನೀರು ತಂಪಾ ಗಿತ್ತು. ನಾಯಕನ ಬಳಲಿದ ಮೈ ಕೈಗಳಿಗೆ ಆ ನೀರು ಬಹು ಆಪ್ಯಾಯ ಮಾನವಾಗಿತ್ತು.

ನಾಯಕನ ಚಿತ್ತ ಸ್ಥಿಮಿತದಲ್ಲಿರಲಿಲ್ಲ: ಅದು ಪಾಪನ ಮನೆಯ ಕಡೆಗೆ ಓಡುತಿತ್ತು. ಅಲ್ಲಿ ತಾನು ತಿನ್ನುತಿದ್ದ ದೋಸೆ, ಕಡುಬು ಮತ್ತು ನೇಂದ್ರ ಬಾಳೆಹಣ್ಣುಗಳನ್ನೆಲ್ಲಾ ಅವನು ನೆನಪಿಗೆ ತಂದುಕೊಂಡ. ಅವ ನಿಗೆ ಉಣಿಸು ತಿನಸುಗಳನ್ನು ಬಡಿಸುತಿದ್ದ ಲಕ್ಷ್ಮಿಯ ರೂಪ ಅವನ ಕಣ್ಣುಗಳ ಮುಂದೆ ಸುಳಿಯಿತು. ಪಾಪ ತನ್ನನ್ನು ಬೆತ್ತದಿಂದ ಹೊಡೆ ಯುತ್ತಾನೆ; ದೊಡ್ಡ ಪಾಪಾತಿ ತನ್ನನ್ನು ಬೈದು ಗದರಿಸುತ್ತಾಳೆ; ಮರಿ ಪಾಪಾತಿ ತನ್ನ ಅಣಕಿಸಿ ಗೇಲಿ ಮಾಡುತ್ತಾಳೆ. ಆದರೆ ಪುಟ್ಟ ಪಾಪಾತಿ ತನ್ನನ್ನು ಅಣಕಿಸುವುದೂ ಇಲ್ಲ; ಬೈಯುವುದೂ ಇಲ್ಲ; ಊಟ ತಿಂಡಿ

ಗಳಲ್ಲಿ ವಂಚನೆ ಮಾಡುವುದೂ ಇಲ್ಲ. "ನೀನು ಹೊಟ್ಟೆಬಾಕ; ಬಂಡಿ ಭೀಮ" ಎಂದು ತೆಗಳದೆ ಅವಳು ಬೇಕುಬೇಕಾದಷ್ಟು ಕಡಬು ದೋಸೆ ಗಳನ್ನು ಬಡಿಸುತ್ತಾಳೆ. ಅವಳಾಡುವ ಸವಿಮಾತುಗಳು ಊಟ ತಿಂಡಿಗಳ ರುಚಿಯನ್ನು ಹೆಚ್ಚಿಸುತ್ತವೆ. ಅವನು ದುಡಿದು ತೊಡಿಗೆ ಬಂದನೆಂದರೆ ಮೊದಲು ಒಡಲಿಗೆ ಕೂಳು ಕಾಣಿಸಿದ ಮೇಲೆಯೇ ಇತರ ಕೆಲಸಗಳನ್ನು ಹೇಳುತ್ತಾಳೆ.

ಆದುದರಿಂದಲೇ ನಾಯಕ ಪಾಪನ ತೊಡಿಯಲ್ಲಿ ಹಸಿವೆಯ ಚಿಂತೆ ಯಿಲ್ಲದೆ ಉಲ್ಲಾಸದಿಂದ ಕಾಲಕಳೆಯುತಿದ್ದ. ಆದರೆ ಇಲ್ಲಿ! ದಿನವೆಲ್ಲ ದುಡಿದು ಬಂದ ಮೇಲೆ ತನ್ನ ಕೂಳನ್ನು ತಾನೇ ಬೇಯಿಸಿಕೊಳ್ಳಬೇಕು. ಉಪ್ಪುಕಾರಗಳಿಲ್ಲದೆ ಬೇರೆ ಯಾವ ಸವಿಯೂ ಆ ಉಣಿಸಿಗಿಲ್ಲ. "ನನಗೆ ಕಾಫಿ ಕಾಯಿಸಲು ಬೆಲ್ಲ ಬೇಕು; ಮೆಲ್ಲಲು ಅವಲಕ್ಕಿ ಬೇಕು; ತೆಂಗಿನ ಕಾಯಿ ಬೇಕು. ರೊಕ್ಕ ಕೊಡಿ." ಎಂದು ಗೋಗರೆದು ಬೇಡಿದರೂ ಸಹ ಮೂಸೆ ಚೆಟ್ಟಿಯು ತನ್ನ ಸಂಚಿಯನ್ನು ಬಿಚ್ಚುವ ಹಾಗಿಲ್ಲ. ಅವನು ಕಣ್ಣು ಕೆಂಪು ಮಾಡಿಕೊಂಡು, "ನೀನು ಕಾಡಿನಲ್ಲಿ ಹುಟ್ಟಿ ಬೆಳೆದ ಕುರುಬ. ಮೊಲ ಮಂಗಗಳ ಮಾಂಸವನ್ನು ಬಿಟ್ಟು, ಏಡಿ ಮೀನುಗಳ ಉಣಿಸನ್ನು ಬಿಟ್ಟು ನಿನಗೇಕೆ ಬೆಲ್ಲ, ತೆಂಗಿನಕಾಯಿ ಮತ್ತು ಅವಲಕ್ಕಿಗಳ ಚಿಂತೆ? ನಿನಗೆ ರಾಜೋಪಚಾರ ಮಾಡಿ ಕಳುಹಿಸೋಣವೆಂದು ಇಲ್ಲಿಗೆ ಕರೆಸಲಿಲ್ಲ. ನಿನ್ನನ್ನು ದುಡಿಸಲೆಂದು ಕರೆಸಿದ್ದೇವೆ." ಎಂದು ಬೈಯು ತ್ತಿದ್ದ. ಎಂಟಾಣೆ ಕೊಡಬೇಕಾದಲ್ಲಿ ಎರಡಾಣೆ ಕೊಟ್ಟು ಕಳುಹುತಿದ್ದ. ಈ ಬೈಗಳು ಗದರಿಕೆಗಳನ್ನು ಕೇಳಿ ಕೇಳಿ ನಾಯಕನಿಗೆ ಸಾಕಾಗಿ ಹೋಯಿತು. ಅವನು ಕೊನೆಗೆ ಕಾರ್ಯಕಾರನನ್ನು ದುಡ್ಡು ಕೇಳುವು ದನ್ನೇ ಬಿಟ್ಟು ಬಿಟ್ಟ. ಅವನು ಕೊಟ್ಟುದನ್ನು ತೆಗೆದುಕೊಂಡು ಸುಮ್ಮ ನಾಗುತಿದ್ದ.

ನಾಯಕ ಹೊಳೆಯಲ್ಲಿ ಮಿಂದುಕೊಂಡು ಬಂದಾಗ ಒಲೆಯ ಮೇಲೆ ಕುದಿಯುತಿದ್ದ ಗಂಜಿ ಬೆಂದಿತ್ತು. ಅವನು ತನ್ನ ಸಂಚಿಯೊಳಗಿಂದ ತೆಂಗಿನ ಚಿಪ್ಪಿನ ಸಾಟನ್ನು ತೆಗೆದು ಅದರಲ್ಲಿ ಮಡಿಕೆಯೊಳಗಿನ ಗಂಜಿಯನ್ನೆತ್ತಿದ. ಅವನು ಸುಡುತ್ತಿರುವ ಗಂಜಿಯನ್ನು ಬಾಯಿಯಿಂದ ಊದಿ ತಣಿಸುತ್ತಾ

ಕುಡಿಯಲಾರಂಭಿಸಿದ. ನಂಚಿಕೊಳ್ಳಲು ವ್ಯಂಜನಗಳೇನೂ ಇರಲಿಲ್ಲ. ಅವನು ಒಣಮೆಣಸಿನಕಾಯಿಗಳನ್ನು ಹಲ್ಲುಗಳಿಂದ ಕಡಿಯುತ್ತಾ ಗಂಜಿ ಯನ್ನುಣಬೇಕಾಯಿತು.

ನಾಯಕ ಹೊಳೆದಂಡೆಯಲ್ಲಿ ಕುಳಿತು ಗಂಜಿ ಕುಡಿಯುತ್ತಾ ನೀರಲ್ಲಿ ಕಾಣುತ್ತಿರುವ ತನ್ನ ಪ್ರತಿಬಿಂಬವನ್ನು ನಿಟ್ಟಿಸಿ ನೋಡಿದ. ಅವನ ಮೈ ಕೈಗಳು ಸೊರಗಿ ಹೋಗಿದ್ದುವು. ಮೊಗದಲ್ಲಿ ಹಿಂದಣ ಕಾಂತಿ ಇರ ಲಿಲ್ಲ. ಬಾಡಿಸಿದ ಬಾಳೆಲೆಯಂತಿತ್ತು ಆ ಮೋರೆ.

"ಹೌದು. ಒಂದು ತಿಂಗಳಲ್ಲಿ ನಾನು ತುಂಬಾ ಸೊರಗಿ ಹೋಗಿ ದ್ದೇನೆ." ನಾಯಕ ನೀರಲ್ಲಿ ತೋರಿದ ನೆರಳಿಂದ ಕಣ್ಣು ತೆಗೆಯದೆ ಉದ್ಗಾರವೆತ್ತಿದ: "ಇದರಲ್ಲಿ ಸೋಜಿಗವೇನೂ ಇಲ್ಲ. ಪಾಪನ ತೊಡಿ ಯಲ್ಲಿದ್ದಾಗ ಬೆಳಿಗ್ಗೆ ಎಂಟು ಹತ್ತು ದೋಸೆಗಳನ್ನು ತಿನ್ನುತಿದ್ದೆ. ಮಧ್ಯಾಹ್ನ ಇರುಳು ಅಚ್ಚೇರು ಅಕ್ಕಿಯ ಅನ್ನವನ್ನುಣಿತಿದ್ದೆ. ಆದರೆ ಇಲ್ಲಿ ಅರೆಪಾವು ಅಕ್ಕಿಯ ಗಂಜಿಯನ್ನು ಸಹ ಉಣಲು ಬೇಸರವಾಗುವುದು. ಒಂದು ಪಾವು ಅಕ್ಕಿಯ ಕೂಳು ಸಹ ಗಂಟಲೊಳಗೆ ಇಳಿಯುವುದಿಲ್ಲ. ಪಾಪನ ತೊಡಿಯಲ್ಲಿ ಬೆಳಿಗ್ಗೆ ನಂಚಿಕೊಳ್ಳಲು ಚಟ್ನಿ ಇರುತಿದ್ದಿತು. ಮಧ್ಯಾಹ್ನ ಮೇಲೋಗರ, ಪಲ್ಯ, ಪಚ್ಚಡಿ ಮತ್ತು ಮಗಮಗಿಸುವ ಉಪ್ಪಿನಕಾಯಿ—ಇವು ಇರುತಿದ್ದುವು. ಇಲ್ಲಿ ನಂಚಿಕೊಳ್ಳಲು ಇರುವ ದೇನು ? ಬರೀ ಒಣ ಮೆಣಸಿನಕಾಯಿ ! ಬೆಳಿಗ್ಗೆ ಹಾಳು ಕೊರಕಲು, ಅವ ಲಕ್ಕಿ ಮತ್ತು ತೆಂಗಿನಕಾಯಿ ಹೋಳು !"

ಈ ಬಗೆಯ ಆಲೋಚನೆ ಚಿತ್ತದಲ್ಲಿ ಸುಳಿಯಲು ಅವನು ಕುಡಿಯು ತಿದ್ದ ಗಂಜಿ ನಾಲಿಗೆಗೆ ರಸವಿಹೀನವಾಯಿತು. ಈ ಹಾಳು ಗಂಜಿ ಬೇಡ; ನದಿಯಲ್ಲಿ ಚೆಲ್ಲಿ ಬಿಡುವೆನೆಂದು ಅವನು ಮಡಿಕೆಯನ್ನು ಮೇಲೆತ್ತಿದ. ಆದರೆ ಸಂಜೆಯು ವರೆಗೆ ಈ ಹಾಳು ಹೊಟ್ಟೆ ಸುಮ್ಮನಿರಬೇಕಲ್ಲ; ಸಂಜೆಯ ವರೆಗೆ ಮರಳಿ ದುಡಿಯಬೇಕಲ್ಲ ! ಪಾಪನ ಮನೆಯಲ್ಲಿದ್ದಾಗ ಶಂಕರ ನಿಂದ ದುಡಿಸುವುದೆಂದರೆ ಅದೊಂದು ಉಲ್ಲಾಸವಾಗಿತ್ತು; ಆದರೆ ಇಲ್ಲಿ ಅದೊಂದು ಯಾತನೆ !

ನಾಯಕ ಚಲ್ಲಬೇಕೆಂದು ಎತ್ತಿದ ಗಂಜಿ ಮಡಿಕೆಯನ್ನು ಮರಳಿ

ಗಿಳಿಸಿದ. ಪುನಃ ಸಟ್ಟುಗದಿಂದ ಗಂಜಿಯನ್ನೆತ್ತಿ ಕುಡಿಯತೊಡಗಿದ. ಿನ ದೃಷ್ಟಿ ಶಂಕರನ ಕಡೆಗೆ ಹರಿದಿತು. ಆನೆಯೀಗ ಹಸಿರೆಲೆಗಳನ್ನು ದು ಮುಗಿಸಿತ್ತು. ಮೊರದಗಲದ ಕಿವಿಗಳನ್ನು ಅಲುಗಿಸುತ್ತಾ ಗಾಳಿ ಕಿಕೊಳ್ಳುತಿತ್ತು. ಆನೆಯ ಮೈ ಸಹ ಸೊರಗಿ ಹೋಗಿದೆ ಎಂಬುದು ನಿಗೆ ಹೊಳೆಯಿತು. ಆನೆಗಾದರೂ ಕೆಲಸದಲ್ಲಿ ಹಿಂದಿನ ಉತ್ಸಾಹ ಲಿಲ್ಲ. ಅದು ಘೀಳಿಡದೆ ತೊಲೆಯನ್ನು ಹಿಡಿಯಲು ಸೊಂಡಿಲನ್ನು ಚುತ್ತಿರಲಿಲ್ಲ.

"ಆತನಾದರೂ ಬಡವಾಗದೆ ಏನಾದಾನು!" ನಾಯಕ ತನ್ನ ಯೇ ಹೇಳಿಕೊಂಡ: "ಪಾಪನ ತೊಡಿಯಲ್ಲಾದರೆ ಕೆಲಸಕ್ಕೆ ಹೋಗು ದು ಎಳ್ಳೆಣ್ಣೆ ಬೆರಸಿದ ಅನ್ನದ ಮುದ್ದೆಗಳು ದೊರೆಯುತಿದ್ದುವು. ಸಂಜೆ ತ್ತು ಮಿದಿದ ನೆಲ್ಲಿನ ಸವಿಯೂಟ ದೊರೆಯುತಿತ್ತು. ಆ ಮೇಲೆ ಹಲ ಕಾಯಿ ಬಾಳೆದಿಂಡುಗಳು ಬೇರೆ ಇದ್ದುವು. ಮಕ್ಕಳ ಕೈಯಿಂದ ಗಿನಕಾಯಿ ಬೆಲ್ಲದಚ್ಚುಗಳು ಸಿಗುತಿದ್ದುವು. ಅಲ್ಲಿ ಶಂಕರ ಇನ್ನೊಬ್ಬ ಪನ ಹಾಗೆಯೇ ಇರುತಿದ್ದ. ಆದರೆ ಇಲ್ಲಿ ಸಿಗುವುದು ಬೆಳಿಗ್ಗೆ ನಾಲ್ಕು ು ಅಕ್ಕಿಯ ಅನ್ನ. ಎಣ್ಣೆ ಬೆಲ್ಲಗಳು ಹತ್ತಿರ ಸುಳಿಯುವ ಹಾಗಿಲ್ಲ. ಜೆ ಐದು ಸೇರು ಅಕ್ಕಿಯ ಕೂಳು. ಸಾಕಷ್ಟು ಬಾಳೆದಿಂಡೂ ಈ ಊರಲ್ಲಿ ುವ ಹಾಗಿಲ್ಲ."

ಹೀಗೆ ಆಲೋಚನೆಯ ಹಗ್ಗವನ್ನು ಹೊಸೆಯುತ್ತಾ ನಾಯಕ ಗಂಜಿ ಡಿದು ಮುಗಿಸಿದ. ಅವನು ಮಡಿಕೆಯನ್ನು ಹೊಳೆ ನೀರಲ್ಲಿ ತೊಳೆದ. ಚಿಯನ್ನು ಬಿಚ್ಚಿ ಎರಡು ಹೋಳು ಅಡಿಕೆಯನ್ನು ಬಾಯೊಳಗೆ ಹಾಕಿ ಂಡು ಎಲೆಗೆ ಸುಣ್ಣ ಹಚ್ಚಿದ. ಸುಣ್ಣ ಹಚ್ಚಿದ ಎಲೆಯನ್ನು ಬಾಯೊ ಸೇರಿಸಿದ. ಜತೆಯಲ್ಲಿಯೇ ಒಂದು ತುಂಡು ಹೊಗೆ ಸೊಪ್ಪನ್ನು ಯೊಳಗೆ ಹಾಕಿಕೊಂಡ. ಅವನು, "ಈ ಉರಿ ಬಿಸಿಲಲ್ಲಿ ದುಡಿಯ ೀಗಲು ಯಾರಿಂದ ಆಗುವುದು? ಒಂದುಕ್ಷಣ ಮಲಗಿ ಮೈಯ ಬಳಲಿಕೆ ನ್ನು ನೀಗುವೆನು." ಎಂದು ಹೇಳಿಕೊಂಡು ಮರದ ನೆರಳಲ್ಲಿ ಮೈ ಚಿ ಮಲಗಿದ.

ಪಾಪನ ಮನೆಯ ಆಲೋಚನೆಯೇ ಮರಳಿ ಅವನ ಚಿತ್ತದಲ್ಲಿ ಸುಳಿ

ಯಿತು. ಈಗ ಅವನ ಕಣ್ಣ ಮುಂದೆ ಲಕ್ಷ್ಮಿಯ ರೂಪ ಬಂದು ನಿಂತಿತು. ಎಳೆನಗುವಿನ ಹೂಬಿಸಿಲನ್ನು ಕೆದರುವ ಆ ಮೋರೆ ಎಷ್ಟೊಂದು ತಾಳ್ಮೆಯಿಂದ ಕೂಡಿದುದು! ಆಕೆಯ ತುಟಿಗಳಿಂದ ಮುನಿಸಿನ ಮಾತು ಬರುವಂತಿಲ್ಲ. ತನ್ನಲ್ಲಿ ಎಷ್ಟೊಂದು ಅಕ್ಕರೆಯನ್ನು ತೋರುವಳು! ಪಾಪ ಮುನಿಸು ತಾಳಿ ಬೆತ್ತದಿಂದ ಎರಡು ಬಡಿದಾಗ ಆಕೆ ಆ ನೋವನ್ನು ಮರುಕದ ನುಡಿಗಳಿಂದ ಕಳೆಯಲು ಸಿದ್ಧಳಾಗಿರುವಳು!

ಶಂಕರನ ಕೀಟಲೆಯಿಂದ ಪುಟ್ಟ ಪಾಪಾತಿ ಉಯ್ಯಾಲೆಯಿಂದ ಬಿದ್ದುದು ಅವನ ಸ್ಮೃತಿಪಥದಲ್ಲಿ ಪ್ರವೇಶಿಸಿತು. ಆನೆಯ ಎಳೆತದಿಂದ ಮಾವಿನ ಮರದ ಕೊಂಬೆ ಮುರಿದು ತುಂಡಾದಾಗ ಅವಳು ಅವನೊಡ್ಡಿದ ತೋಳುಗಳ ಮೇಲೆ ಬಿದ್ದಿದ್ದಳು. ತಾನು ನೆಲದಮೇಲೆ ಬೀಳುವೆನೆಂಬ ಭೀತಿಯಿಂದ ಆತನ ಕೊರಳನ್ನು ಅಪ್ಪಿಕೊಂಡಿದ್ದಳು. ಅವನು ನೆಲದ ಮೇಲೆ ಹೊರಳಿದಾಗ ಅವಳು ಅವನ ಮೈಮೇಲೆ ಬಿದ್ದಿದ್ದಳು. ಆ ತೋಳುಗಳ ಬಳಸು, ಆ ಮೈಯ ಸೋಂಕು ಅವನ ಮೈ ನವಿರೇಳಿಸಿ ಪುಳಕದ ಕಡಲಲ್ಲಿ ಓಲಾಡಿಸಿದ್ದುವು. ಆ ಹಿಗ್ಗನ್ನು ಅವನು ನುಡಿಗಳಿಂದ ಬಣ್ಣಿಸಿ ಹೇಳಲಾರ.

ನಾಯಕ ಅಂದಾದ ಸುಖಾನುಭವವನ್ನೇ ಮರಳಿ ಮರಳಿ ಮೆಲಕು ಹಾಕಿದ. ಮರಗಳು ಅಲುಗಾಡಿ ತಂಗಾಳಿಯನ್ನೆಬ್ಬಿಸಿದುವು. ಮಂದ ಮಾರುತನ ಸುಖಸ್ಪರ್ಶ ನಾಯಕನ ಬಳಲಿದ ಮೈಗೆ ಹಿತಕರವಾಗಿ ತೋರಿತು. ಆಯಾಸಗೊಂಡ ಅವನ ಕಣ್ಣೆವೆಗಳು ಬಡಿತವನ್ನು ನಿಲ್ಲಿಸಿದುವು. ಅವನಿಗೆ ಜೊಂಪು ಹತ್ತಿತು.

ನಿದ್ದಿಸುತಿದ್ದ ನಾಯಕನಿಗೆ ಏನೋ ಚುಳ್ಳೆಂದು ಕಡಿದ ಹಾಗಾಯಿತು. ಅವನು ಎಚ್ಚತ್ತು ಕಣ್ದೆರೆದ. ಅವನ ಕಣ್ಣಮುಂದೆ ಕಾರ್ಯಕಾರ ಮೂಸೆ ಚೆಟ್ಟಿಯು ಕೈಯಲ್ಲಿ ಬೆತ್ತಹಿಡಿದು ನಿಂತಿದ್ದ. ನಾಯಕನ ಬೆತ್ತಲೆಯ ಬೆನ್ನಮೇಲೆ ಬೆತ್ತದಿಂದ ಹೊಡೆದ ಬಾಸುಂಡೆ ಎದ್ದಿತ್ತು. ಅವನು ಮಲಗಿದಲ್ಲಿಂದ ಎದ್ದುನಿಂತ.

“ ಕತ್ತೆ, ಉಳಿದ ಆನೆಕಾರರೆಲ್ಲ ಆನೆಗಳನ್ನು ಅಟ್ಟಿಕೊಂಡು ಮರ ಎಳೆಸಲು ಹೋಗಿದ್ದಾರೆ. ನೀನಿಲ್ಲಿ ಗೊರಗೆ ಹೊಡೆಯುತ್ತಾ ಬಿದ್ದಿ

ದ್ದೀಯೆ!'' ಕಾರ್ಯಕಾರ ಕೈಯಲ್ಲಿ ಹಿಡಿದ ಬೆತ್ತವನ್ನು ಮರಳಿ ಮೇಲೆತ್ತಿದ: '' ನೀನು ಉಂಡು ತಿಂದು ನಿದ್ದೆ ಹೊಡೆಯಲು ನಾವು ದಿನಕ್ಕೆ ಹತ್ತು ರೂಪಾಯಿ ದಂಡ ತೆರುತ್ತಲಿಲ್ಲ!''

'' ಎಲೆ ಚೆಟ್ಟಿಯ, ನೀವು ನನ್ನ ಮೈಗೆ ಕೈ ಹಾಕಲಾಗದು.'' ನಾಯಕನ ಕಣ್ಣುಗಳು ಉರಿಯುವ ಕೆಂಡಗಳಾದುವು: '' ನೀವು ಕೂಗಿದ್ದರೆ ನಾನು ಎಚ್ಚತ್ತು ಕೆಲಸಕ್ಕೆ ಹೊರಡುತ್ತಿದ್ದೆ. ನೀವೇನೂ ನನಗೆ ಅನ್ನಕೊಡುವ ಪಾಪನಲ್ಲ!''

'' ಈಗ ಅನ್ನಕೊಡುವವರು ನಾವೇ ಆಗಿದ್ದೇವೆ.'' ಬಿಂಕದ ನುಡಿ ಮೂಸೆ ಚೆಟ್ಟಿಯನ ಕೊರಳಿಂದ ಹೊರಟಿತು. ಅವನು ಕುರುಬ ಹುಡುಗನನ್ನು ಮರಳಿ ಥಳಿಸಲೆಂದು ಬೆತ್ತವೆನ್ನೆತ್ತಿದ.

ಹಲಸಿನೆಲೆಗಳನ್ನು ಮೆದ್ದು ಮುಗಿಸಿದ ಶಂಕರ ನೀರಡಿಕೆಯನ್ನು ತಣಿಸಿಕೊಳ್ಳಲೆಂದು ಹೊಳೆಗೆ ಇಳಿದಿದ್ದ. ಆತ ಸೊಂಡಿಲಿನಿಂದ ನೀರೆತ್ತಿ ಕುಡಿದು ತೃಷೆಯನ್ನು ಹಿಂಗಿಸಿಕೊಂಡಮೇಲೆ, ನೀರೆತ್ತಿ ನೆತ್ತಿಯ ಮೇಲೆ ಸುರಿದುಕೊಂಡು ಬಿಸಿಲ ಬೇಗೆಯನ್ನು ಆರಿಸಿಕೊಳ್ಳುವುದರಲ್ಲಿ ಮಗ್ನನಾಗಿದ್ದ.

ಹೊಳೆಯಲ್ಲಿದ್ದ ಆನೆಗೆ ಮೂಸೆಕಾಕ ಬೆತ್ತದಿಂದ ನಾಯಕನನ್ನು ಹೊಡೆದುದು ಕಾಣಿಸಿತು. ತನ್ನ ಪಾಲಕನ ಮೇಲೆ ಕೈ ಮಾಡಿದುದನ್ನು ಕಂಡು ಅದಕ್ಕೆ ಮುನಿಸು ಬಂತು. ಅದು ತನ್ನ ಸೊಂಡಿಲು ತುಂಬಾ ನೀರನ್ನು ತುಂಬಿಸಿಕೊಂಡು ದಡವನ್ನೇರಿತು. ಮೆಲ್ಲ ಮೆಲ್ಲನೆ ಹೆಜ್ಜೆಗಳನ್ನಿರಿಸುತ್ತಾ ನಾಯಕನಿದ್ದಲ್ಲಿಗೆ ಬಂತು.

ಮೂಸೆಕಾಕನಿಗೆ ತಾನಿದ್ದೆಡೆಗೆ ಆನೆ ಬರುತಿದ್ದುದು ಕಾಣಿಸಲಿಲ್ಲ. ಅವನು ನಾಯಕನನ್ನು ಬೈಯುವುದರಲ್ಲಿಯೇ ಮಗ್ನನಾಗಿದ್ದ. ಆನೆ ಬಂದು ಅವನ ಬೆನ್ನಹಿಂದೆ ನಿಂತಿತು. ಅದು ಸೊಂಡಿಲನ್ನೆತ್ತಿ ಮಾಪಿಳ್ಳೆಯ ಬೋಳು ಮುಂಡೆಯ ಮೇಲೆ ಅಭಿಷೇಕ ಮಾಡಿತು. ಆತನ ಕಿವಿಗಳು ಒಡೆದುಹೋಗುವಂತೆ ಭೀಕರ ಧ್ವನಿಯಲ್ಲಿ ಘೀಳಿಟ್ಟಿತು. ಮೈಮೇಲೆ ಜಲಾಭಿಷೇಕವಾದುದನ್ನು ಕಂಡು ಮೂಸೆಕಾಕನಿಗೆ ಭಯಾಶ್ಚರ್ಯಗಳಾದುವು. ಅವನು ಗಜಬೃಂಹಿತವನ್ನು ಕೇಳಿ ಬೆಚ್ಚಿ ಬಿದ್ದು ಹಿಂದಿರುಗಿ

ನೋಡಿದ. ಅವನ ಬೆನ್ನ ಹಿಂದೆ ಆನೆ ಸೊಂಡಿಲನ್ನೆತ್ತಿ ನಿಂತಿತ್ತು. ಅದೆಲ್ಲಿ ತನ್ನನ್ನು ಸೊಂಡಿಲಿನಿಂದೆತ್ತಿ ನೆಲದ ಮೇಲೆ ಅಪ್ಪಳಿಸುವುದೋ ಎಂದು ಅವನ ಎದೆ ತಲ್ಲಣಗೊಂಡಿತು. ಅವನು ತುಪಾಕಿಯಿಂದ ಹೊರಟ ಗುಂಡಿ ನಂತೆ ಹತ್ತುಮಾರು ದೂರ ಸರಿದು ನಿಂತ.

"ನೋಡಿ, ಚೆಟ್ಟಿಯ, ಇನ್ನು ಮುಂದೆ ನೀವು ನನ್ನ ಮೇಲೆ ಕೈ ಮಾಡಬೇಡಿ." ನಾಯಕ ತುಟಿಗಳ ಮೇಲೆ ನಗುವನ್ನು ತಂದುಕೊಂಡು ಹೇಳಿದ: "ನನ್ನ ಕಾವಲಿಗೆ ಶಂಕರನಿದ್ದಾನೆ. ನಾನು ನೋವನ್ನು ತಾಳಿಕೊಂಡು ಸುಮ್ಮನಿದ್ದೇನು. ಆದರೆ ಶಂಕರ ಸುಮ್ಮನಿರಲಾರ. ನನ್ನ ಮೇಲೆ ನೀವು ಕೈ ಮಾಡಿದರೆ ಅವನು ನಿಮಗೆ ಕೇಡು ಮಾಡದೆ ಇರ ಲಾರ!"

ಮೂಸೆಕಾಕ ಮಾರ್ನುಡಿಯಲಿಲ್ಲ. ತಿಳಿಯದ ಕುರುಬ ಹುಡುಗ ನನ್ನು ಹೊಡೆದು ಬಾಗಿಸಬಹುದು; ಆದರೆ ಆನೆಯನ್ನು ಬಾಗಿಸುವುದು ಅವನ ಅಳವಿಯಲಿಲ್ಲ. ಆದುದರಿಂದ ಅವನೀಗ ಮೆದುವಾದ. ಅವನು, "ನಾಯಕ, ನಾನು ಸಿಟ್ಟಿನ ಭರದಲ್ಲಿ ತಪ್ಪು ಮಾಡಿದೆ. ಇನ್ನು ಮುಂದೆ ನಾನು ನಿನ್ನ ಮೇಲೆ ಕೈ ಎತ್ತುವುದಿಲ್ಲ." ಎಂದು ನುಡಿದ. ಅವನು ಸೊಂಟದ ಬೆಲ್ಟಿನಲ್ಲಿರುವ ಪಾಕೀಟಿನಿಂದ ನಾಲ್ಕಾಣೆಯ ಬೆಳ್ಳಿಯ ಪಾವಲಿ ಯನ್ನು ತೆಗೆದು ಆನೆಕಾರನ ಕೈಗೆ ಎಸೆದ.

ಮಾಪಿಳ್ಳೆ ಎಸೆದ ಬೆಳ್ಳಿಯ ಪಾವಲಿಯನ್ನು ನಾಯಕ ಕೈಯಲ್ಲಿ ಹಿಡಿದುಕೊಂಡ. ಅವನು ತನ್ನ ಪಕ್ಕದಲ್ಲಿ ನಿಂತ ಶಂಕರನ ಸೊಂಡಿಲಿಗೆ ಕೈ ಹಾಕಿ ತಡವಿದ. ಅವನು ಆನೆಯ ಸೊಂಡಿಲನ್ನು ನೇವರಿಸುತ್ತಾ, "ಶಂಕರ ನೀನು ಬಲು ತುಂಟ. ನೀನು ಆ ಚೆಟ್ಟಿಯನ ನೆತ್ತಿಯ ಮೇಲ ನೀರನ್ನು ಸುರಿದು ತುಂಬಾ ಗಾಬರಿಗೊಳಿಸಿಬಿಟ್ಟೆ. ಆದರೆ ನಿನ್ನ ಚೇಷ್ಟೆ ಯಿಂದ ನನಗೆ ನಾಲ್ಕಾಣೆ ಪಕ್ಕಿತು." ಎಂದು ಉದ್ಗಾರವೆತ್ತಿದ.

ಶಂಕರನಿಗೆ ಮಾತಾಡಲು ಬರುತಿವರೆ, "ನಿನ್ನ ಮೈ ಸೋಂಕಿ ಕೇಡು ಮಾಡಿದಾತನನ್ನು ಸುಮ್ಮನೆ ಬಿಡಲಾರೆ!" ಎಂದು ಹೇಳುತಿದ್ದ ನೇನೋ. ಆನೆ ತನ್ನ ಪುಟ್ಟ ಕಣ್ಣುಗಳಿಂದ ನಾಯಕನನ್ನು ನೋಡುತ್ತಾ ಮೆಲ್ಲನೆ ಕುರುಬ ಹುಡುಗನ ನೆತ್ತಿಯನ್ನು ಸವರಿತು. ಆನೆಯ ಹೃದಯ

ದಲ್ಲಿ ನೆಲೆಗೊಂಡ ಪ್ರೇಮ ವಿಶ್ವಾಸಗಳೆಲ್ಲ ಆ ಸ್ಪರ್ಶದಲ್ಲಿ ಹುದುಗಿದ್ದುವು.

"ಶಂಕರ, ಇನ್ನು ನಾವು ತಡಮಾಡಲಾಗದು." ನಾಯಕ ಅಂಕುಶವನ್ನು ಎತ್ತಿಕೊಳ್ಳುತ್ತಾ ಉಸುರಿದ: "ಇನ್ನು ನಾವು ದುಡಿಮೆಗೆ ಹೋಗೋಣ. ಉಣುವ ಕೂಳಿನ ಋಣವನ್ನು ತೀರಿಸಬೇಕಲ್ಲ!"

ಮಾವುತನ ನುಡಿಯನ್ನು ತಾನು ಅರಿತೆನೆಂಬುದನ್ನು ಸೂಚಿಸುವಂತೆ ಆನೆ ತನ್ನ ದೊಡ್ಡ ಕಿವಿಗಳನ್ನು ಅಲುಗಾಡಿಸಿತು. ನಾಯಕ ಸಂಚಿಯನ್ನೆತ್ತಿಕೊಂಡು, ಆನೆಯ ಕಿವಿಯನ್ನು ಹಿಡಿದು, ಆನೆಯ ಮೊಣಕಾಲಿನ ಮೇಲೆ ಪಾದವನ್ನೂರಿ ಶಂಕರನ ಹೆಗಲ ಮೇಲೇರಿದ.



ಬೆಟ್ಟದ ಮಗ್ಗುಲಿನಲ್ಲಿ ಕಡಿದುರುಳಿಸಿದ ದೊಡ್ಡ ದೊಡ್ಡ ಮರದ ತೊಲೆಗಳನ್ನು ಎಳೆತಂದು ಲಾರಿಯೋಡುವ ಮಾರ್ಗದ ಪಕ್ಕದಲ್ಲಿ ಹಾಕುವುದೇ ಶಂಕರನ ಪಾಲಿನ ಕೆಲಸ. ಆತನ ಜತೆಯಲ್ಲಿ ಕೆಲಸ ಮಾಡಲು ಮೂರು ಆನೆಗಳಿದ್ದವು. ಆ ಅಡವಿಯಲ್ಲಿ ಆನೆಗಳು ಒಂದು ಮೈಲಿನಷ್ಟು ದೂರ ತೊಲೆಗಳನ್ನು ಎಳೆದುಕೊಂಡು ಬರಬೇಕಾಗಿದ್ದಿತು. ತೊಲೆಗಳನ್ನು ಎಳೆದು ತರುವಾಗ ಒಂದು ಗುಡ್ಡವನ್ನು ಇಳಿದು ಬರಬೇಕು. ಆನೆಗಳಿಗೆ ತೊಲೆಗಳನ್ನು ಎಳೆದು ತರಲು ಅನುಕೂಲವಾಗುವಂತೆ ಗಿಡಪೊದೆಗಳನ್ನು ಕಡಿದು ದಾರಿ ಮಾಡಿದ್ದರು. ಆದರೆ ಹಳ್ಳಗಳಿಗೆ ಮಣ್ಣು ತುಂಬಿ ದಾರಿಯನ್ನು ಸಮ ಮಾಡಿರಲಿಲ್ಲ.

ಅಡವಿಯಲ್ಲಿ ತುಂಬ ಕಡಿದುರುಳಿಸಿದ ತೊಲೆಗಳು ಬಿದ್ದಿದ್ದುವು. ತೊಲೆಗಳ ಬುಡದಲ್ಲಿ ರಟ್ಟೆಗಾತ್ರದ ಹಗ್ಗಗಳನ್ನು ಪೋಣಿಸುವಷ್ಟು ದೊಡ್ಡ ತೂತುಗಳನ್ನು ಉಳಿಗಳಿಂದ ಕೊರೆದಿದ್ದರು. ಈ ತೂತಗಳಿಗೆ ತೋಳು ಗಾತ್ರದ ನಾರು ಹಗ್ಗಗಳನ್ನು ಕೋದು ಮಾವುತರು ಗಂಟು ಹಾಕುತ್ತಿದ್ದರು. ಹಗ್ಗದ ಇನ್ನೊಂದು ತುದಿಯನ್ನು ಆನೆಯ ಸೊಂಡಿಲಿಗೆ ಕೊಡುತ್ತಿದ್ದರು. ಆನೆ ಹಗ್ಗವನ್ನು ಹಿಡಿದು ತೊಲೆಯನ್ನು ಎಳೆದುಕೊಂಡು ಹೋಗುತ್ತಿತ್ತು.

ಇದು ಅಡವಿಯಿಂದ ಆನೆಗಳ ಮೂಲಕ ತೊಲೆಗಳನ್ನು ಎಳೆಸುವ ರೂಢಿ.

ಗೋಪು ಶಂಕರನ ಜತೆಯಲ್ಲಿ ದುಡಿಯುತಿದ್ದ ಇನ್ನೊಂದು ಆನೆ. ಆದರೆ ಅದು ಶಂಕರನಷ್ಟು ದೊಡ್ಡದಲ್ಲ. ಕೆಲಸದಲ್ಲಿಯೂ ಬಹಳ ನಿಧಾನ. ತೊಲೆಗಳನ್ನೆಳೆಯಲು ಹಿಂದೇಟು ಹಾಕುವುದು ಅದರ ಸ್ವಭಾವ. ಅದರಿಂದ ಕೆಲಸ ಮಾಡಿಸಬೇಕಾದರೆ ಆನೆಕಾರ ರಾಮುಣ್ಣಿಗೆ ಸಾಕು ಸಾಕಾಗಿ ಹೋಗುತ್ತಿತ್ತು.

ರಾಮುಣ್ಣಿ ತೊಲೆಯ ತೂತಿನೊಳಗೆ ಹಗ್ಗವನ್ನು ಪೋಣಿಸಿದ. ಹಗ್ಗದ ಇನ್ನೊಂದು ತುದಿಯನ್ನು ಆನೆಯ ಸೊಂಡಿಲಿಗೆ ಕೊಟ್ಟು ಆನೆಯ ಬೆನ್ನ ಮೇಲೇರಿದ. ಅವನು "ಗೋಪು, ತೊಲೆಯನ್ನೆಳೆ!" ಎಂದು ಆನೆಗೆ ಆಜ್ಞೆ ಮಾಡಿದ.

ಗೋಪು ಮಾತ್ರ ನಿಂತಲ್ಲಿಂದ ಕದಲಲಿಲ್ಲ. ರಾಮುಣ್ಣಿಗೆ ಸಿಟ್ಟು ಬಂತು. ಅವನು ಅಂಕುಶದಿಂದ ಆನೆಯ ಕಿವಿಯನ್ನು ತಿವಿದು "ಎಳೆ ಆನೆ!" ಎಂದು ದೊಡ್ಡ ದನಿಯಲ್ಲಿ ಗದರಿಸಿದ. ಆದರೆ ಗೋಪು ಸತ್ಯಾಗ್ರಹವನ್ನು ಕೈಗೊಂಡಿದ್ದ. ಆನೆ ಹೆಜ್ಜೆಯನ್ನು ಮುಂದೆ ಹಾಕಲಿಲ್ಲ. ಅದು ದೊಡ್ಡ ದನಿಯಲ್ಲಿ ಘೀಳಿಟ್ಟಿತು. ಆದರೆ ತೊಲೆಯನ್ನು ಮಾತ್ರ ಎಳೆಯದು. ರಾಮುಣ್ಣಿ ಸಿಟ್ಟುಗೊಂಡು ಅಂಕುಶದಿಂದ ಕಿವಿಯನ್ನು ತಿವಿದ. ಹಾಗೆಯೇ ಅದು ಘೀಳಿಡುತ್ತಾ ಸುತ್ತು ಸುತ್ತು ತಿರುಗಿತು.

ಆನೆಕಾರನಿಗೆ ಏನು ಮಾಡಬೇಕೆಂದು ತಿಳಿಯದಾಯಿತು. ಅವನು ಗೋಪುವನ್ನು ಬಾಯಿಗೆ ಬಂದಂತೆ ಶಪಿಸಿದ. ಕೊನೆಗೆ ತೊಲೆಯ ತೂತಿನೊಳಗೆ ಹಗ್ಗವನ್ನು ಪೋಣಿಸುತ್ತಿದ್ದ ನಾಯಕನನ್ನು ಕಂಡು, "ನಾಯಕ, ಒಮ್ಮೆ ಇಲ್ಲಿ ಬಾ" ಎಂದು ಕೂಗಿ ಕರೆದ.

"ಏಕೆ?" ನಾಯಕ ಬಾಗಿದ ಬೆನ್ನನ್ನು ನೇರಾಗಿಸುತ್ತಾ ಪ್ರಶ್ನಿಸಿದ.

"ಈ ಹಾಳು ಆನೆ ಮೊಂಡತನವನ್ನು ಮಾಡಲು ಹೊರಟಿದೆ. ಎಷ್ಟು ಗದರಿಸಿದರೂ, ನೆತ್ತರು ಸುರಿಯುವಂತೆ ಅಂಕುಶದಿಂದ ಚುಚ್ಚಿದರೂ ಅದು ಮುಂದೆ ಹೆಜ್ಜೆಯನ್ನಿರಿಸಲೊಲ್ಲದು. ಇಂತಹ ಮೊಂಡ ಆನೆಯನ್ನು ನಾನು ಈ ಜನ್ಮದಲ್ಲಿಯೇ ಕಾಣಲಿಲ್ಲ."

ನಾಯಕ ತನ್ನ ಕೆಲಸವನ್ನು ಬಿಟ್ಟು ರಾಮುಣ್ಣಿಯ ನೆರವಿಗೆ ಹೋದ. ಅವನು ಆನೆಯ ಸೊಂಡಿಲ ಮೇಲೆ ಕೈಯಾಡಿಸಿ ಮೆದುದನಿಯಲ್ಲಿ, "ಗೋಪು, ನಿನಗೇಕೆ ಇಷ್ಟು ಹಟ? ಒಳ್ಳೆಯವನ ಹಾಗೆ ಮರವನ್ನು ಎಳೆ" ಎಂದು ನುಡಿದ.

ಗೋಪು ನೀರು ತುಂಬಿದ ಕಣ್ಣುಗಳಿಂದ ನಾಯಕನ ಮೋರೆಯನ್ನು ನೋಡಿದ. ತನ್ನ ಸಂಕಟವನ್ನು ನಾಯಕನ ಮುಂದೆ ಹೇಳಿಕೊಳ್ಳುವಂತೆ ದೊಡ್ಡ ದನಿಯಲ್ಲಿ ಘೀಳಿಟ್ಟ.

ಆನೆಯು ಕಣ್ಣೀರು ಮತ್ತು ಅದರ ಬೃಂಹಿತದ ಬಗೆ ಇವುಗಳಿಂದ ನಾಯಕ ಆನೆ ತುಂಬಾ ನೊಂದುಕೊಂಡಿದೆ ಎಂದು ಗ್ರಹಿಸಿದ. ಅವನು ಆನೆಗೆ ಒಂದು ಪ್ರದಕ್ಷಿಣೆ ಹಾಕಿ ಅದರ ಮೈ ಮತ್ತು ಕಾಲುಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿದ. ಅದರ ಹಿಂಗಾಲಿನ ಉಗುರೊಂದು ಮರದ ತೊಲೆ ಬಿದ್ದೋ ಅಥವಾ ಬಂಡೆ ಬಡಿದೋ ಜಜ್ಜಿಹೋಗಿತ್ತು. ಈ ಗಾಯದ ವೇದನೆಯನ್ನು ತಾಳಲಾಗದೆ ಅದು ತಾನು ಕೆಲಸಮಾಡುವುದಿಲ್ಲವೆಂದು ಚಂಡಿ ಹಿಡಿದಿತ್ತು.

"ನೋಡಿ, ಆನೆಗೆ ತುಂಬಾ ನೋವಾಗಿದೆ." ನಾಯಕ ಜಜ್ಜಿಹೋದ ಉಗುರನ್ನು ತೋರಿಸುತ್ತಾ ರಾಮುಣ್ಣಿಗೆ ಹೇಳಿದ.

ರಾಮುಣ್ಣಿ ಗೋಪುವಿನ ಉಗುರು ಜಜ್ಜಿ ಹೋದುದನ್ನು ನೋಡಿಯೇ ಇರಲಿಲ್ಲ. ಅವನು ದಿನನಿತ್ಯ ಆನೆಯ ಮೈ ಮತ್ತು ಕಾಲುಗಳನ್ನು ಪರೀಕ್ಷಿಸುವ ಗೋಜಿಗೆ ಹೋಗುವವನೇ ಅಲ್ಲ. ಎರಡು ದಿನಗಳಿಗೊಮ್ಮೆ ಯಾದರೂ ಆನೆಗೆ ಸ್ನಾನ ಮಾಡಿಸಿದರಲ್ಲವೇ ಮೈಯ ಗಾಯಗಳನ್ನು ನೋಡುವುದು! ಅವನು ವಿಸ್ಮಯ ತುಂಬಿದ ಸ್ವರದಲ್ಲಿ "ಆನೆಗೆ ನೋವಾಗಿದೆಯೋ? ಹೇಗಾಯಿತೋ?" ಎಂದು ಉದ್ಗಾರವೆತ್ತಿದ.

"ನಿಮ್ಮ ಆನೆಗೆ ಗಾಯವಾದುದು ನಿಮಗೆ ತಿಳಿಯದೇ?" ನಾಯಕ ಮಾರುಲಿದ: "ಹಿಂಗಾಲ ಉಗುರು ಪೂರ್ತಿ ಜಜ್ಜಿ ಹೋಗಿದೆ. ಆದುದರಿಂದಲೇ ಅವನು ಚಂಡಿ ಹಿಡಿದಿದ್ದಾನೆ. ಆನೆ ಎಂದರೆ ಸಣ್ಣಮಕ್ಕಳ ಹಾಗೆ. ಒಳ್ಳೆಯ ಮಾತಿನಲ್ಲಿ ಹೇಳಿ ಉಪಚಾರ ಮಾಡಿದರೆ ಅದು

ಹೇಳಿದ ಕೆಲಸಗಳನ್ನೆಲ್ಲಾ ಮಾಡುವುದು."

ಆನೆಯಿಂದ ಮರ ಎಳೆಸುವ ಉಪಾಯ ಹೇಳಿ ಕೊಡುವುದನ್ನು ಬಿಟ್ಟು ಈ ಕುರುಬ ಹುಡುಗ ಆನೆ ಸಾಕುವ ವಿಧಾನವನ್ನು ಉಪದೇಶ ಮಾಡಲು ಹೊರಟನಲ್ಲ ಎಂದು ರಾಮುಣ್ಣಿಗೆ ಸಿಟ್ಟು ಬಂತು. ಅವನು, "ಈಗ ಆನೆಯಿಂದ ಮರ ಎಳೆಸುವ ವಿಧಾನವನ್ನು ಹೇಳು ನೋಡೋಣ." ಎಂದು ಉಸುರಿದ.

"ನೀನು ಮೊದಲು ಗಾಯಕ್ಕೆ ಏನಾದರೂ ಮದ್ದನ್ನೋ ಕೊಬ್ಬರಿ ಎಣ್ಣೆಯನ್ನೋ ಹಚ್ಚುವುದು ಲೇಸು. ಜಜ್ಜಿ ಹೋದ ಉಗುರು ತುಂಬಾ ಉರಿಯುತ್ತಿರಬೇಕು."

"ನಾಯಕ, ಈಗ ಕೆಲಸ ಕೆಡುವುದು. ಒಂದು ದಿನದ ಆನೆ ಬಾಡಿಗೆ ತಪ್ಪಿತೆಂದರೆ ನನ್ನ ಆ ಹಾಳು ಯಜಮಾನ ರೇಗಿ ಕಿಡಿಕಿಡಿಯಾಗುವನು."

ನಾಯಕ ಉತ್ತರಿಸಲಿಲ್ಲ. ಅವನು ಸುತ್ತುಮುತ್ತಲಿನ ಪೊದೆಗಳ ಮೇಲೆಲ್ಲಾ ಕಣ್ಣೋಡಿಸಿ ಪರೀಕ್ಷಿಸಿದ. ಒಂದು ಪೊದೆಯೊಳಗೆ ಅವನ ಕಣ್ಣುಗಳು ಅರಸಿದ ಬಳ್ಳಿ ಗೋಚರಿಸಿತು. ಅವನು ಹೋಗಿ ಆ ಬಳ್ಳಿಯ ಚಿಗುರುಗಳನ್ನೆಲ್ಲಾ ಕಿತ್ತು ತಂದ. ಅವನು ಚಿಗುರುಗಳನ್ನು ಅಂಗೈಯ ಮೇಲಿರಿಸಿ ಹಿಸುಕಿ ರಸ ತೆಗೆದ. ತನ್ನ ಸಂಚಿಯೊಳಗಿದ್ದ ಶೀಸೆಯಿಂದ ಒಂದಿಷ್ಟು ತೆಂಗಿನೆಣ್ಣೆಯನ್ನು ಆ ರಸದೊಡನೆ ಬೆರೆಸಿದ. ಅವನು ತಾನು ಸಿದ್ಧಗೊಳಿಸಿದ ಹಸಿರು ಔಷಧಿಯನ್ನು ಜಜ್ಜಿ ಹೋದ ಉಗುರಿಗೆ ಲೇಪಿಸಿದ. ಗೋಪುವಿನ ಗಾಯದ ಉರಿ ತುಸು ಆರಿತು. ನಾಯಕ ಆನೆಯ ಸೊಂಡಿಲನ್ನೊಮ್ಮೆ ಸವರಿ, "ಗೋಪು, ಇನ್ನು ಸಿಟ್ಟಾಗಬೇಡ. ಇನ್ನು ಮರವನ್ನು ಎಳೆ." ಎಂದು ಹೇಳಿದ.

ಗೋಪು ಈಗ ಹಟ ಹಿಡಿಯಲಿಲ್ಲ. ಅವನು ತೊಲೆಯನ್ನು ಅಡಿದೆಳೆದ. ರಾಮುಣ್ಣಿ, "ನಾಯಕ, ನಿನ್ನಿಂದ ತುಂಬಾ ಉಪಕಾರವಾಯಿತು." ಎಂದು ಹೇಳಿ ಆನೆಯ ಬೆನ್ನೇರಿದ.

ಈ ವೇಳೆಗೆ ಉಳಿದಿಬ್ಬರು ಮಾವುತರು ತಮ್ಮ ತಮ್ಮ ಆನೆಗಳಿಂದ ಮರಗಳನ್ನೆಳೆಸಿಕೊಂಡು ಮುಂದೆ ಹೋಗಿದ್ದರು. ನಾಯಕನೊಬ್ಬನೇ

ಹಿಂದುಳಿದಿದ್ದ. ಅವನು ತೊಲೆಯ ತೂತಿಗೆ ಪೋಣಿಸಿದ ಹಗ್ಗದ ಇನ್ನೊಂದು ತುದಿಯನ್ನು ಶಂಕರನ ಸೊಂಡಿಲಿಗೆ ಕೊಟ್ಟ. ಅವನು ಶಂಕರನ ಮೊಣಕಾಲ ಮೇಲೆ ಪಾದವನ್ನೂರಿ ಆನೆಯ ಬೆನ್ನ ಮೇಲೇರಿದ. ಅವನು ಆನೆಯ ಕುಂಭಸ್ಥಳವನ್ನು ತನ್ನ ಕೈಯಿಂದ ಚಪ್ಪರಿಸಿ, "ಶಂಕರ, ನೋಡು ಇಂದು ನೀನು ತ್ವರೆಯಾಗಿ ಹೆಜ್ಜೆ ಹಾಕಬೇಕು. ಮುಂದೆ ಹೋಗುವ ಗೋಪುವಿನ ಜತೆ ಹಿಡಿಯಬೇಕು." ಎಂದು ಹೇಳಿದ. ಶಂಕರ ಗೋಪುವಿನ ಹಾಗೆ ಹಟ ಹಿಡಿಯಲಿಲ್ಲ. ಅವನು ಸರಸರನೆ ಮುಂದೆ ಹೆಜ್ಜೆ ಹಾಕಿದ.

ಒಂದು ಗುಡ್ಡವನ್ನಿಳಿದು ಹೋಗಬೇಕಾಗಿತ್ತು. ಮುಂದೆ ಹೋಗುತಿದ್ದ ಗೋಪು ಬಹು ಮೆಲ್ಲನೆ ಹೆಜ್ಜೆಗಳನ್ನಿರಿಸುತಿದ್ದ. ಆನೆಯ ಮೆದು ನಡಿಗೆಯನ್ನು ನೋಡಿ ರಾಮುಣ್ಣಿಗೆ ಸಿಟ್ಟು ಬಂತು. ಅವನು ಅಂಕುಶದಿಂದ ಗೋಪುವಿನ ಕಿವಿಯನ್ನು ತಿವಿದು, " ಗೋಪು, ನಿನಗೇನು ಧಾಡಿ ! ನಡೆ ಬೇಗ ! " ಎಂದು ಗದರಿಸಿದ.

ಅಂಕುಶದ ತಿವಿತ ಗೋಪುವನ್ನು ನೋವಿಗೀಡು ಮಾಡಿತು. ಅವನು ಸಿಟ್ಟುಗೊಂಡು ಬೇಗ ಬೇಗನೆ ಹೆಜ್ಜೆಗಳನ್ನಿರಿಸಿದ. ತೊಲೆಗೆ ಕಟ್ಟಿದ ಹಗ್ಗ ಭದ್ರವಾಗಿರಲಿಲ್ಲ. ರಾಮುಣ್ಣಿ ಆ ಹಗ್ಗವನ್ನು ಪರೀಕ್ಷಿಸುವ ಗೊಡವೆಗೆ ಹೋಗಿರಲಿಲ್ಲ. ಗೋಪು ಎಳೆದ ರಭಸಕ್ಕೆ ತೊಲೆಗೆ ಕಟ್ಟಿದ ಹಗ್ಗ ಎರಡು ತುಂಡಾಗಿ ಹೋಯಿತು. ಎಳೆದ ರಭಸಕ್ಕೆ ಗೋಪು ತೂಕತಪ್ಪಿ ಮುಗ್ಗರಿಸಿದ ಆನೆಯ ಬೆನ್ನ ಮೇಲೆ ಇದ್ದ ರಾಮುಣ್ಣಿ ತರಗೆಲೆಯಂತೆ ಹಾರಿ ಇನ್ನೊಂದು ದಿಕ್ಕಿನಲ್ಲಿ ಹೊರಳಿದ. ಮುಗ್ಗರಿಸಿ ಬಿದ್ದ ಗೋಪು ಎರಡು ಮಾರು ದೂರದಲ್ಲಿದ್ದ ಮರಕ್ಕೆ ಢಿಕ್ಕಿ ಹೊಡೆದ. ಆನೆಯ ಮೈಯ ಬಡಿತವನ್ನು ತಾಳಿಕೊಳ್ಳಲಾಗದೆ ಆ ಕಿರು ಮರ ಮುರಿದು ಬಿತ್ತು. ಮುರಿದ ಮರ ನೆಲದ ಮೇಲೆ ಹೊರಳಿದ್ದ ರಾಮುಣ್ಣಿಯ ಮೈಮೇಲೆ ಬೀಳುವುದರಲ್ಲಿತ್ತು.

ಈ ಅವಘಡವನ್ನು ಹಿಂದೆ ಬರುತಿದ್ದ ನಾಯಕ ನೋಡಿದ. ಅವನು ರಾಮುಣ್ಣಿ ಬೀಳುವ ಮರದಡಿಗೆ ಸಿಲುಕಿ ಸಾಯುವನೆಂದರಿತ. ಅವನು ಆನೆಯ ಬೆನ್ನಮೇಲಿಂದ ಮಂಗನಂತೆ ನೆಗೆದ. ಶಂಕರ ತಾನು ಸೊಂಡಿ

ಲಲ್ಲಿ ಹಿಡಿದ ಹಗ್ಗವನ್ನು ಬಿಟ್ಟು ತ್ವರಿತಗತಿಯಲ್ಲಿ ರಾಮುಣ್ಣಿ ಇದ್ದಲ್ಲಿಗೆ ಓಡಿದ. ನಾಯಕ ಇನ್ನೂ ರಾಮುಣ್ಣಿ ಇದ್ದಲ್ಲಿಗೆ ತಲುಪಿರಲಿಲ್ಲ. ಅಷ್ಟರಲ್ಲಿ ಮರ ಮುರಿದು ಬಿದ್ದೇ ಬಿಟ್ಟಿತು! ಬಿದ್ದ ಮರದ ಪೆಟ್ಟಿನಿಂದ ರಾಮುಣ್ಣಿಯ ಬೆನ್ನೆಲುಬು ಮುರಿಯಿತೆಂದೇ ಅವನು ಗ್ರಹಿಸಿದ.

ಆದರೆ ಉರುಳಿದ ಮರ ನೆಲವನ್ನು ಸೋಂಕಲಿಲ್ಲ. ಶಂಕರ ಮಿಂಚಿನ ವೇಗದಲ್ಲಿ ಮುಂದೆ ಸರಿದು ಬೀಳುವ ಮರಕ್ಕೆ ಅಡ್ಡಲಾಗಿ ಬೆನ್ನುಕೊಟ್ಟು ತಡೆದು ನಿಲ್ಲಿಸಿದ. ಬಿದ್ದ ಮರ ಈಗ ಶಂಕರನ ಬೆನ್ನಮೇಲೆ ಆಸರೆ ಪಡೆಯಿತು. ಶಂಕರನ ಈ ಸಾಹಸವನ್ನು ನೋಡಿ ನಾಯಕನಿಗೆ ಆಶ್ಚರ್ಯವಾಯಿತು. ಅವನು ಬಿದ್ದಿದ್ದ ರಾಮುಣ್ಣಿಯನ್ನು ಕೈಹಿಡಿದು ಮೇಲೆತ್ತಿದ. ಅವನನ್ನು ಬೀಳುವ ಮರದಿಂದ ನಾಲ್ಕುಮಾರು ದೂರ ಎಳೆದುಕೊಂಡು ಹೋದ. ಅವರು ದೂರ ಸರಿದೊಡನೆ ಶಂಕರ ಬೆನ್ನಮೇಲೆ ಎತ್ತಿಹಿಡಿದ ಮರವನ್ನು ಬಿಟ್ಟು ಮುಂದೆ ಹೆಜ್ಜೆಗಳನ್ನಿರಿಸಿದ. ಮರ ಧಡಾರನೆ ನೆಲದ ಮೇಲೆ ಬಿತ್ತು.

ಮುಗ್ಗುರಿಸಿದ ಗೋಪು ಇನ್ನೂ ಬಿದ್ದಲ್ಲಿಂದ ಏಳಲಿಲ್ಲ. ಅದು ಮುರಿದು ಬಿದ್ದ ಮರದಡಿಯಲ್ಲಿ ಸಿಲುಕಿ ಕಾಲುಗಳನ್ನು ಬಡಿದುಕೊಳ್ಳುತ್ತಾ ನರಳತೊಡಗಿತು. ಅದು ಸಣ್ಣ ಮರವಾದುದರಿಂದ ಆನೆಗೆ ಹೆಚ್ಚು ಪೆಟ್ಟಾಗಿರಲಿಲ್ಲ. ಆದರೆ ಕತ್ತರಿಯಲ್ಲಿ ಸಿಲುಕಿದ ಅಡಕೆಯಂತಾಗಿತ್ತು ಅದರ ಪಾಡು. ಆನೆಯ ಅವಸ್ಥೆಯನ್ನು ಕಂಡು ನಾಯಕನಿಗೆ ಅಯ್ಯೋ ಪಾಪ ಎನಿಸಿತು. ಅವನು "ಶಂಕರ ಬಾ" ಎಂದು ಆನೆಯನ್ನು ಉಡಿದ ಮರವನ್ನು ಎತ್ತಲು ಕರೆದೊಯ್ದ.

"ಶಂಕರ ಮರವನ್ನು ಹಿಡಿದೆತ್ತು." ನಾಯಕ ಶಂಕರನಿಗೆ ಅಪ್ಪಣೆ ಮಾಡಿದ.

ಶಂಕರ ಉಡಿದು ಬಿದ್ದ ಕಾಂಡಕ್ಕೆ ಸೊಂಡಿಲನ್ನು ಸುತ್ತಿ ಮೇಲೆತ್ತಿದ. ಅದನ್ನು ಗೋಪುವಿನ ಬೆನ್ನಮೇಲಿಂದ ತೆಗೆದು ದೂರ ಹಾಕಿದ. ಆದರೂ ಗೋಪುವಿಗೆ ಏಳಲಾಗಲಿಲ್ಲ. ಶಂಕರ ಗೋಪುವಿಗೆ ತನ್ನ ಸೊಂಡಿಲನ್ನು ಕೊಟ್ಟ. ಬಿದ್ದ ಆನೆ ಚಾಚಿದ ಸೊಂಡಿಲನ್ನು ಹಿಡಿದುಕೊಂಡಿತು. ಶಂಕರ ಗೆಳೆಯನನ್ನು ಮೆಲ್ಲಗೆ ಮೇಲೆಳೆದ. ಗೋಪುವಿನ ಪಾದಗಳಿಗೆ

ನೆಲಸಿಕ್ಕಿತು. ಆನೆ ತನ್ನ ಹಿಂಗಾಲುಗಳನ್ನೂರಿತು. ಶಂಕರನ ದೃಢವಾದ ಸೊಂಡಿಲು ಅದಕ್ಕೆ ಆಧಾರವಾಯಿತು. ಗೋಪು ತನ್ನ ನಾಲ್ಕು ಕಾಲುಗಳನ್ನೂರಿ ನಿಲ್ಲುವುದರಲ್ಲಿ ಕೃತಕಾರ್ಯನಾದ.

ರಾಮುಣ್ಣಿ ದೂರ ಕುಳಿತು ಶಂಕರ ಗೋಪುವನ್ನು ಹಿಡಿದೆತ್ತುವುದನ್ನು ನೋಡುತಿದ್ದ. ಅವನ ಬೆನ್ನು ನೋಯುತಿದ್ದಿತು. ನಾಯಕ ಅವನನ್ನು ಸಮೀಪಿಸಿ, "ನಿಮಗೆ ಪೆಟ್ಟಾಯಿತೇ" ಎಂದು ಕೇಳಿದ.

"ಬೆನ್ನಿಗೆ ಪೆಟ್ಟಾಗಿದೆ ಎಂದು ತೋರುವುದು." ರಾಮುಣ್ಣಿ ಬಾಗಿದ ಬೆನ್ನನ್ನು ನೇರ್ಪಡಿಸುತ್ತಾ ಉಸುರಿದ.

"ನಿವೀಗ ಆನೆಯನ್ನು ಅಟ್ಟಿಕೊಂಡು ಪುರೆಗೆ ಹೋಗಿ." ನಾಯಕ ಹೇಳಿದ. : "ನಿಮಗಿಂತ ಹೆಚ್ಚು ಗೋಪುವಿಗೆ ಪೆಟ್ಟಾಗಿದೆ ಎಂದು ತೋರುವುದು. ಆತನಿಗೆ ಹೆಚ್ಚು ಸೇವೆ ಮತ್ತು ಉಪಚಾರಗಳು ಅಗತ್ಯ."

"ನನ್ನ ಬೆನ್ನೇ ಉಳುಕಿ ಹೋಗಿದೆ." ರಾಮುಣ್ಣಿಯ ಕೊರಳಿಂದ ಸಿಡುಕು ಸ್ವರ ಹೊರಟಿತು : "ಇನ್ನು ಆನೆಗೆ ಹೇಗೆ ಉಪಚಾರಮಾಡಲಿ?"

"ಅಲ್ಲ ನೋಡಿ. ಆನೆ ಬಾಯಿಬಾರದ ಜಂತು" ನಾಯಕ ಮರುಕ ತುಂಬಿದ ದನಿಯಲ್ಲಿ ಉಸುರಿದ: "ಅದರ ಉಗುರು ಬೇರೆ ಜಜ್ಜಿ ಹೋಗಿದೆ."

ಗೋಪು ಕುಂಟುತ್ತಾ ಹೆಜ್ಜೆಗಳನ್ನಿರಿಸಿದ. ರಾಮುಣ್ಣಿ ಮೆಲ್ಲನೆ ಎದ್ದು ಆನೆಯನ್ನು ಅಟ್ಟಿಕೊಂಡು ಪುರೆಗೆ ಹೋದ. ಅವನಿಗೆ ನಾಯಕನಾಡಿದ ಮಾತು ಹಿತವೆನಿಸಲಿಲ್ಲ. ಈ ಕುರುಬ ಹುಡುಗ ನನಗೆ ಬುದ್ಧಿ ಹೇಳಲು ಬಂದನಲ್ಲ ಎಂದು ಅವನು ಮನಸ್ಸಿನಲ್ಲಿಯೇ ಸಿಡಿಮಿಡಿಗೊಂಡ. ಕುರುಬ ಹುಡುಗನ ಕೆಚ್ಚು ಮತ್ತು ಆನೆಯ ಸಾಹಸ ತನ್ನ ಜೀವ ಉಳಿಸಿದುವು ಎಂದು ಅವನು ಆಲೋಚಿಸಲಿಲ್ಲ.

ನಾಯಕ ಶಂಕರನಿಂದ ಮರವನ್ನೆಳಸಿಕೊಂಡು ಹೋದ. ಕುರುಬ ಹುಡುಗ ರಾಮುಣ್ಣಿಯ ಮತ್ತು ಆತನ ಜೀವಗಳನ್ನು ಕಾಪಾಡಿದ ಸಂಗತಿ ಇನ್ನುಳಿದ ಆನೆಕಾರರಾದ ಕೋರ ಮತ್ತು ಮಮ್ಮೂಞಗಳಿಗೆ ತಿಳಿಯಿತು. ಅವರು ನಾಯಕನ ಸಾಹಸವನ್ನು ಮೆಚ್ಚಿದರು. ಕೋರ ನಾಯಕನನ್ನು ಪ್ರೀತಿಯಿಂದ ಮಾತಾಡಿಸಿ, "ನಾಯಕ, ನಾನು ಕಳೆದ ಇಪ್ಪತ್ತು ವರ್ಷ

ಗಳಿಂದ ಆನೆಕಾರನಾಗಿ ಗೈಯ್ಯುತಿದ್ದೇನೆ. ಆದರೆ ಶಂಕರನಂತಹ ಆನೆಯನ್ನು ನಿನ್ನಂತಹ ಆನೆಕಾರನನ್ನೂ ನಾನು ನೋಡಲಿಲ್ಲ. ನೋಡು, ನಿನ್ನ ಕುಶಲತೆಯನ್ನು ಅರಿತರೆ ನಿಲಂಬೂರಿನ ಅರಸರೇ ನಿನ್ನನ್ನು ತಮ್ಮ ಆನೆಕಾರನನ್ನಾಗಿ ಮಾಡಿಕೊಳ್ಳುವರು. ನೀನು ಕಾಡೊಳಗೆ ಬೆಳೆದ ಸಂಪಗೆ ಹೂವಿನ ಹಾಗಿದ್ದೀಯೆ!" ಎಂದು ಹೊಗಳಿದ.

ಆನೆ ನಡೆಸುವುದರಲ್ಲಿ ತನ್ನನ್ನು ಮೆಚ್ಚತಕ್ಕ ಒಬ್ಬ ಆನೆಕಾರನಾದರೂ ಇರುವನಲ್ಲ ಎಂದು ನಾಯಕನಿಗೆ ಸಂತೋಷವಾಯಿತು. ಹಿಗ್ಗಿನ ಕಿಡಿಗಳು ಅವನ ಕಣ್ಣುಗಳಲ್ಲಿ ತೇಲಿದುವು. ಅವನು, "ನಾನು ಕುರುಬರ ಹುಡುಗ. ನನ್ನ ಅಪ್ಪನಿಂದ ಆನೆ ನಡೆಸುವ ವಿದ್ಯೆಯನ್ನು ಒಂದಿಷ್ಟು ಕಲಿತುಕೊಂಡಿದ್ದೇನೆ" ಎಂದು ಹೇಳಿದ.

ನಾಯಕ ಸಂಜೆಯವರೆಗೆ ದುಡಿದಾದ ಮೇಲೆ ಶಂಕರನನ್ನು ಹೊಳೆಗೆ ಕರೆದುಕೊಂಡು ಹೋದ. ಹೊಳೆಯಲ್ಲಿ ಮೀಯಿಸಿದ. ಉಳಿದ ಆನೆಕಾರರು ತಮ್ಮ ತಮ್ಮ ಆನೆಗಳನ್ನು ಎರಡು ಮೂರು ದಿನಗಳಿಗೊಮ್ಮೆ ಮೀಯಿಸುತಿದರು. ಆದರೆ ನಾಯಕ ಮಾತ್ರ ಹಾಗಲ್ಲ. ಅವನು ಶಂಕರನನ್ನು ಪ್ರತಿನಿತ್ಯ ನೀರಿಗಿಳಿಸುತಿದ್ದ. ಅವನು ಆನೆಯ ಮೈಗೆ ನೀರೆರಚಿ, ಆನೆಯ ಮೈ ಮತ್ತು ಕಾಲುಗಳನ್ನು ಹುಲ್ಲಿನಿಂದ ತಿಕ್ಕಿ ಉಜ್ಜುತಿದ್ದ.

ಅವನು ನಡೆಸುತ್ತಿದ್ದ ಗಜಮಜ್ಜನವನ್ನು ಕಂಡು ಉಳಿದ ಆನೆಕಾರರು, "ನಾಯಕ ನೀನು ದಿನ ನಿತ್ಯ ಆನೆಯನ್ನು ಮೀಯಿಸುವೆಯಲ್ಲ! ಅದೇನು ಮಗುವೇ? ಮೂರು ನಾಲ್ಕು ದಿನಗಳಿಗೊಮ್ಮೆ ನೀರಿಗಿಳಿಸಿದರೆ ಸಾಲದೇ?" ಎಂದು ಕೇಳುತ್ತಿದ್ದರು.

"ಆನೆಯೆಂದರೆ ಸಣ್ಣಮಕ್ಕಳ ಹಾಗೆ!" ನಾಯಕ ಮಾರ್ನುಡಿಯುತಿದ: "ದಿನವಿಡಿ ತೊಲೆಗಳನ್ನು ಎಳೆದು ಎಳೆದು ಅದರ ಮೈ ನೊಂದಿರುತ್ತದೆ. ತಂಪು ನೀರನ್ನೆರಚಿ ತಿಕ್ಕಿ ತೊಳೆದರೆ ಅದರ ಮೈ ಹಗುರವಾಗುವುದು."

ಶಂಕರನನ್ನು ನದಿಗಿಳಿಸಿ ಸ್ನಾನ ಮಾಡಿಸುವುದೆಂದರೆ ನಾಯಕನಿಗೊಂದು ಹಬ್ಬ. ಅವನು ಸೊಂಟದಷ್ಟು ಆಳವ ನೀರಲ್ಲಿ ಶಂಕರನನ್ನು ಮಲಗಿಸಿ ಕೈ ಮೈಗಳನ್ನು ಹುಲ್ಲಿನಿಂದ ತಿಕ್ಕಿ ತೊಳೆಯುತಿದ್ದ. ಆ ಮೇಲೆ

ಆನೆಯನ್ನು ಆಳದ ನೀರಿಗೆ ಕರೆದುಕೊಂಡು ಹೋಗಿ ಬಿಡುತಿದ್ದ. ಅವನು ಈಜುತ್ತಾ ಹೋಗಿ ಆನೆಯ ಬೆನ್ನ ಮೇಲೇರುತಿದ್ದ. ಅವನು ಶಂಕರನ ಬೆನ್ನಮೇಲಿಂದ ಆಳವಾದ ನೀರಿಗೆ ಧುಡುಂ ಎಂದು ನೆಗೆಯುತಿದ್ದ. ಶಂಕರ ತನ್ನ ಪುಟ್ಟ ಕಣ್ಣುಗಳನ್ನು ಅರಳಿಸಿ ಮಾವುತನು ಬಿದ್ದೆಡೆಯನ್ನು ನೋಡುತಿದ್ದ. ಅವನು ತನ್ನ ಸೊಂಡಿಲನ್ನು ನೀರೊಳಗೆ ತೂರಿಸಿ ನಾಯಕನನ್ನು ಹಿಡಿದು ಮೇಲೆತ್ತುತಿದ್ದ. ಆನೆಯ ಸೊಂಡಿಲಲ್ಲಿ ಸಿಲುಕಿದ ನಾಯಕ ತನ್ನ ಕೈಕಾಲುಗಳನ್ನು ಬಡಿದುಕೊಳ್ಳುತಿದ್ದ. ತನ್ನ ಸೊಂಡಿಲಲ್ಲಿ ತೂಗುತ್ತಾ ಕೈಕಾಲುಗಳನ್ನು ಬಡಿದುಕೊಳ್ಳುವ ಮಾವುತನನ್ನು ನೋಡುವುದೆಂದರೆ ಆನೆಗೆ ಬಲು ಹಿಗ್ಗು. ಅದು ಹೀಗೆ ಒಂದು ಕ್ಷಣ ಆತನನ್ನು ಸೊಂಡಿಲಲ್ಲಿ ತೂಗಾಡಿಸಿದ ಮೇಲೆ ಆನೆಕಾರನನ್ನು ಬೀಸಿ ಮಡುವಿನೊಳಗೆ ಎಸೆಯುತಿದ್ದಿತು.

ನಾಯಕ ಮಡವಿನಾಳದಿಂದ ಮೇಲೆದ್ದು ಬರುವಾಗ ಶಂಕರ ಸೊಂಡಿಲಲ್ಲಿ ನೀರು ತುಂಬಿಸಿಟ್ಟುಕೊಳ್ಳುತಿದ್ದ. ನಾಯಕ ತನ್ನನ್ನು ಸಮೀಪಿಸಿದೊಡನೆ ಸೊಂಡಿಲನ್ನೆತ್ತಿ ಆನೆಕಾರನ ನೆತ್ತಿಯಮೇಲೆ ಜಲಾಭಿಷೇಕ ಮಾಡುತಿದ್ದ. ನಾಯಕ ಸಿಟ್ಟುಗೊಂಡವನಂತೆ ನಟಿಸಿ ಬೊಗಸೆಯಿಂದ ನೀರೆತ್ತಿ ಶಂಕರನ ಕಣ್ಣುಗಳಿಗೆ ಸೇಚಿಸುತಿದ್ದ. ಶಂಕರ ತಾನು ಸೋಲಬಾರದೆಂದು ನೀರು ತುಂಬಿದ ಸೊಂಡಿಲನೆತ್ತಿ ಬೀಸಿ, ನೀರನ್ನು ಎರಚುತಿದ್ದಿತು. ಹನಿಗಳು ಅರ್ಧವೃತ್ತಾಕಾರದಲ್ಲಿ ಹೊರಡುತಿದ್ದುವು. ಸಂಜೆ ಸೂರ್ಯನ ಹೊಂಗಿರಣಗಳು ಈ ನೀರ ಹನಿಗಳ ಮೇಲೆ ಬೀಳುತಿದ್ದುವು. ಅವುಗಳು ಹನಿಗಳ ಸಾಲಿಗೆ ಸಪ್ತಾವರ್ಣಗಳನ್ನು ಬಳಿದು ಇಂದ್ರಚಾಪವನ್ನು ನಿರ್ಮಿಸುತಿದ್ದುವು.

ಹೀಗೆ ಅರೆತಾಸು ಆನೆಯ ಸಂಗಡ ಆಟವಾಡುವುದರಲ್ಲಿ ನಾಯಕ ಹೊತ್ತು ಕಳೆಯುತಿದ್ದ. ಅವರು ಹೊಳೆಯಿಂದ ಮೇಲೆದ್ದು ಬಂದಾಗ ತಪ್ಪಲೆಯಲ್ಲಿ ಬೇಯಲು ಹಾಕಿದ್ದ ಅಕ್ಕಿ ಬೆಂದಿರುತಿದ್ದಿತು. ಅವನು ಬೆಂದ ಅನ್ನಕ್ಕೆ ಬೆಲ್ಲ ಮತ್ತು ಎಳ್ಳೆಣ್ಣೆಗಳನ್ನು ಬೆರಸಿ ಉಂಡೆ ಕಟ್ಟುತಿದ್ದ. ಒಂದೊಂದು ಉಂಡೆಯೂ ಒಂದೊಂದು ತೆಂಗಿನಕಾಯಿ ಗಾತ್ರವಿರುತಿದ್ದಿತು. ಆನೆ ಬಾಯೊಳಗೆ ತುರುಕಿದ ಅನ್ನದ ಮುದ್ದೆಯನ್ನು ನಿಧಾನ

ವಾಗಿ ಮೆಲ್ಲುತ್ತಿದ್ದಿತು. ನಾಲ್ಕಾರು ಉರುಳೆಗಳನ್ನು ಮೆದ್ದು ಮುಗಿಸಿದ ಮೇಲೆ ಶಂಕರ, ಹಟಮಾರಿ ಮಗು ಉಣಿಸುವ ತಾಯಿಯೊಡನೆ ಊಟ ಬೇಡವೆಂದು ಹೇಳುವಂತೆ, ತನ್ನ ತಲೆಯನ್ನು ತಿರುಗಿಸುತಿದ್ದ.

"ಶಂಕರ, ನೀನು ಹಟಮಾಡಬೇಡ." ಶಂಕರನಿಗೆ ನಾಯಕ ಮಿದುನುಡಿಗಳಲ್ಲಿ ಸಮಾಧಾನ ಹೇಳುತ್ತಿದ್ದ: "ಅನ್ನಕ್ಕೆ ಬೆಲ್ಲ ಸಾಲದೆ ಹೋಯಿತೆಂದು ಸಿಟ್ಟು ಬಂತೇ? ನಾಳೆ ನಾಲ್ಕು ಅಚ್ಚು ಹೆಚ್ಚು ಬೆಲ್ಲ ಹಾಕುತ್ತೇನೆ. ನೋಡು, ಈ ದಿನ ನಿನ್ನೆಗಿಂತ ನಾಲ್ಕು ತೊಲೆಗಳನ್ನು ಹೆಚ್ಚು ಎಳೆದಿದ್ದೀಯೆ. ನಿನಗೆ ತುಂಬಾ ಹಸಿವೆಯಾಗಿರಬಹುದು. ಉಪವಾಸವಿರಬಾರದು."

ಆನೆಕಾರನ ಬಿನ್ನಹವನ್ನು ಕೇಳಿದ ಮೇಲೆ ಶಂಕರ ಬಾಯನ್ನು ಅಗಲಿಸಿ ಒಡ್ಡುತಿದ್ದ. ನಾಯಕನಿತ್ತ ಅನ್ನದುರುಳೆಗಳನ್ನು ಜಗಿದು ನುಂಗುತಿದ್ದ.

ಶಂಕರನ ಆರೋಗಣೆ ಮುಗಿದ ಮೇಲೆ ಆತನ ಹಿಂಗಾಲಿಗೆ ಕಬ್ಬಿಣದ ಸರಪಳಿಯನ್ನು ತೊಡಿಸಿ ನಾಯಕ ಮರವೊಂದಕ್ಕೆ ಬಿಗಿಯುತಿದ್ದ.




ಎರಡು ದಿನಗಳಿಂದ ನಾಯಕನಿಗೆ ಜ್ವರ. ಈಗ ಅವನು ತನ್ನ ಬಿಡಾರವನ್ನು ಬಿಟ್ಟು ಹೊರಬರಲಾರ. ನಾಲ್ಕು ದಿನಗಳ ಹಿಂದೆ ಜಡಿಮಳೆ ಸುರಿದಾಗ ಅವನು ಅದನ್ನು ಲೆಕ್ಕಿಸದೆ ಶಂಕರನಿಂದ ತೊಲೆಗಳನ್ನು ಎಳೆಸಿದ್ದ. ಮಳೆಯಲ್ಲಿ ನೆನೆದುದರಿಂದ ಮರುದಿನ ಅವನಿಗೆ ಕೆಮ್ಮಲು ನೆಗಡಿಗಳು ತಲೆದೋರಿದವು. ಆದರೆ ಇದೇನು ಮಹಾ ಎಂದುಕೊಂಡು ಅವನು ಆ ದಿನ ಕೆಲಸಕ್ಕೆ ಹೋದ. ಅಂದು ಸಂಜೆ ಅವನ ಮೈ ಸ್ವಲ್ಪ ಕಾದಿತು. ಆದರೆ ಅದನ್ನು ಅವನು ಗಣಸಿಗೆ ತಂದುಕೊಳ್ಳಲಿಲ್ಲ. ಮೂರನೆಯ ದಿನ ಕೆಮ್ಮಲು ಹೆಚ್ಚಿತು. ಎದೆಯಲ್ಲಿ ನೋವು ತಲೆದೋರಿತು. ಜ್ವರದ ತಾಪ ಅಧಿಕವಾಯಿತು. ಅವನಿಗೆ ತನ್ನ ಚಾಪೆಯನ್ನು ಬಿಟ್ಟು ಏಳುವುದು ಕಷ್ಟ

ವಾಯಿತು. ಆನೆಕಾರ ಕೋರಗಂಜಿಯನ್ನು ಬೇಯಿಸಿ ತಂದುಕೊಟ್ಟ. ಕಾಡಿನಿಂದ ನಾರು ಬೇರುಗಳನ್ನು ತಂದು ಕಷಾಯ ಮಾಡಿ ಕುಡಿಸಿದ. ಆದರೆ ಈ ಚಿಕಿತ್ಸೆಗೆ ಜ್ವರ ಸಗ್ಗಲಿಲ್ಲ. ಬಿಡಾರದೊಳಗೆ ಬಿದಿರು ದಬ್ಬೆಗಳ ಮಂಚದ ಮೇಲೆ ಗೋಣಿ ಪಟ್ಟೆಯೊಂದರ ಮೇಲೆ ಮಲಗಿ ಕಂಬಳಿಯನ್ನು ಹೊದೆದುಕೊಂಡು ನರಳುವುದೇ ಅವನ ಪಾಡಾಯಿತು.

ಬಿದ್ದ ಗೋಪುವಿಗೆ ತುಂಬಾ ನೋವಾಗಿತ್ತು. ಆನೆಯನ್ನು ತೊಲೆ ಎಳಸಲು ಕೊಂಡೊಯ್ಯಲು ರಾಮುಣ್ಣಿಗೆ ಸಾಧ್ಯವೇ ಆಗಲಿಲ್ಲ. ಗೋಪುವಿಗೆ ತಾನು ಬಲ್ಲ ಚಿಕಿತ್ಸೆ ಮಾಡುವುದು, ಕಳ್ಳಿಗೋಸ್ಕರ ಪನಮರಕ್ಕೆ ಹೋಗಿ ಬರುವುದು, ಇವೇ ಅವನ ಪಾಲಿನ ಕೆಲಸಗಳಾದುವು.

ಕಾರ್ಯಕಾರ ಮೂಸೆಕಾಕನಿಗೆ ಚಿಂತೆ ಹಿಡಿಯಿತು; ಇದ್ದ ನಾಲ್ಕು ಆನೆಗಳಲ್ಲಿ ಎರಡು ಈಗ ಮರ ಎಳೆಯುತ್ತಿರಲಿಲ್ಲ. ಒಂದು ಆನೆ ಬೇನೆ ಬಿದ್ದು ಮರ ಎಳೆಯಲು ಅಶಕ್ತವಾಗಿತ್ತು. ಇನ್ನೊಂದರ ಮಾವುತ ಜ್ವರದಿಂದ ಹಾಸಿಗೆ ಹಿಡಿದಿದ್ದಾನೆ. ಮಳೆಗಾಲ ಪ್ರಾರಂಭವಾಗುವ ಮುನ್ನ ತೊಲೆಗಳನ್ನೆಲ್ಲಾ ಎಳೆಯಿಸಿ ಮಾರ್ಗದ ಬದಿಗೆ ಸಾಗಿಸಬೇಕು; ಇಲ್ಲದಿದ್ದರೆ ಮಳೆಗಾಲ ಕಳೆಯುವ ಮುನ್ನ ತೊಲೆಗಳು ಕಲ್ಲಾಯಿಯನ್ನು ಸೇರುವ ಹಾಗಿಲ್ಲ. ಕೆಲಸ ಕೆಡಿಸಿದೆ ಎಂದು ಮೊದಲಾಳಿ ತನ್ನ ಮೇಲೆ ರೇಗುವನು. ಎಂದು ಆಲೋಚಿಸಿ ಮೂಸೆಕಾಕನಿಗೆ ತಲೆನೋವು ಹಿಡಿಯಿತು. ಕೊನೆಗೆ ಅವನಿಗೊಂದು ಉಪಾಯ ತೋಚಿತು. ಕುರುಬ ಹುಡುಗ ಜ್ವರ ಹಿಡಿದು ಮಲಗಿದ್ದಾನೆ. ಆತನ ಆನೆಗೆ ಈಗ ಕೆಲಸ ಮಾಡಿಸುವವರಿಲ್ಲ. ರಾಮುಣ್ಣಿ ಏಕೆ ಆ ಆನೆಯಿಂದ ತೊಲೆಗಳನ್ನು ಎಳೆಯಿಸಬಾರದು? ಆಗ ಮೂರು ಆನೆಗಳು ದುಡಿದಂತಾಗುವುದು. ದಿನವೊಂದರ ಹತ್ತು ತೊಲೆಗಳು ಅಡವಿಯಿಂದ ಬಂದರೆ ಅಷ್ಟಾಯಿತು ಎಂದು ಅವನು ಚಿಂತೆಗೆ ಒಂದು ಪರಿಹಾರವನ್ನು ಕಂಡು ಹಿಡಿದ.

"ರಾಮುಣ್ಣಿ, ನಿನ್ನ ಆನೆ ತೊಲೆ ಎಳೆಯುವಂತಾಗಬೇಕಾದರೆ ಇನ್ನೆಷ್ಟು ದಿವಸಬೇಕು?" ಮೂಸೆಕಾಕ ರಾಮುಣ್ಣಿಯನ್ನು ಕೇಳಿದ.

"ಮೊದಲಾಳಿ, ನಾನು ಹೇಗೆ ಹೇಳಲಿ?" ರಾಮುಣ್ಣಿ ಬೆರಳ ತುದಿಯಿಂದ ನೆತ್ತಿಯನ್ನು ಕೆರೆಯುತ್ತಾ ಹೇಳಿದ: "ನನಗೆ ತಿಳಿದ

ಮದ್ದುಗಳನ್ನೆಲ್ಲಾ ಮಾಡುತಿದ್ದೇನೆ. ''

'' ನೋಡು, ಆ ಜೇನುಕುರುಬರ ಹುಡುಗನೂ ಜ್ವರಹಿಡಿದು ಬಿದ್ದಿದ್ದಾನೆ. ಎರಡು ಆನೆಗಳ ಕೆಲಸ ನಿಂತು ಹೋಗಿದೆ. ಹೀಗಾದರೆ ಮಳೆಗಾಲ ಮುಗಿಯುವ ಮುನ್ನ ತೊಲೆಗಳನ್ನು ಎಳೆದು ಮುಗಿಸುವುದು ಅಸಾಧ್ಯ ! ''

'' ಮೊದಲಾಳಿ, ನಾನೇನು ಮಾಡಲಿ ? ನನ್ನ ಆನೆ ಬೇನೆ ಹಿಡಿದು ಬಿದ್ದಿದೆಯಲ್ಲ ! ''

" ನೋಡು, ಆ ಕುರುಬ ಹುಡುಗ ಜ್ವರದಿಂದ ಏಳುವವರೆಗೆ ನೀನು ಆತನ ಆನೆಯಿಂದ ಕೆಲಸ ಮಾಡಿಸು. "

" ಆದರೆ ಆತ ಬಹು ಗರ್ವದವನು ; ಆನೆಯನ್ನು ನನ್ನ ವಶ ಕೊಡಲು ಒಪ್ಪುವನೋ ; ಇಲ್ಲವೋ ? ''

'' ನಾಲ್ಕು ಆನೆಗಳ ಪೈಕಿ ಆ ಆನೆಯೇ ಬಹು ಸಾಧುವಾದುದು. ಆ ಕುರುಬ ಹುಡುಗ ಒಂದು ನಾಯಿಯನ್ನು ನಡೆಸಿಕೊಳ್ಳುವಂತೆ, ಆನೆಯಿಂದ ಕೆಲಸ ಮಾಡಿಸುತಿದ್ದಾನೆ. ನೀನು ಆನೆಕಾರನಾಗಿ ಹದಿನೈದು ಇಪ್ಪತ್ತು ವರ್ಷಗಳನ್ನು ತೀದಿದ್ದೀಯೆ ಎಂದು ಹೇಳುವೆಯಲ್ಲ. ಕುರುಬ ಹುಡುಗನಾಳುವ ಆನೆಯನ್ನು ನೀನು ಆಳಲಾರೆಯಾ ? "

ತನ್ನ ಮಾವುತತನ ಕುರುಬ ಹುಡುಗನ ಮಾವುತತನಕ್ಕಿಂತಲೂ ಕೀಳು ಎಂಬ ಆ ಧ್ವನಿ ರಾಮುಣ್ಣಿಯ ಅಭಿಮಾನದ ಮೇಲೆ ಬರೆ ಎಳೆಯಿತು. ಅವನು, '' ಆ ಆನೆಯಿಂದ ನಯಿಸಲು ನನ್ನಿಂದಾಗದು ಎಂದು ಹೇಳಲಿಲ್ಲ. ಆದರೆ ಆನೆಯ ಒಡೆಯರು ಬಹುದೊಡ್ಡ ಜಮ್ಮಿಗಳು. ತಮ್ಮ ಆನೆಯಿಂದ ಬೇರೊಬ್ಬ ಮಾವುತ ದುಡಿಸಿದನೆಂದು ಅವರು ತಿಳಿದರೆ ಅನರ್ಥವಾದೀತು ! '' ಎಂದು ಹೇಳಿದ.

'' ಆನೆ ಏನಾದರೂ ಪುಕ್ಕಟೆ ದುಡಿಯುವುದೇ ? ನಾವು ದಿನಕ್ಕೆ ೧೦ ರೂಪಾಯಿ ಎಸೆಯುವದಿಲ್ಲವೆ ? " ಮೂಸೆಕಾಕ ದರ್ಪಸ್ವರದಲ್ಲಿ ಅಂದ: '' ದುಡಿಸುವವನು ನಾನಲ್ಲವೇ ? ನೀನೇಕೆ ಹೆದರಬೇಕು. ಈಗ ಮುಖ್ಯವಾಗಿ ಕೆಲಸ ನಡೆಯಬೇಕಾಗಿದೆ. ನಿನ್ನ ಮೊದಲಾಳಿ ಕೊಡುವ ಸಂಬಳದ ಜೊತೆಗೆ, ನಾಲ್ಕೋ ಆರೋ ರೂಪಾಯಿಗಳನ್ನು ಸೇರಿಸಿಕೊಡಲು

ನಾನು ಹಿಂದು ಮುಂದು ನೋಡಲಾರೆ!''

ಮೂಸೆಕಾಕ ನಾಲ್ಕಾರು ರೂಪಾಯಿಗಳನ್ನು ಹೆಚ್ಚಿಗೆ ಕೊಡುವೆನೆಂದು ಹೇಳಿದುದನ್ನು ಕೇಳಿದಾಗ ರಾಮುಣ್ಣಿಯ ಕಿವಿಗಳು ನೆಟ್ಟಗಾದುವು, ಅವನು "ನೀವು ಅಷ್ಟು ದಯೆ ತೋರಿಸಿದರೆ ಸಾಕು; ನಿಮ್ಮ ಮಾತನ್ನು ನಾನು ನೆತ್ತಿಯ ಮೇಲೆ ಹೊರದಿರುವೆನೇ?'' ಎಂದು ಮಾರ್ನುಡಿದ.

ಮರುದಿನವೂ ನಾಯಕನ ಜ್ವರ ಬಿಡಲಿಲ್ಲ. ಕೆಮ್ಮಲೂ ಜಾಸ್ತಿಯಾಯಿತು. ಕೆಲಸಕ್ಕೆ ಹೊರಡುವ ಮುನ್ನ ಕೋರಗಂಜಿ ಬೇಯಿಸಿ ಕೊಟ್ಟಿದ್ದ. ನಾಯಕ ಆ ಗಂಜಿಯನ್ನು ಕುಡಿದು ಬಿದಿರು ದಬ್ಬೆಗಳ ಕಟ್ಟಿಲು ಮೇಲೆ ಬಿದ್ದುಕೊಂಡ. ಅಂದು ರಾಮುಣ್ಣಿ ಶಂಕರನನ್ನು ದುಡಿಯಿಸಲು ಮಲೆಗೆ ಅಟ್ಟಿಕೊಂಡು ಹೋಗಿದ್ದ. ಆದರೆ ಅವನು ತಾನು ಆನೆಯನ್ನು ಒಯ್ವ ಮುನ್ನ ನಾಯಕನಿಗೆ ಸಂಗತಿಯನ್ನು ತಿಳಿಸಲಿಲ್ಲ. ಕಾರ್ಯಕಾರ ಮೂಸೆಕಾಕನೂ ಹೇಳಲಿಲ್ಲ. ಕುರುಬ ಹುಡುಗನಿಗೆ ತಿಳಿಸಿ ರಂಗವೆಬ್ಬಿಸುವುದೇಕೆ ಎಂದು ಅವನು ಸುಮ್ಮನಾದ.

ನಾಯಕ ಕಟ್ಟಿಲಮೇಲೆ ಬಿದ್ದು ಹೊರಳುತಿದ್ದ. ಅವನಿಗೆ ಹಾಗೆಯೇ ಜೊಂಪು ಹತ್ತಿತು. ಅವನಿಗೊಂದು ಸಣ್ಣ ಕನಸು ಬಿತ್ತು: ಎರಡು ದಿನಗಳಿಂದ ಶಂಕರನಿಗೆ ಆಹಾರವಿಲ್ಲ. ಆತ ರೊಜ್ಜಿಗೆದ್ದು ತಾನು ವಾಸ ಮಾಡುವ ಬಿಡಾರವನ್ನು ಎಳೆದು ಬೀಳಿಸಿ ಹುಡಿಹುಡಿ ಮಾಡಿದ್ದಾನೆ; ಅಷ್ಟರಿಂದಲೂ ಸಿಟ್ಟು ಆರದೆ ತನ್ನನ್ನು ಬೆನ್ನಟ್ಟಿಕೊಂಡು ಬಂದಿದ್ದಾನೆ. ನಾಯಕ ಭೀತನಾಗಿ "ಶಂಕರಾ!" ಎಂದು ದೊಡ್ಡ ದನಿಯಲ್ಲಿ ಕೂಗಿದ. ಅವನ ಧ್ವನಿಯೇ ನಾಯಕನನ್ನು ನಿದ್ದೆಯಿಂದ ಎಬ್ಬಿಸಿತು. ತಾನು ಕಂಡುದು ಸ್ವಪ್ನವೆಂದು ಅವನಿಗೆ ಅರಿವಾಯಿತು.

ಈಗ ಅವನ ಮನಸ್ಸು ಶಂಕರನ ಹಿಂದೆ ಹೋಯಿತು. ಮೂರು ದಿನಗಳಿಂದ ಶಂಕರನಿಗೆ ಮೀಹವಿಲ್ಲ; ಎಳ್ಳೆಣ್ಣೆ ಮತ್ತು ಬೆಲ್ಲ ಬೆರಸಿದ ಸವಿಗೂಳಿಲ್ಲ. ತಾನು ಬಾಳೆದಿಂಡು ಹಲಸಿನೆಲೆಗಳನ್ನು ಕಡಿದು ತಂದು ಹಾಕಲಿಲ್ಲ ಎಂದು ಹಲುಬಿದ. ಹಿಂದಣ ದಿನ ಸಂಜೆ ಬಾಳೆದಿಂಡು ಕಡಿದು ತುಂಡು ಹಾಕುವೆನೆಂದು ಹೊರಟಾಗ ಕೋರ, "ನಾಯಕ, ನಿನಗೆ ಜ್ವರ

ವೇನಾದರೂ ನೆತ್ತಿಗೇರಿದೆಯೇ? ಬೆಂಕಿಯಂತೆ ಸುಡುವ ಜ್ವರದಲ್ಲಿ ಬಾಳೆ ದಿಂಡು ಕಡಿದು ಹಾಕುವೆನೆಂದು ಹೊರಟಿರುವೆಯಲ್ಲ. ನನ್ನ ಆನೆ ಮಾಧವನಿಗೆ ಸೊಪ್ಪು ದಿಂಡುಗಳನ್ನು ತಂದು ಹಾಕುವಾಗ ನಿನ್ನ ಆನೆಗೂ ಹಾಕಲಾರೆನೇ? ಜತೆಯ ಆನೆಕಾರನಿಗೆ ಅಷ್ಟೊಂದು ಸಹಾಯ ಮಾಡದಿದ್ದರೆ ನಾನು ಮನುಷ್ಯನಾಗಿ ಹುಟ್ಟಿದುದೇತಕ್ಕೆ?" ಎಂದು ಹೇಳಿ ನಾಯಕನನ್ನು ಗದರಿಸಿದ್ದ. ಆತನೇ ಹತ್ತಿರದ ಮುಳ್ಳುವ ಕುರುಬರ ಹಾಡಿಗೆ ಹೋಗಿ ನಾಲ್ಕು ಬಾಳೆದಿಂಡುಗಳನ್ನು ಕಡಿದು ತಂದು ಹಾಕಿದ್ದ. ಸಂಜೆ ಹೊತ್ತು ಅವನೇ ಕೂಳು ಬೇಯಿಸಿ ಶಂಕರನಿಗೆ ಉಣಿಸಿದ್ದ.

ಶಂಕರನಿಗೆ ಒಂದಿಷ್ಟು ಹಸಿಹಲಸಿನ ಎಲೆಗಳನ್ನು ಹಾಕೋಣವೆಂದು ಕಟ್ಟಿಲಿನಿಂದ ಎದ್ದ. ತಲೆದೆಸೆಯಲ್ಲಿದ್ದ ಕತ್ತಿಯನ್ನೆತ್ತಿಕೊಂಡು ಬಿಡಾರದಿಂದ ಹೊರಬಂದ. ಜ್ವರದ ತಾಪದಿಂದ ಅವನ ಮೈ ಗಡಗಡನೆ ನಡುಗುತ್ತಿದ್ದಿತು. ಆದರೂ ಅವನು ಹಲಸಿನ ಮರವೊಂದನ್ನು ಹತ್ತಿ ನಾಲ್ಕು ಕೊಂಬೆಗಳನ್ನು ಕಡಿದುರುಳಿಸಿದ. ಆ ಕೊಂಬೆಗಳನ್ನು ಎಳೆದುಕೊಂಡು ಆನೆ ಕಟ್ಟುವ ಎಡೆಗೆ ಬಂದ. ಆದರೆ ಅಲ್ಲಿ ಆನೆ ಇರಲಿಲ್ಲ. ಮರಕ್ಕೆ ಸುತ್ತು ಹಾಕಿದ ಕಬ್ಬಿಣದ ಸಂಕಲೆ ಮಾತ್ರ ಇತ್ತು.

ಶಂಕರನನ್ನು ಕಾಣದುದರಿಂದ ನಾಯಕನಿಗೆ ನಿರಾಶೆಯಾಯಿತು. ಆಶ್ಚರ್ಯವಾಯಿತು. ಅವನು ಸಂಕಲೆಯನ್ನು ಬೆರಳುಗಳಿಂದ ಹಿಡಿದೆತ್ತಿ ಪರೀಕ್ಷಿಸಿ ನೋಡಿದ. ಅದೇನೂ ತುಂಡಾಗಿರಲಿಲ್ಲ. ಆನೆ ಅಡವಿಯಲ್ಲಿ ಮೇವನ್ನು ಅರಿಸಿ ತಿನ್ನಲಿ ಎಂದು ಕೋರ ಸಂಕಲೆಯನ್ನು ಕಳಚಿವಿಟ್ಟಿರಬಹುದು ಎಂದು ಅವನು ಊಹಿಸಿದ.

ಬಿಡಾರ ಬಿಟ್ಟು ಇಷ್ಟು ದೂರ ನಡೆದುದು, ಮರವನ್ನೇರಿ ಕೊಂಬೆಗಳನ್ನು ಕಡಿದು ಬೀಳಿಸಿದುದು, ಈ ಕಾರ್ಯಗಳಿಂದ ನಾಯಕ ಪೂರ್ಣವಾಗಿ ದಣಿದುಹೋಗಿದ್ದ. ಅವನ ಎದೆಯಿಂದ ಉಬ್ಬಸಗಳ ಮಾಲೆ ಹೊಮ್ಮತೊಡಗಿತು. ಅವನ ತಲೆ ಗರ‍್ರನೆ ಸುತ್ತ ತೊಡಗಿತು. ಅವನು ನಿಲ್ಲಲಾರದೆ ಮರದಡಿಯಲ್ಲಿ ಕುಸಿದ. ನೆರಳಿನಲ್ಲಿ ಅರೆತಾಸು ಕುಳಿತು ದಣಿವಾರಿಸಿಕೊಂಡ. ಆ ಮೇಲೆ ಮೆಲ್ಲನೆ ಹೆಜ್ಜೆಗಳನ್ನಿಡುತ್ತಾ ತನ್ನ ಬಿಡಾರಕ್ಕೆ ಬಂದ.

ಸಂಜೆಯಾಯಿತು. ಕೋರ ಕೆಲಸ ಮುಗಿಸಿ ಬಿಡಾರಕ್ಕೆ ಬಂದ. ಅವನು ಕಟ್ಟಿಲ ಮೇಲೆ ಮಲಗಿದ ನಾಯಕನ ಹೊದಿಕೆಯನ್ನು ಎಳೆದು ಎದೆಮುಟ್ಟಿ ನೋಡಿದ. ಅವನ ಮೈ ಬೆಂಕಿಯಂತೆ ಸುಡುತ್ತಿದ್ದಿತು. ಕಣ್ಣುಗಳು ಕಾದ ಕಬ್ಬಿಣದ ಗೋಲಿಗಳಾಗಿದ್ದುವು. ನಾಯಕನಿಗೆ ಕೋರ ಬಂದುದಾಗಲೀ, ತನ್ನ ಹೊದಿಕೆಯನ್ನು ಎಳೆದುದಾಗಲೀ ತಿಳಿಯದು. ಜ್ವರದ ಹೆಚ್ಚಳದಿಂದ ಅವನಿಗೆ ಮಂಕು ಕವಿದಿತ್ತು. ಕೋರ, ನಾಯಕನ ಮೈಯನ್ನು ಹಿಡಿದಲುಗಿಸಿ, "ನಾಯಕ, ನಾಯಕ!" ಎಂದು ಕೂಗಿ ಕರೆದ.

"ಕೋರಣ್ಣ ಕರೆದಿರಾ?" ನಾಯಕ ಕ್ಷೀಣ ಸ್ವರದಲ್ಲಿ ಉದ್ಗಾರವೆತ್ತಿದ.

"ಹೂಂ. ನಿನಗೆ ಜ್ವರ ತುಂಬಾ ಹೆಚ್ಚಿದೆ." ಕೋರ ಕನಿಕರ ತುಂಬಿದ ದನಿಯಲ್ಲಿ ಉಸುರಿದ: "ನೀನು ಕಂಬಳಿಯನ್ನು ಹೊದೆದು ಮಲಗಿಕೋ. ನಾನು ನಿನಗೆ ಒಂದಿಷ್ಟು ಬಿಸಿಬಿಸಿ ಕಾಫಿಮಾಡಿ ತಂದು ಕೊಡುವೆನು."

"ಕೋರಣ್ಣ, ನೀವು ಶಂಕರನ ಕಾಲ ಸಂಕಲೆಯನ್ನು ಕಳಚಿದಿರಾ?" ನಾಯಕನಿಗೆ ಶಂಕರ ನೆನಪಾಗಲು ಕೇಳಿದ.

"ಇಲ್ಲ. ಶಂಕರನಿಂದ ತೊಲೆಗಳನ್ನು ಎಳೆಯಿಸಲು ರಾಮುಣ್ಣಿ ಆತನನ್ನು ಮಲೆಗೆ ಒಯ್ದಿದ್ದಾನೆ!"

"ರಾಮುಣ್ಣಿ!" ನಾಯಕನ ಕಣ್ಣುಗಳಿಂದ ವಿಸ್ಮಯದ ಕಿಡಿಗಳು ಉದುರಿದುವು. "ಅವನು ಯಾರನ್ನು ಕೇಳಿ ಶಂಕರನನ್ನು ಒಯ್ದ? ನನಗೆ ತಿಳಿಸಲೇ ಇಲ್ಲವಲ್ಲ. ನಮ್ಮ ಪಾಪ ಶಂಕರನನ್ನು ಬೇರೆ ಯಾರವಶಕ್ಕೂ ಕೊಡಲಾಗದೆಂದು ತಾಕೀತು ಮಾಡಿದ್ದಾರೆ."

"ಹೆಚ್ಚೇನು ನನಗೆ ತಿಳಿಯದು. ರಾಮುಣ್ಣಿಯಂತೂ ಇಂದು ಶಂಕರನಿಂದ ತೊಲೆಗಳನ್ನು ಎಳೆಯಿಸಿದ್ದಾನೆ."

"ನೀನು ಯಾರನ್ನು ಕೇಳಿ ಶಂಕರನನ್ನು ಒಯ್ದೆ ಎಂದು ನಾನು ರಾಮುಣ್ಣಿಯನ್ನು ಕೇಳಿಯೆ ಬಿಡುತ್ತೇನೆ." ನಾಯಕ ಕಟ್ಟಿಲ ಮೇಲಿನಿಂದ ಎದ್ದು ನೆಲದ ಮೇಲೆ ಅಡಿಗಳನ್ನು ಊರಿದ. ಆದರೆ ಅವನ ಕಾಲುಗಳು

ಗಡಗಡನೆ ನುಡುಗಿದುವು.

"ನಾಯಕ, ಇದೇನು ಮರುಳು! ರಾಮುಣ್ಣಿಯನ್ನು ನಾಳೆ ಕೇಳಿದ ರಾಯಿತು." ಕೋರ ಎದ್ದುನಿಂತ ನಾಯಕನ ಕೈಹಿಡಿದು ಕಟ್ಟಿಲ ಮೇಲೆ ಮಲಗಿಸಿದ. ಮೈಗೆ ಕಂಬಳಿಯನ್ನು ಹೊದೆಸಿದ.

ಕೋರ ಹೊರಟು ಹೋದ. ಆದರೆ ನಾಯಕನ ಮನಸ್ಸು ನೆಮ್ಮದಿ ಯನ್ನು ಕಳೆದುಕೊಂಡಿತು. ರಾಮುಣ್ಣಿ ತನ್ನನ್ನು ಒಂದು ಮಾತು ಕೇಳದೆ ಆನೆಯನ್ನು ದುಡಿಯಲು ಒಯ್ದನಲ್ಲ ಎಂಬ ಚಿಂತೆ ಅವನನ್ನು ಬಾಧಿ ಸಿತು. ನಾಳೆದಿನ ಪಾಪನಿಗೆ ಈ ಸುದ್ದಿ ಸಿಕ್ಕಿದರೆ ಆತ ತನ್ನ ಮೈಮೇಲಿನ ಚರ್ಮವನ್ನು ಸುಲಿಯದೆ ಬಿಡನು; ತಾನು ಕುರುಬ ಹುಡುಗನಾದುದ ರಿಂದ ಈ ಜನರಿಗೆ ಇಷ್ಟು ಅಗ್ಗವಾಗಿ ಹೋಗಿದ್ದೇನೆ ಎಂದು ಅವನು ತನ್ನಲ್ಲಿಯೇ ಹಲುಬಿಕೊಂಡ.

ಕೋರ ಕಾಫಿಯನ್ನು ಕಾಯಿಸಿ ನಾಯಕನಿಗೆ ಒಂದು ಕುಡಿಕೆ ಕಾಫಿ ಯನ್ನು ತಂದುಕೊಟ್ಟ. ನಾಯಕನಿಗೆ ತುಂಬಾ ತೃಷೆಯಾಗಿತ್ತು. ಅವನು ಎದ್ದು ಕುಳಿತು ಕುಡಿಕೆಯನ್ನು ತುಟಿಯ ಮೇಲಿರಿಸಿ ಕಾಫಿಯನ್ನು ಗಟ ಗಟನೆ ಹೀರಿದ. ಅವನ ಕಂದಿದ ಮೋರೆಯನ್ನು ಕಂಡು ಕೋರನಿಗೆ ಮರುಕ ಹುಟ್ಟಿತು. ಅವನು, "ಪಾಪ, ದಿಕ್ಕಿಲ್ಲದ ಕುರುಬರ ಹುಡುಗ. ಈ ದಂಡ ಕಾರಣ್ಯದಲ್ಲಿ ಜ್ವರ ಹಿಡಿದು ನರಳುತಿದ್ದಾನೆ. ಒಂದು ಗುಟುಕು ಗಂಜಿ ಯನ್ನು ಬೇಯಿಸಿ ಬಾಯಿಗೆ ಸುರಿಯುವವರಿಲ್ಲ." ಎಂದು ತನ್ನಲ್ಲಿಯೇ ಹೇಳಿಕೊಂಡ. ನಾಯಕ ಕಾಫಿಯನ್ನು ಹೀರಿ ಮುಗಿಸಲು ಕೋರ, "ನಾಯಕ, ನೀನು ಬೆಳಗಿನಿಂದ ಉಪವಾಸವಿದ್ದೀಯೆ. ನಾನು ಆನೆಗೆ ಅಕ್ಕಿ ಬೇಯಲು ಹಾಕಿ, ನಿನಗೆ ಗಂಜಿ ತಯಾರಿಸಿ ತರುತ್ತೇನೆ." ಎಂದು ನುಡಿದ.

ಕೋರ ಹೊರಟು ಹೋದ. ಕಟ್ಟಿಲ ಮೇಲೆ ಮಲಗಿದ ನಾಯಕ ರಾಮುಣ್ಣಿ ಆನೆಯನ್ನು ಹೊಳೆಗೆ ಇಳಿಸಿರುವನೇ? ಅದಕ್ಕೆ ದಿಂಡು ಮತ್ತು ಸೊಪ್ಪುಗಳನ್ನು ಕಡಿದು ತಂದು ಹಾಕಿರುವನೇ ಎಂದು ತನ್ನ ಲ್ಲಿಯೇ ಚಿಂತಿಸಿದ. ದುಡಿದು ಬಂದ ಶಂಕರನಿಗೆ ಜಳಕಮಾಡಿ ಅಭ್ಯಾಸ. ತಣ್ಣೀರ ಮೀಹದಿಂದ ದುಡಿದು ದಣಿದ ಮೈ ಹಗುರುವಾಗುವುದು. ಆದರೆ

ರಾಮುಣ್ಣಿ ತನ್ನ ಆನೆ ಗೋಪುವನ್ನು ಸಹ ಸರಿಯಾಗಿ ನೋಡಿಕೊಂಡ ವನಲ್ಲ. ಅವನು ಕೆಲಸ ಮುಗಿಸಿ ಬಂದೊಡನೆ ಏನಾದರೂ ಒಂದು ಕಾರಣ ಹೇಳಿ ಪನಮರಕ್ಕೆ ಹೊರಡುತ್ತಿದ್ದ. ಅವನು ಗೋಪುವನ್ನು ನೀರಿ ಗಿಳಿಸುತ್ತಲೂ ಇರಲಿಲ್ಲ; ಆನೆಗೆ ಮೆಲ್ಲಲು ಸೊಪ್ಪು ಮತ್ತು ದಿಂಡು ಗಳನ್ನು ತಂದು ಹಾಕುತ್ತಲೂ ಇರಲಿಲ್ಲ. ಅವನು ಇರುಳು ಒಂದು ಜಾವ ಕಳೆದ ಮೇಲೆ ಮರಳಿ ಬರುತಿದ್ದ. ಆನೆಗೆ ಒಂದಿಷ್ಟು ಅನ್ನಬೇಯಿಸಿ ಹಾಕುತಿದ. ತನ್ನ ಆನೆಗೇ ಉಪಚಾರ ಮಾಡದವನು ಅನ್ಯರ ಆನೆಗೆ ಉಪಚಾರ ಮಾಡುತ್ತಾನೆಯೇ ?

ನಾಯಕನಿಗೆ ಶಂಕರನನ್ನೊಮ್ಮೆ ನೋಡಿ ಬರಬೇಕೆಂದು ಅನಿಸಿತು. ಅವನು ಮೆಲ್ಲಗೆ ಎದ್ದು ನಿಂತು ಕಟ್ಟಿಲಿಗೆ ಆನಿಸಿದ ದೊಣ್ಣೆಯನ್ನು ಊರುತ್ತಾ ಶಂಕರನನ್ನು ಬಿಗಿದಲ್ಲಿಗೆ ಹೆಜ್ಜೆಗಳನ್ನಿರಿಸಿದ.

ನಾಯಕನ ಊಹೆಯಂತೆ ರಾಮುಣ್ಣಿ ಶಂಕರನನ್ನು ಮರಕ್ಕೆ ಬಿಗಿದು ಹೊರಟು ಹೋಗಿದ್ದ. ಅವನಿಗೆ ಮಜ್ಜನ ಮಾಡಿಸಿರಲಿಲ್ಲ. ಹಲಸಿನೆಲೆ ಬಾಳೆದಿಂಡುಗಳನ್ನು ಕಡಿದು ತಂದು ಹಾಕಿರಲಿಲ್ಲ. ಶಂಕರ ಕಣ್ಣುಗಳಿಂದ ನೀರು ಸುರಿಸುತ್ತಾ ನಾಯಕನನ್ನು ನೋಡಿದ. ತನ್ನ ಸೊಂಡಿಲನ್ನೆತ್ತಿ ಆನೆಕಾರನ ನೆತ್ತಿ ಮತ್ತು ಬೆನ್ನುಗಳ ಮೇಲೆ ಆಡಿಸಿದ. ಆನೆಯ ಈ ಮೂಕ ಪ್ರೇಮವನ್ನು ಕಂಡು ನಾಯಕ ಕಣ್ಣುಗಳಿಂದ ನೀರು ಸುರಿಸಿದ. ಶಂಕರ, “ ನನ್ನನ್ನೇಕೆ ಆ ಕಟುಕನ ಕೈಗೆ ಒಪ್ಪಿಸಿದೆ. ನಾನು ಹಸಿವು ಮತ್ತು ದಣಿವುಗಳಿಂದ ನೊಂದು ಹೋಗಿದ್ದೇನೆ ” ಎಂದು ಹೇಳುವ ಹಾಗೆ ಭಾಸ ವಾಯಿತು.

“ ನೋಡು, ಶಂಕರ ನಾನೇನು ಮಾಡಲಿ ? ” ನಾಯಕ ಆನೆಯ ಸೊಂಡಿಲನ್ನು ಮಿದುವಾಗಿ ಸವರುತ್ತಾ ನಡುಗುವ ದನಿಯಲ್ಲಿ ಉಸುರಿದ: “ ನಾನು ಜ್ವರದಿಂದ ಕಟ್ಟಿಲು ಹಿಡಿದು ಹೋಗಿದ್ದೇನೆ. ಎದ್ದು ಓಡಾಡಲು ಆಗುವುದಿಲ್ಲ. ನೀನು ಸಿಟ್ಟಾಗಬೇಡ. ಎರಡು ದಿನಗಳಲ್ಲಿ ಜ್ವರವಾಸಿ ಯಾದೀತು. ಆ ಮೇಲೆ ನಿನಗೆ ಸರಿಯಾಗಿ ಆರೈಕೆ ಮಾಡುತ್ತೇನೆ! ”

ಅಷ್ಟರಲ್ಲಿ ಕೋರ ತಾನು ಕಡಿದ ಹತ್ತೆಂಟು ಬಾಳೆಯ ದಿಂಡು ಗಳನ್ನು ಹೊತ್ತುಕೊಂಡು ಅಲ್ಲಿಗೆ ಬಂದ. ಶಂಕರ ಆಸೆ ತುಂಬಿದ ಕಣ್ಣು

ಗಳಿಂದ ಆ ದಿಂಡುಗಳನ್ನೇ ನೋಡಿದ. ನಾಯಕ ಬಿಡಾರವನ್ನು ಬಿಟ್ಟು ಅಲ್ಲಿಗೆ ಬಂದುದನ್ನು ಕಂಡು ಅವನಿಗೆ ಆಶ್ಚರ್ಯವಾಯಿತು. ಅವನು "ನಾಯಕ, ನೀನೇನು ಮಾಡುತ್ತಿರುವೆ? ಕಟ್ಟಿಲು ಬಿಟ್ಟು ಕದಲಬೇಡ ವೆಂದು ನಾನು ಆಗಲೇ ಹೇಳಿದ್ದೇನಲ್ಲ. ಜ್ವರ ಬಂದವನು ಹೀಗೆ ಗಾಳಿಗೆ ಮೈಯೊಡ್ಡಿ ಓಡಾಡಿದರೆ ಏನಾದೀತು!" ಎಂದು ಹೇಳಿದ.

"ಶಂಕರನನ್ನು ನೋಡದೆ ನನ್ನ ಮನಸ್ಸು ಕೇಳಲಿಲ್ಲ." ನಾಯಕನ ಕಂದಿದ ಮೋರೆಯ ಮೇಲೆ ಕಿರುನಗುವೊಂದು ಮಿನುಗಿತು: "ನೋಡಿ ಕೋರಣ್ಣ, ದುಡಿಸಿದ ಆನೆಗೆ ಒಂದು ಹಿಡಿ ಹಸಿರು ಸೊಪ್ಪು ಸಹ ಹಾಕದೆ ಹೋಗಿದ್ದಾನಲ್ಲ! ಆನೆಯೆಂದರೆ ಸಣ್ಣ ಮಕ್ಕಳ ಹಾಗೆ!"

"ರಾಮುಣ್ಣಿ ಹೆಸರಿಗೆ ಮಾತ್ರ ಆನೆಕಾರ. ಅವನು ಒಂದು ದಿನ ವಾದರೂ ಮೈ ಮುರಿದು ದುಡಿದವನಲ್ಲ. ಅವನ ಕೈಗೆ ಸಿಕ್ಕಿದ ಆನೆ ಎರಡು ವರ್ಷ ಸಹ ಸರಿಯಾಗಿ ಬಾಳದು." ಎಂದು ಹೇಳಿ ಕೋರ ತಾನು ತಂದ ಬಾಳೆಯ ದಿಂಡುಗಳಲ್ಲಿ ನಾಲ್ಕನ್ನು ಶಂಕರನಿಗೆ ಹಾಕಿದ. ನಾಯಕ ಕೋರನ ಕಡೆಗೆ ಕೃತಜ್ಞತೆ ತುಂಬಿದ ನೋಟವೊಂದನ್ನು ಎಸೆದ.

"ನಾಯಕ, ಸಂಜೆಯ ಶೀತಗಾಳಿಗೆ ನೀನು ಮೈಯೊಡ್ಡಬೇಡ." ಕೋರ ನಾಯಕನಿಗೆ ಉಸುರಿದ: "ನಾನು ನಿನ್ನ ಆನೆಯನ್ನು ಸಹ ಹೊಳೆಗಿಳಿಸಿ ತರುವೆನು."

"ಕೋರಣ್ಣ, ನೀನು ನನಗೋಸುಗ ತುಂಬಾ ತೊಂದರೆ ತೆಗೆದು ಕೊಳ್ಳುವಿರಲ್ಲ; ನಿಮ್ಮ ಋಣವನ್ನು ಹೇಗೆ ತೀರಿಸಲಿ?"

"ನಾಯಕ, ನಾವೆಲ್ಲ ಒಂದೇ ಕುಲಕ್ಕೆ ಸೇರಿದವರು-ಆನೆಕಾರರು. ನಾವು ಒಬ್ಬರಿಗೊಬ್ಬರು ನೆರವಾಗಬೇಕಾದುದು ನಮ್ಮ ಧರ್ಮ."

ಕೋರ ಒತ್ತಾಯಪಡಿಸಿದುದರಿಂದ ನಾಯಕ ಬಿಡಾರಕ್ಕೆ ಹೋಗಿ ಕಟ್ಟಿಲಮೇಲೆ ಬಿದ್ದುಕೊಂಡ.

ಇರುಳ ಮೊದಲಜಾವ ಕಳೆದಾಗ ಪನಮರದಿಂದ ರಾಮುಣ್ಣಿಯ ಸವಾರಿ ಚಿತ್ತೈಸಿತು. ಆನೆಕಾರರ ಬಿಡಾರ ತುಂಬಾ ಅವನ ಧ್ವನಿಯೇ ತುಂಬಿತು. ಅವನು ಬಿಡಾರದೊಳಗೆ ನುಗ್ಗಿ ಬಂದು ತನ್ನ ಕಟ್ಟಿಲನ್ನು ಸಮೀಪಿಸುತ್ತಾ, "ಇದೆಂತಹ ನಾಯಿ ಬಾಳು ನನ್ನದು; ನಡುರಾತ್ರಿಯಾ

ದರೂ ನನ್ನ ದುಡಿತ ಮುಗಿಯುವ ಹಾಗಿಲ್ಲ. ಇನ್ನು ಎರಡು ಆನೆಗಳಿಗೆ ಪಿಂಡ ಬೇರೆ ಬೇಯಿಸಿ ಹಾಕಬೇಕು!" ಎಂದು ವಟಗುಟ್ಟುತ್ತಾ ಕೈಯಲ್ಲಿ ಹಿಡಿದ ಲಾಂದ್ರವನ್ನು ನೆಲದಮೇಲಿರಿಸಿದ.

ರಾಮುಣ್ಣಿಯ ಈ ಗದ್ದಲ ಕಟ್ಟಲ ಮೇಲೆ ನಿದ್ದಿಸುತಿದ್ದ ನಾಯಕನನ್ನು ಎಚ್ಚರಿಸಿತು. ಅವನು ಮೆಲ್ಲನೆ ಕಟ್ಟಲಮೇಲೆ ಎದ್ದು ಕುಳಿತು, "ನೀವು ನನ್ನ ಆನೆಯನ್ನು ಗೆಯ್ತಕ್ಕೆ ಅಟ್ಟಿಕೊಂಡು ಹೋದಿರಂತೆ." ಎಂದು ಕೇಳಿದ.

"ಹೂಂ. ಅಟ್ಟಿಕೊಂಡು ಹೋದೆ."

"ನನ್ನೊಡನೆ ಒಂದು ಮಾತು ಹೇಳಲಿಲ್ಲ; ನನ್ನ ಪಾಪ ತಿಳಿದರೆ ಆತ ಕಿಡಿಕಿಡಿಯಾಗಿ ನನ್ನ ಚರ್ಮ ಸುಲಿದು ಬಿಡುತ್ತಾನೆ."

"ನಿನ್ನ ಮಾತನ್ನೇಕೆ ಕೇಳಬೇಕು?" ರಾಮುಣ್ಣಿ ತಿರಸ್ಕಾರ ತುಂಬಿದ ಧ್ವನಿಯಲ್ಲಿ ಒದರಿದ: "ನಿನ್ನ ಪಾಪನಲ್ಲ ನನಗೆ ಸಂಬಳ ಕೊಡುತ್ತಿರುವುದು!"

"ಆದರೆ ಆನೆ ನನ್ನ ಪಾಪನದು; ಆ ಆನೆಯನ್ನು ನೋಡಿಕೊಳ್ಳುವವನು ನಾನು!"

"ಆನೆಗೆ ಮೂಸೆ ಮೊದಲಾಳಿ ಬಾಡಿಗೆ ಕೊಡುತ್ತಾನೆ. ಮೊದಲಾಳಿ ತನಗೆ ಬೇಕಾದವರಿಗೆ ದುಡಿಸಲು ಕೊಡುತ್ತಾನೆ. ಆತನ ಅಪ್ಪಣೆಯಂತೆ ನಾನು ಆನೆಯನ್ನು ದುಡಿಸಲು ಒಯ್ದೆ. ಕೇಳಲು ನೀನು ಯಾರು?"

ರಾಮುಣ್ಣಿಯ ಬಾಯೊಳಗಿಂದ ಹೊರಟ ಕಳ್ಳಿನ ವಾಸನೆ ಬಿಡಾರದೊಳಗೆ ತುಂಬಿಕೊಂಡಿತು.

"ಆನೆಯನ್ನು ದಿನವೆಲ್ಲ ದುಡಿಸಿ ತಂದಿರಿ!" ನಾಯಕ ಕ್ಷೀಣ ಸ್ವರದಲ್ಲಿ ಹೇಳಿದ: "ಆದರೆ ಆನೆಗೆ ಜಳಕ ಮಾಡಿಸಿಲ್ಲ. ಅದರ ಹಸಿವೆಯನ್ನು ಹಿಂಗಿಸಲು ದಿಂಡು ಮತ್ತು ಸೊಪ್ಪುಗಳನ್ನು ತಂದು ಹಾಕಲಿಲ್ಲ. ಇನ್ನೂ ಕೂಳು ಬೇಯಿಸಿಲ್ಲ. ಆನೆ ಬಡವಾದರೆ ಪಾಪನಿಗೆ ನಾನು ಉತ್ತರ ಹೇಳಬೇಕಾಗುವುದು."

"ಇಪ್ಪತ್ತು ವರ್ಷ ಆನೆಕಾರನಾಗಿ ಕೆಲಸ ಮಾಡಿದ್ದೇನೆ. ಈಗ ಇನ್ನೂ ಮೀಸೆ ಮೊಳೆಯದ ಕುರುಬ ಹುಡುಗನಿಂದ ಆನೆ ಸಾಕುವ ವಿಚಾರ

ವನ್ನು ಹೇಳಿಸಿಕೊಳ್ಳಬೇಕಂತೆ. ಈ ಕುರುಬ ಕಿಲಾಡಿಯ ಕೊಬ್ಬೆಷ್ಟು !" ಎಂದು ರಾಮುಣ್ಣಿ ಒದರಿದ. ಅವನ ಒಡಲು ಸೇರಿದ್ದ ಕಳ್ಳು ತನ್ನ ಕೆಲಸ ಮಾಡತೊಡಗಿತು. ಅವನು ಬಾಯಿ ಮಾತಿಂದಲೇ ಸುಮ್ಮನಾಗ ಲಿಲ್ಲ. ಅವನು ಕೈ ಎತ್ತಿ ಕಟ್ಟಿಲ ಮೇಲೆ ಕುಳಿತಿದ್ದ ನಾಯಕನ ಕನ್ನೆಯ ಮೇಲೆ ಒಂದೇಟು ಬಿಗಿದ.

"ಎಲಾ ಇವನ್ನ !" ಪೆಟ್ಟುತಿಂದ ನಾಯಕ ತುಳಿದ ಸರ್ಪದಂತೆ ರೇಗಿದ. ತಾನು ಕುರುಬ ಹುಡುಗನೆಂಬ ಕಾರಣದಿಂದ ರಾಮುಣ್ಣಿ ತನ್ನನ್ನು ಹೊಡೆಯಲು ಮುಂದಾದನೆಂದು ಅವನು ಗ್ರಹಿಸಿದ. ಹಿಂದೆ ಅಡವಿಯಲ್ಲಿ ಬಿದ್ದ ಆನೆಯನ್ನು ಹಿಡಿದೆತ್ತಲು ನೆರವಾದ ತನ್ನ ಕೆನ್ನೆಗೆ ಹೊಡೆದ ಕೃತಘ್ನತೆ ಅವನ ಮುನಿಸಿನ ಕಿಚ್ಚಿಗೆ ಎಣ್ಣೆಯನ್ನೆರೆದಿತು. ಅವನು ಎದ್ದುನಿಂತು ಕಟ್ಟಿಲ ಮೇಲೆ ತಲೆ ಬದಿಯಲ್ಲಿರಿಸಿ ಕೊಂಡಿದ್ದ ಅಂಕುಶ ವನ್ನೆತ್ತಿಕೊಂಡು, "ಎಲಾ, ಕೂಳುಕೊಟ್ಟು ಸಾಕುವ ಪಾಪನ ಹಾಗೆ ನನ್ನ ಹೊಡೆಯುವಿಯಲ್ಲ ! ನೋಡು, ಈ ಕುರುಬ ಹುಡುಗನ ತೋಳಿನಲ್ಲಿಯೂ ಕಸುವಿದೆ ! ಶಂಕರನನ್ನು ಬಾಗಿಸುವ ಕೈ ನಿನ್ನನ್ನೂ ಬಾಗಿಸ ಬಲ್ಲುದು !" ಎಂದು ಗರ್ಜಿಸಿದ.

ಅಂಕುಶವನ್ನು ಕೈಯಲ್ಲಿ ಹಿಡಿದು ನಾಯಕ ತನ್ನನ್ನು ಎದುರಿಸಲು ಮುಂದಾದುದನ್ನು ಕಂಡು ರಾಮುಣ್ಣಿ ಅಪ್ರತಿಭನಾದ. ಅವನ ಧೈರ್ಯ ಉಡುಗಿ ಹೋಯಿತು. ಅವನು ಭೀತಿಯಿಂದ ಎರಡು ಹೆಜ್ಜೆ ಹಿಂದೆ ಸರಿದ.

ಈ ವೇಳೆಯಲ್ಲಿ ಕೋರ ಕೈಯಲ್ಲಿ ಗಂಜಿ ಕುಡಿಕೆಯನ್ನು ಹಿಡಿದು ಕೊಂಡು ಬಿಡಾರದೊಳಗೆ ನುಗ್ಗಿದ. ನಾಯಕ ರಾಮುಣ್ಣಿಯನ್ನು ಹೊಡೆ ಯಲೆಂದು ಅಂಕುಶವನ್ನು ಮೇಲೆತ್ತಿದುದನ್ನು ಕಂಡು ಅವನು ವಿಸ್ಮಯ ತಾಳಿದ. ಅವನು ರಾಮುಣ್ಣಿಯೇ ಕುರುಬ ಹುಡುಗನ ಜತೆಯಲ್ಲಿ ಜಗ ಳಕ್ಕೆ ಕಾಲು ಕೆರೆದಿರಬೇಕೆಂದು ಊಹಿಸಿದ. ಅವನು ನಾಯಕನ ಕೈ ಹಿಡಿದು ತಡೆದು, "ನಾಯಕ, ಇದೇನು ! ಬಿಡಾರದೊಳಗೆ ರಾಮರಂಪ ನಡೆಸಲು ಹೊರಟಿರುವಿಯಲ್ಲ !" ಎಂದು ಪ್ರಶ್ನಿಸಿದ.

"ಕೋರಣ್ಣ, ನೀವೇ ಹೇಳಿ !" ಕುರುಬ ಹುಡುಗ ಸುಡುವ ಕಣ್ಣು

ಗಳಿಂದ ರಾಮುಣ್ಣಿಯನ್ನು ನೋಡುತ್ತಾ ಹೇಳಿದ: "ಈತ ನನ್ನ ಒಂದು ಮಾತು ಕೇಳದೆ ಆನೆಯನ್ನು ದುಡಿಸಲು ಅಟ್ಟಿಕೊಂಡು ಹೋದ. ದುಡಿದು ಬಂದ ಆನೆಯನ್ನು ನೀರಿಗಿಳಿಸಲಿಲ್ಲ; ಮೇವು ಕೊಡಲಿಲ್ಲ; ಕೂಳು ಬೇಯಿಸಿ ಹಾಕಲಿಲ್ಲ. ಏಕೆ ಹಾಗೆ ಮಾಡಿದೆ ಎಂದು ಕೇಳಿದರೆ ಅನ್ನಕೊಡುವ ಪಾಪನ ಹಾಗೆ ನನ್ನ ಹೊಡೆಯುತ್ತಾನೆ!"

"ಹೌದೇ ರಾಮುಣ್ಣಿ?" ಕೋರ ಗಂಜಿ ಕುಡಿಕೆಯನ್ನು ನಾಯಕನ ಕೈಗೆ ಕೊಡುತ್ತಾ ಉಸುರಿದ: "ನಿನಗೆ ಇಷ್ಟು ಪ್ರಾಯವಾದುದು ದಂಡ. ಅವನು ಕೇಳಿದ್ದರಲ್ಲೇನು ತಪ್ಪಿದೆ? ಜ್ವರ ಬಂದು ನರಳುವ ಹುಡುಗನನ್ನು ಹೊಡೆದಿಯಲ್ಲ!"

"ಆನೆಯನ್ನು ಮೀಸಲಿಲ್ಲ, ಅನ್ನ ಬೇಯಿಸಿ ಹಾಕಲಿಲ್ಲ ಎಂದು ಕುರುಬರ ಹುಡುಗ ಗದರಿಸಿದರೆ ಯಾರು ತಾನೇ ಸುಮ್ಮನಿರುವರು?" ರಾಮುಣ್ಣಿ ತಲೆ ಕೆರೆದುಕೊಳ್ಳುತ್ತಾ ಉತ್ತರಿಸಿದ.

"ಜೋಕೆ! ನೀನು ಆತನ ಆನೆಯಿಂದ ದುಡಿಸಿದ ಮೇಲೆ ಆನೆಯ ಆರೈಕೆಯನ್ನು ಮಾಡುವುದು ನಿನ್ನ ಹೊಣೆಯಲ್ಲವೇ?" ಕೋರ ರಾಮುಣ್ಣಿಯನ್ನು ನುಂಗಿ ಬಿಡುವಂತೆ ನೋಡಿದ: "ನಾಯಕ ಹೇಳಿದುದರಲ್ಲೇನು ತಪ್ಪಿದೆ? ಜ್ವರದಿಂದ ನರಳುವ ಹುಡುಗನ ಮೈಗೆ ಇನ್ನೊಮ್ಮೆ ಕೈ ಹಾಕಿನೋಡು. ನಿನ್ನ ಹಲ್ಲುದುರಿಸಿ ಕೈಯಲ್ಲಿ ಕೊಟ್ಟೇನು!"

ರಾಮುಣ್ಣಿ ಹೇಡಿ. ಅವನು ಮಾರುಲಿಗೊಡದೆ ಲಾಂದ್ರವನ್ನೆತ್ತಿಕೊಂಡು ಆನೆಗೆ ಕೂಳು ಬೇಯಿಸಲು ಹೊರಟು ಹೋದ.

"ನಾಯಕ, ನಾನು ಈ ರಾಮುಣ್ಣಿಯಂತಹ ಕೇಡಿಗನನ್ನು ಕಾಣಲಿಲ್ಲ." ಕೋರ ಉದ್ಗಾರವೆತ್ತಿದ: "ನೀನು ಆ ದಿನ ಇವನಿಗೆ ಮಾಡಿದ ಉಪಕಾರ ಹಾವಿಗೆ ಹಾಲೆರೆದಂತಾಯಿತು!"



ದಿನಗಳೆರಡು ಉರುಳಿದುವು. ನಾಯಕನ ಜ್ವರವೇನೂ ಇಳಿಯಲಿಲ್ಲ. ಕೆಮ್ಮಲು ಅಧಿಕವಾಯಿತು. ಕೋರನ ನಾರು ಬೇರುಗಳ ಚಿಕಿತ್ಸೆ ಮುಂದುವರಿಯಿತು. ಕುರುಬ ಹುಡುಗನಿಗೆ ಯಾವ ರೋಗ ತಟ್ಟುತ್ತದೆ; ಏನೋ ನಾಲ್ಕು ದಿನಗಳ ಜ್ವರ; ಇನ್ನೆರಡು ದಿನಗಳಲ್ಲಿ ಅವನು ಏಳುತ್ತಾನೆ ಎಂಬ ತಾತ್ಸಾರ ಭಾವನೆಯಿಂದ ಕಾರ್ಯಕಾರ ಮೂಸೆಕಾಕ ಔಷಧಿಯನ್ನು ತರಲು ದೂರದ ಮಾನಂದವಾಡಿಗೆ ಜನ ಕಳುಹಲಿಲ್ಲ; ಆನೆಕಾರನ ಪಾಪ ನಿಗೆ ಸುದ್ದಿಯನ್ನೂ ಅರುಹಲಿಲ್ಲ.

ಗೋಪುವಿನ ಬೇನೆಯೂ ಗುಣವಾಗಲಿಲ್ಲ. ರಾಮುಣ್ಣಿಯೇ ಶಂಕರ ನನ್ನು ದುಡಿಸತೊಡಗಿದ.

ಒಡಲೊಳಗೆ ಕಳ್ಳು ಸೇರದಿದ್ದರೆ ರಾಮುಣ್ಣಿಗೆ ನಿದ್ದೆಬರುವಹಾಗಿಲ್ಲ; ಆನೆಯಿಂದ ದುಡಿಸುವ ಹುಮ್ಮಸು ಹುಟ್ಟುವ ಹಾಗಿಲ್ಲ. ಆದುದರಿಂದ ಅವನು ದಿನ ನಿತ್ಯ ಏನಾದರೂ ಒಂದು ಕಾರಣ ಹೇಳಿ ಪನಮರ ಯಾತ್ರೆ ಯನ್ನು ಮಾಡಿಯೇ ಮಾಡುತಿದ್ದ. ಮೂಸೆಕಾಕ ಕೊಡುವ ಮುಂಗಡ ವೆಚ್ಚ ಅವನ ಕಳ್ಳು ಕುಡಿತಕ್ಕೇ ಸಾಲದು. ಮುಂಗಡ ದೊರಕುವ ಮೂರು ರೂಪಾಯಿಗಳನ್ನು ಅವನು ಮೂರು ದಿನಗಳಲ್ಲಿ ಹುಡಿಮಾಡಿ ಬಿಡುತಿದ. ಇನ್ನುಳಿದ ನಾಲ್ಕು ದಿನಗಳನ್ನು ಕಳೆಯುವುದು ಹೇಗೆಂದು ಅವನಿಗೊಂದು ಸಮಸ್ಯೆಯೇ ಆಯಿತು. ಹೋಗಿ ಕಾರ್ಯಕಾರನನ್ನು ರೊಕ್ಕ ಕೇಳಿದರೆ, "ನಿನ್ನ ಮೊದಲಾಳಿ ಆನೆಕಾರನಿಗೆ ವೆಚ್ಚಕ್ಕೆಂದು ಮೂರು ರೂಪಾಯಿಗಳನ್ನು ಮಾತ್ರ ಕೊಡಲು ಹೇಳಿದ್ದಾನೆ. ಆತನ ಚೀಟಿಯಿಲ್ಲದೆ ಹೆಚ್ಚು ಹಣಕೊಡಲಾರೆ." ಎಂದು ಖಂಡತುಂಡವಾಗಿ ಹೇಳಿ ಬಿಡುತಿದ್ದ.

ಕಾರ್ಯಕಾರ ಹಣಕೊಡದಿದ್ದರೂ ತನ್ನ ಕಳ್ಳಿಗೆ ಬೇಕಾದ ದುಡ್ಡು ಗಳಿಸುವುದು ಹೇಗೆ ಎಂದು ರಾಮುಣ್ಣಿಯ ಬುದ್ಧಿ ಚಿಂತಿಸತೊಡಗಿತು. ಅವನ ಹರಿತವಾದ ಬುದ್ಧಿಗೆ ಉಪಾಯವೊಂದು ಹೊಳೆಯದೆ ಇರಲಿಲ್ಲ. ಆನೆಗೆ ಬೇಯಿಸಿ ಹಾಕಲೆಂದು ಕಾರ್ಯಕಾರ ಪ್ರತಿನಿತ್ಯ ಹತ್ತು ಸೇರು ಅಕ್ಕಿಯನ್ನು ಕೊಡುತಿದ್ದ. ಈ ಅಕ್ಕಿಯನ್ನು ಕತ್ತರಿಸಿ ಆನೆಗೆ ಎಂಟು

ಸೇರು ಬೇಯಿಸಿ ಹಾಕಿದರಾಯಿತು; ಉಳಿದ ಎರಡು ಸೇರು ಅಕ್ಕಿಯನ್ನು ಮರ ತರಿಯಲು ಬರುವ ಕುರುಬರಿಗೆ ಮತ್ತು ಅಡಿಯರಿಗೆ ಮಾರಿದ ರಾಯಿತು. ತನಗೆ ನಿರಾಯಾಸವಾಗಿ ದಿನ ನಿತ್ಯ ಐದಾರಾಣೆ ರೊಕ್ಕ ಸಿಗುವುದು. ಮಾವುತ ತನ್ನ ಊಟವನ್ನು ಕತ್ತರಿಸಿ ಕಿಸೆಗೆ ರೊಕ್ಕ ಸೇರಿ ಸುತ್ತಿರುವನೆಂದು ಮೊದಲಾಳಿಗೆ ಚಾಡಿ ಹೇಳುವ ಗೋಜಿಗೆ ಆನೆ ಹೋಗದು.

ಹೀಗೆ ರಾಮುಣ್ಣಿಯ ಬುದ್ಧಿ ತರ್ಕಿಸಿತು. ಅವನು ಆನೆಯ ಊಟದ ಅಕ್ಕಿಯಲ್ಲಿ ಒಂದು ಪಾಲು ಕತ್ತರಿಸಿ ಮಾರಿ, ಕಳ್ಳಿಗೆ ಬೇಕಾಗುವ ದುಡ್ಡನ್ನು ಗಳಿಸತೊಡಗಿದ. ಅಡವಿಯಲ್ಲಿ ಮರ ತರಿಯಲು ಬರುತಿದ್ದ ಕುರುಬರು ಮತ್ತು ಅಡಿಯರು ಅಕ್ಕಿಯನ್ನು ಕೊಂಡುಕೊಳ್ಳಲು ದೂರದ ಪನಮರಕ್ಕೆ ಹೋಗುವ ತೊಂದರೆ ತಪ್ಪಿತಲ್ಲ ಎಂದು ಸಂತೋಷದಿಂದ ರಾಮುಣ್ಣಿ ಕದ್ದುಗಳಿಸಿದ ಅಕ್ಕಿಯನ್ನು ಕೊಂಡುಕೊಂಡರು. ಈ ಸಂಗತಿ ಕಾರ್ಯಕಾರ ಮೂಸೆಕಾಕನ ಕಿವಿಗಳಿಗೆ ಬೀಳದೆ ಇರಲಿಲ್ಲ. ಅವನು, " ಆನೆ ಏನೂ ನನ್ನದಲ್ಲ; ಆಹಾರ ಸಾಲದೆ ಆನೆ ಬಡವಾದರೆ ನನ ಗೇನೂ ನಷ್ಟವಿಲ್ಲ; ನಾನೇಕೆ ರಾಮುಣ್ಣಿಯನ್ನು ಗದರಿಸಿ ಅವನ ನಿಷ್ಠುರವನ್ನು ಕಟ್ಟಿಕೊಳ್ಳಬೇಕು ?" ಎಂದು ಆಲೋಚಿಸಿ ಸುಮ್ಮ ನಾದ.

ನಾಯಕ ಜ್ವರ ಹಿಡಿದ ಮೇಲೆ ರಾಮುಣ್ಣಿ ಶಂಕರನನ್ನು ದುಡಿ ಯಿಸತೊಡಗಿದನಷ್ಟೆ. ನಾಯಕ ರಾಮುಣ್ಣಿ ಶಂಕರನಿಂದ ಕೆಲಸ ಮಾಡಿಸಲಾಗದೆಂದು ಕಾರ್ಯಕಾರ ಮೂಸೆಕಾಕನಿಗೆ ತಿಳಿಸಿದ. ಆತ ಕಾರ್ಯಕಾರಿ ನಾಯಕನ ಮಾತುಗಳನ್ನು ಕಿವಿಗಳಿಗೆ ಹಾಕಿಕೊಳ್ಳಲಿಲ್ಲ. ಅವನು, "ನಾಯಕ, ನೀನು ಜ್ವರವೆಂದು ಹೇಳಿ ಬಿಡಾರವನ್ನು ಭದ್ರವಾಗಿ ಹಿಡಿದಿದ್ದೀಯೆ. ಒಂದು ದಿನ ಆನೆ ಕೆಲಸ ಮಾಡದಿದ್ದರೆ ನನ್ನ ಮೊದ ಲಾಳಿಗೆ ಇಪ್ಪತ್ತು ರೂಪಾಯಿ ನಷ್ಟವಾಗುವುದು. ನಿನ್ನ ಪಾಪ ಬಂದು ಆ ನಷ್ಟ ಭರ್ತಿ ಮಾಡಿಕೊಡುವುದಿಲ್ಲ." ಎಂದು ಗದುರಿಸಿ ಬಾಯಿ ಮುಚ್ಚಿಸಿದ.

ಈಗ ರಾಮುಣ್ಣಿ ಗೋಪುವಿಗೆ ಮಾತ್ರವಲ್ಲ. ಶಂಕರನಿಗೂ ಕೂಳು

ಬೇಯಿಸಬೇಕಾಯಿತು. ಇದರಿಂದ ಅವನಿಗೆ ಸಂತೋಷವೇ ಆಯಿತು. ಶಂಕರನ ಪಾಲಿನ ಅಕ್ಕಿಯಿಂದಲೂ ಎರಡು ಸೇರು ಕದಿಯಬಹುದಲ್ಲ ಎಂದು ಅವನು ಹಿರಿಹಿಗ್ಗಿದ. ಕೋರ, " ರಾಮುಣ್ಣಿ, ಶಂಕರನಿಗೆ ಕೂಳು ಬೇಯಿಸಿ ಉಣಿಸುವುದು ನಿನಗೆ ಕಷ್ಟವೆಂದು ತೋರಿದರೆ, ನಾನು ಬೇಯಿಸು ವೆನು. ನಾಯಕ ಅಷ್ಟು ಸಹಾಯ ಮಾಡಬೇಕೆಂದು ನುಡಿದಿದ್ದಾನೆ." ಎಂದು ರಾಮುಣ್ಣಿಗೆ ಹೇಳಿದ.

" ಆನೆಯಿಂದ ಕೆಲಸ ಮಾಡಿಸಿಕೊಳ್ಳಬಲ್ಲ; ಆದರೆ ಕೂಳು ಬೇಯಿಸಿ ಹಾಕಲಾರ ಎಂಬ ದೂರಿಗೆ ನಾನು ತಲೆಯೊಡ್ಡಬೇಕೇನೋ!" ರಾಮುಣ್ಣಿ ಸಿಡುಕು ದನಿಯಲ್ಲಿಯೇ ಉತ್ತರಿಸಿದ: " ನಾನು ಅನ್ನ ಬೇಯಿಸಿ ಉಣಿಸ ಬಲ್ಲೆ."

ಕೋರ ಶಂಕರನಿಗೆ ಕೂಳನ್ನು ರಾಮುಣ್ಣಿಯೇ ಬೇಯಿಸಿಕೊಳ್ಳಲಿ ಎಂದು ಅವನನ್ನು ಅವನ ಪಾಡಿಗೆ ಬಿಟ್ಟು ಬಿಟ್ಟ. ರಾಮುಣ್ಣಿ ಶಂಕರನ ಉಣಿಸಿನಿಂದಲೂ ಎರಡು ಸೇರು ಅಕ್ಕಿಯನ್ನು ಕತ್ತರಿಸಿ ತೆಗೆಯತೊಡಗಿದ.

ಶಂಕರನಾದರೋ ಬಹು ನಾಜೂಕಿನಲ್ಲಿ ಬೆಳೆದ ಆನೆ. ಧನಿಯು ಮನೆಯಲ್ಲಿದ್ದಾಗ ಅದಕ್ಕೆ ದಿನ ನಿತ್ಯ ತೆಂಗಿನಕಾಯಿ ಬಾಳೆಹಣ್ಣುಗಳು ತಪ್ಪುತ್ತಿರಲಿಲ್ಲ. ನಾಯಕ ಎಳ್ಳೆಣ್ಣೆ ಬೆಲ್ಲಗಳನ್ನು ಅನ್ನಕ್ಕೆ ಬೆರಸದೆ ಎಂದೂ ಕೊಟ್ಟವನಲ್ಲ. ಅವನು ಅನ್ನವನ್ನು ಉರುಳೆ ಗಟ್ಟಿ ಸಣ್ಣ ಮಕ್ಕ ಳಿಗೆ ಉಣಿಸುವಂತೆ ಆನೆಗೆ ಉಣಿಸುತಿದ್ದ.

ಶಂಕರ ತನಗೆ ಅರೆಹೊಟ್ಟೆಯಾದಾಗ ಉಣಿಸಬೇಡವೆಂದು ಮೋರೆ ಯನ್ನು ತಿರುಗಿಸುತಿದ್ದ. ಆಗ ನಾಯಕ, " ಶಂಕರ, ನೀನು ಹಟಮಾಡ ಬೇಡ. ಈದಿನ ಅನ್ನಕ್ಕೆ ಎರಡು ಅಚ್ಚು ಬೆಲ್ಲ ಹೆಚ್ಚು ಹಾಕಿದ್ದೇನೆ" ಎಂದು ಪುಸಲಾಯಿಸುತಿದ್ದ. ನಾಯಕನಿಂದ ಪುಸಲಾಯಿಸಿಕೊಂಡು ಉಣುವುದೆಂದರೆ ಶಂಕರನಿಗೆ ತುಂಬಾ ಹಿಗ್ಗು. ಆನೆಕಾರ ಅನ್ನದ ಉರುಳೆ ಯನ್ನು ಬಾಯೊಳಗೆ ಇಡುತಿದ್ದಾಗ ಆನೆ ಸೊಂಡಿಲನ್ನೆತ್ತಿ ನಾಯಕನ ಬೆನ್ನನ್ನು ಸವರುವುದು. ಸೊಂಡಿಲನ್ನು ಮಾವುತನ ಕಿವಿಯ ಹತ್ತಿರ ವಿಟ್ಟು ಉಸ್ಸೆಂದು ಉಸಿರು ಬಿಡುವುದು. ಬೆಚ್ಚಗಿನ ಗಾಳಿ ತನ್ನ ಕಿವಿಯೊ ಳಗೆ ನುಗ್ಗಿದಾಗ ನಾಯಕ ಬೆಚ್ಚಿ ಬೀಳುತಿದ್ದ. ಅವನು ಶಂಕರನ ಸೊಂಡಿ

ಲಿಗೆ ಮಿದುವಾಗಿ ಹೊಡೆದು, "ಶಂಕರ, ನೀನು ಬಲು ಕಿಲಾಡಿ! ನನ್ನನ್ನು ಬೆಚ್ಚಿ ಬೀಳಿಸಿಬಿಟ್ಟೆ!" ಎಂದು ಉದ್ಗಾರವೆತ್ತುತಿದ.

ಹೀಗೆ ಮಾವುತನ ಸಂಗಾತ ಸರಸವಾಡುತ್ತಾ ಉಣುವುದು ಶಂಕರನ ಅಭ್ಯಾಸ.

ರಾಮುಣ್ಣಿ ಬೇಯಿಸಿ ಹಾಕುತಿದ್ದ ಕೂಳಿಗೆ ಬೆಲ್ಲ ಮತ್ತು ಎಳ್ಳೆಣ್ಣೆಗಳು ಸೋಂಕುತ್ತಿರಲಿಲ್ಲ. ಈ ಸಪ್ಪೆ ಕೂಳು ಶಂಕರನ ನಾಲಿಗೆಗೆ ರುಚಿಸುತ್ತಿರಲಿಲ್ಲ. ರಾಮುಣಿ ಅನ್ನವನ್ನು ಮುದ್ದೆಮಾಡಿ ಬಾಯೊಳಗೆ ತುರುಕಿದಾಗ ಶಂಕರ ಅರೆಹೊಟ್ಟೆಯಾಗುವಷ್ಟು ಮಾತ್ರ ಉಂಡ. ಆ ಮೇಲೆ ಆತ ಉರುಳೆಯನ್ನು ಬಾಯೊಳಗೆ ಇರಿಸಲು ಬಂದಾಗ ಆನೆ ಬಾಯಿ ತೆರೆಯಲಿಲ್ಲ.

"ತಿನ್ನು ಆನೆ!" ರಾಮುಣ್ಣಿ ಗಜರಿದ. ಅವನು, "ನಾನು ಅನ್ನಕೆ ಬೆಲ್ಲ ಹಾಕಿದ್ದೇನೆ; ಎಣ್ಣೆ ಹಾಕಿದ್ದೇನೆ." ಎಂದು ಹೇಳಿ ಆನೆಯನ್ನು ಉಪಚರಿಸಲಿಲ್ಲ.

ಆನೆ ಬಾಯ್ದೆರೆದು ತನ್ನ ಸೊಂಡಿಲನ್ನು ರಾಮುಣ್ಣಿಯ ಕಿವಿಯ ಹತ್ತಿರ ಒಯ್ದಿತು. ಅದು ನಾಯಕನ ಜತೆಯಲ್ಲಿ ಸರಸವಾಡುತಿದ್ದಂತೆ ರಾಮುಣ್ಣಿಯ ಕಿವಿಯೊಳಗೆ ಉಸ್ಸೆಂದು ಉಸಿರನ್ನು ಊದಿತು. ಬೆಚ್ಚಗಿನ ಗಾಳಿ ಕಿವಿಯೊಳಗೆ ನುಗ್ಗಿ ತಮ್ಮಟೆಗೆ ತಟ್ಟಿತು. ರಾಮುಣ್ಣಿ ಬೆಚ್ಚಿ ಬಿದ್ದು ಹಿಂದೆ ಸರಿದ. ಅವನು ಕೈಯಲ್ಲಿ ಹಿಡಿದ ಕೂಳ ಮುದ್ದೆ ಅವನು ಉಟ್ಟ ವಸ್ತ್ರದ ಮೇಲೆ ಬಿದ್ದು ಬಟ್ಟೆಯ ಅಂದವನ್ನು ಕೆಡಿಸಿತು. ಅವನು "ಇದೆಂತಹ ಬಿಕನಾಶಿ ಆನೆ!" ಎಂದು ಆನೆಯನ್ನು ಬೈದು ಶಪಿಸಿದ.

ಶಂಕರ ಬಾಕಿಯುಳಿದ ಅನ್ನವನ್ನು ಮುಟ್ಟಲಿಲ್ಲ. ರಾಮುಣ್ಣಿ, "ಈ ಆನೆಗೆ ಈ ಪಾಟಿ ಕೂಳು ಬೇಯಿಸಿ ಹಾಕುವುದು ದಂಡ." ಎಂದು ನಿಶ್ಚಯಿಸಿದ. ಮರುದಿನದಿಂದ ಅವನು ಶಂಕರನ ಪಾಲಿನಿಂದ ಇನ್ನೊಂದು ಸೇರು ಅಕ್ಕಿಯನ್ನು ಕದ್ದು ಕುರುಬರಿಗೆ ಮಾರಲಾರಂಭಿಸಿದ.

ಶಂಕರನಿಗೆ ಕೊಡುವ ಆಹಾರ ಸಾಕಾಗುತ್ತಿರಲಿಲ್ಲ. ಆದುದರಿಂದ ಅವನು ದಿನದಿಂದ ದಿನಕ್ಕೆ ಸೊರಗಿದ. ನಾಯಕ ಪ್ರತಿನಿತ್ಯ ಆನೆಯನ್ನು ಮೇಯಿಸಿ ಮೂರು ನಾಲ್ಕು ದಿನಗಳಿಗೊಮ್ಮೆ ಮೈಗೆಲ್ಲಾ ಎಣ್ಣೆ ಸವರು

ತಿದ್ದುದರಿಂದ, ಆನೆಯ ಮೈ ಫಳಫಳನೆ ಕಪ್ಪು ಹಾಸುಗಲ್ಲಿನಂತೆ ಹೊಳೆಯುತ್ತಿದ್ದಿತು. ಆದರೆ ಈಗ ಮೈ ನೀರು ಎಣ್ಣೆಗಳನ್ನು ಕಾಣದೆ ನಾಲ್ಕೆಂಟು ದಿನಗಳಾದವು. ಕೆಲಸದಲ್ಲಿಯೂ ಶಂಕರ ಮೊದಲಿನ ಉತ್ಸಾಹ ತೋರಿಸುತ್ತಿರಲಿಲ್ಲ. ಅನೇಕ ಸಲ ಚಲ ಹಿಡಿದು ಮೊಂಡುತನ ತೋರಿಸುತಿದ್ದ. ಶಂಕರನಿಂದ ದುಡಿಸುವ ಚದುರು ರಾಮುಣ್ಣಿಯಲ್ಲಿರಲಿಲ್ಲ. ಅವನು ನಾಯಕನಂತೆ ನಯವಾದ ಮಾತುಗಳನ್ನಾಡಿ ಹೊಗಳಿ ಆನೆಯಿಂದ ಕೆಲಸ ತೆಗೆದುಕೊಳ್ಳುವುದರಲ್ಲಿ ಪಳಗಿದವನಲ್ಲ. ಅವನು ರೇಗುತಿದ; ಕೂಗಾಡುತಿದ್ದ; ಕಿವಿಗಳನ್ನು ಅಂಕುಶದಿಂದ ತಿವಿದು ಎಳೆಯುತಿದ್ದ. ಆನೆ ಕಾಡಿನ ಮರಗಳೆಲ್ಲಾ ನಡುಗಿ ಹೋಗುವಂತೆ ದೊಡ್ಡ ದನಿಯಲ್ಲಿ ಘೀಳಿಡುತಿತ್ತಲ್ಲದೆ ತೊಲೆಯನ್ನು ಹಿಡಿದು ಎತ್ತುತ್ತಿರಲಿಲ್ಲ. ಪಳಗಿದ ಆನೆಕಾರನೆಂದು ಜಂಭ ಕೊಚ್ಚಿಕೊಳ್ಳುತಿದ್ದ ರಾಮುಣ್ಣಿ ಈ ಮೊಂಡ ಆನೆಯಿಂದ ಕೆಲಸ ತೆಗೆಯುವುದು ಹೇಗೆ ಎಂದು ಪೇಚಿನಲ್ಲಿ ಸಿಕ್ಕಿಬಿದ್ದ.

ರಾಮುಣ್ಣಿಯ ಈ ಪಾಡನ್ನು ಕಂಡು ಮಮ್ಮುಞಗೆ ನಗು ಬಂತು. ಅವನು, "ರಾಮುಣ್ಣಿ ನಿನಗೂ ಆನೆಗಳಿಗೂ ಜನ್ಮವೈರವೆಂದು ತೋರುವುದು. ನೀನು ಯಾವ ಆನೆಯಿಂದಲೂ ಸರಿಯಾಗಿ ದುಡಿಸಲಾರೆ." ಎಂದು ಹೇಳಿದ.

"ಇಷ್ಟು ಹಟಮಾರಿ ಆನೆಯನ್ನು ನಾನು ನೋಡಿಯೇ ಇಲ್ಲ." ರಾಮುಣ್ಣಿ ಸಿಡುಕು ಸ್ವರದಲ್ಲಿ ಹೇಳಿದ. "ಈ ಹಾಳು ಆನೆಗಿಂತ ನನ್ನ ಗೋಪು ಸಾವಿರ ಪಾಲು ಮೇಲು!"

"ರಾಮುಣ್ಣಿ, ನೀನು ಆನೆಯನ್ನು ಪ್ರೀತಿಸುವುದಿಲ್ಲ." ಮಮ್ಮುಞ ಮಾರ್ನುಡಿದ: "ಆನೆಯನ್ನು ಪ್ರೀತಿಯಿಂದ ಗೆಯ್ಯಬಹುದೇ ಹೊರತು ಅಂಕುಶದಿಂದ ಗೆಯ್ಯಲಾಗುವುದಿಲ್ಲ. ನೋಡು, ಈ ಆನೆ ಆ ಕುರುಬ ಹುಡುಗನ ಮಾತನ್ನು ನಾಯಿ ಮರಿಯ ಹಾಗೆ ಕೇಳುತಿತ್ತು. ತೊಲೆಗಳನ್ನು ಎಳೆವಾಗ ಒಂದು ದಿನವಾದರೂ ತಂಟೆ ತಕರಾರುಗಳನ್ನು ಮಾಡಿರಲಿಲ್ಲ."

"ನೀವೆಲ್ಲರೂ ಆ ಕುರುಬ ಹೈದನನ್ನು ಹೊಗಳಿ ಅಟ್ಟಕ್ಕೇರಿಸುವಿರಿ." ರಾಮುಣ್ಣಿ ನಂಜು ಬೆರೆತ ದನಿಯಲ್ಲಿ ನುಡಿದ.

ಆನೆ ಕಿವಿಗೆ ಚುಚ್ಚಿದ ಅಂಕುಶದ ನೋವನ್ನು ತಡೆಯಲಾಗದೆ ತೊಲೆಯನ್ನು ಎಳೆದುಕೊಂಡು ಹೋಯಿತು. ಮಮ್ಮುಂಞ ಕೋಪನ ಮೋರೆಯನ್ನು ನೋಡುತ್ತಾ, “ ಈ ಮಹಾರಾಯ ಇನ್ನೊಂದು ಹತ್ತು ದಿನ ಶಂಕರನಿಂದಲೇ ದುಡಿಸುವುದಾದರೆ, ಅದು ಸೊರಗಿ ಅರೆವೈಯಾಗ ವುದು. ” ಎಂದು ಉಲಿದ.

ಶಂಕರನಿಗೆ ತುಂಬಾ ಹಸಿವೆಯಾಗಿತ್ತು. ರಾಮುಣ್ಣಿ ಬೆಳಿಗ್ಗೆ ಮೂರು ಸೇರು ಅಕ್ಕಿಯ ಅನ್ನವನ್ನು ಮಾತ್ರ ಉಣಿಸಿದ್ದ. ಬಾಳೆದಿಂಡು, ಹಲಸಿನೆಲೆ ಗಳ ಫಲಾಹಾರ ಮಧ್ಯಾಹ್ನ ದೊರೆತಿರಲಿಲ್ಲ. ಹೊಳೆಯ ತಣ್ಣೀರಿನಿಂದ ಒಡಲನ್ನು ತುಂಬಿಸಿಕೊಂಡುದೆಷ್ಟೋ ಅಷ್ಟೆ. ಆರೆಂಟು ಸಲ ತೊಲೆ ಗಳನ್ನು ಎಳೆದು ಮೈಬೇರೆ ದಣಿದಿತ್ತು. ತೊಲೆಯನ್ನು ಎಳೆಯುತ್ತಾ ಬರುವಾಗ ನಡುದಾರಿಯಲ್ಲಿ ಮುಳ್ಳುವ ಕುರುಬರ ಪುರೆಗಳು ಸಿಕ್ಕಿದುವು. ಈ ಪುರೆಗಳ ಸುತ್ತಲೂ ಸೊಗಸಾದ ಬಾಳೆಯ ತೋಟವಿತ್ತು. ಬಾಳೆ ಮರ ಗಳಲ್ಲಿ ಬಲಿತ ಗೊನೆಗಳು ತೂಗುತಿದ್ದುವು. ಅಲುಗುವ ಗಾಳಿಗೆ ಸಿಲು ಕಿದ ಬಾಳೆ ಎಲೆಗಳು ತನ್ನನ್ನು ಕೈ ಮಾಡಿ ಕರೆಯುವಂತೆ ಶಂಕರನಿಗೆ ತೋರಿದುವು: ಸುಳಿ ಬಾಳೆ ಗಿಡಗಳನ್ನು ಕಂಡೊಡನೆ ಆನೆಯ ಬಾಯಲ್ಲಿ ನೀರೂರಿತು. ಒಡಲೊಳಗಿನ ಹಸಿವೆಯ ಕಿಚ್ಚು ಭುಗಿಲು ಭುಗಿಲೆಂದಿತು. ಬಾಳೆ ತೋಟವನ್ನು ಬಿಟ್ಟು ಮುಂದೆ ಹೆಜ್ಜೆಗಳನ್ನಿರಿಸಲು ಅದಕ್ಕೆ ಮನಸ್ಸು ಬರಲಿಲ್ಲ.

ಶಂಕರ ತಾನು ಸೊಂಡಿಲಲ್ಲಿ ಹಿಡಿದಿದ್ದ ಮರವನ್ನು ಕೆಳಗಿಳಿಸಿದ. ತನ್ನ ಪುಟ್ಟ ಕಣ್ಣುಗಳನ್ನಗಲಿಸಿ ಇಪ್ಪತ್ತು ಮಾರುಗಳಾಚೆ ಇರುವ ಬಾಳೆಯ ತೋಟವನ್ನು ನಿಟ್ಟಿಸಿ ನೋಡಿದ. ಆನೆ ನಿಂತುದನ್ನು ಕಂಡು ಬೆನ್ನ ಮೇಲಿದ್ದ ರಾಮುಣಿ, “ ನಡೆ ಆನೆ ! ” ಎಂದು ಗಜರಿದ.

ಆದರೆ ಆನೆ ನಿಂತಲ್ಲಿಂದ ಕದಲಲಿಲ್ಲ. ಬಾಳೆಯ ತೋಟದಲ್ಲಿ ನಟ್ಟ ಕಣ್ಣುಗಳನ್ನು ಕೀಳಲಿಲ್ಲ. ರಾಮುಣ್ಣಿಗೆ ಸಿಟ್ಟು ಬಂತು. ಅವನು ಅಂಕುಶವನ್ನು ಆನೆಯಕಿವಿಗೆ ಸಿಕ್ಕಿಸಿ ಎಳೆಯುತ್ತಾ “ಇದೊಂದು ಸೈತಾನ್ ಆನೆ! ನಡುದಾರಿಯಲ್ಲಿ ನಿಂತು ನನ್ನ ಗೋಳು ಹುಯ್ಯುತ್ತಿದೆ ! ” ಎಂದು ಉದ್ಗಾರವೆತ್ತಿದ.

ಶಂಕರ ಆನೆಕಾರನ ಬೈಗಳನ್ನು ಕಿವಿಗೆ ಹಾಕಿಕೊಳ್ಳಲಿಲ್ಲ. ಅಂಕುಶದ ತಿವಿತವನ್ನು ಲೆಕ್ಕಿಸಲಿಲ್ಲ. ನಿಂತಲ್ಲಿಂದ ಕದಲಲಿಲ್ಲ. ರಾಮುಣ್ಣಿಗೆ ಆನೆ ತೊಲೆಯ ಮೇಲಿನ ಹಿಡಿತವನ್ನು ಬಿಟ್ಟಿದೆ ಎಂದು ತಿಳಿಯಿತು. ಅವನು ಮರದ ತೊಲೆಯನ್ನು ಮರಳಿ ಶಂಕರನಿಂದ ಹಿಡಿಸಲೋಸುಗ ಆನೆಯ ಬೆನ್ನ ಮೇಲಿಂದಿಳಿದ. ಅವನು ಆನೆಯ ಮುಂದೆ ನಿಂತು ತೊಲೆಯ ತೂತಿಗೆ ಬಿಗಿದ ಹಗ್ಗದ ತುದಿಯನ್ನೆತ್ತಿ ಶಂಕರನ ಸೊಂಡಿಲಿಗೆ ಕೊಟ್ಟ. ಅವನು, " ಶಂಕರ, ಹಿಡಿ ಹಗ್ಗವನ್ನು ! ನೀನು ಮೊಂಡು ಬಿದ್ದರೆ ನಿನ್ನ ಕಿವಿಯನ್ನು ಅಂಕುಶದಿಂದ ಸೀಳಿ ಹಾಕಿ ಬಿಟ್ಟೇನು ! ಈ ಮಕ್ಕಳಾಟ ಆ ಕುರುಬರ ಹುಡುಗನ ಮುಂದೆ ಚೆನ್ನು; ನನ್ನ ಮುಂದೆ ನಡೆಯಲಾರದು !" ಎಂದು ಆನೆಯನ್ನು ಗದರಿಸಿದ.

ಆನೆಯ ಮೇಲಿಂದಿಳಿಯುವಾಗ ರಾಮುಣ್ಣಿ ತನ್ನ ಕಿಸೆಯಲ್ಲಿದ್ದ ಶೀಸೆಯನ್ನು ಎತ್ತಿ ಅದರೊಳಗಿದ್ದ ಎರಡು ಡ್ರಾಮು ಕಳ್ಳನ್ನು ಗಂಟಲೊಳಗೆ ಸುರಿದುಕೊಂಡಿದ್ದ. ಈಗ ಅವನು ಬಾಯ್ದೆರೆದು ಗದರಿಸಿದಾಗ ಬಾಯೊಳಗಿನಿಂದ ಹೊರಟ ಕಳ್ಳಿನ ನಾತ ಶಂಕರನ ಸೊಂಡಿಲಿಗೆ ಬಡಿದಿತು; ಈ ಅಸಹ್ಯ ವಾಸನೆ ಹಸಿದ ಶಂಕರನ ಮುನಿಸನ್ನು ಕೆರಳಿಸಿತು. ಅದು ಸೊಂಡಿಲನ್ನು ಮೇಲೆತ್ತಿತು.

ರಾಮುಣ್ಣಿ ಹಗ್ಗವನ್ನು ಹಿಡಿಯಲು ಸೊಂಡಿಲು ಚಾಚಿತು ಎಂದು ಗ್ರಹಿಸಿ ಹಗ್ಗದ ತುದಿಯನ್ನು ಶಂಕರನ ಸೊಂಡಿಲಿಗೆ ಕೊಡಲು ಹೋದ. ಆದರೆ ಶಂಕರ ಹಗ್ಗದ ತುದಿಯನ್ನು ಹಿಡಿಯಲಿಲ್ಲ. ಅದರ ಬದಲು ಹಗ್ಗವನ್ನು ಹಿಡಿದ ಆನೆಕಾರನ ತೋಳಿಗೆ ಸೊಂಡಿಲನ್ನು ಸುತ್ತಿ ಮೇಲೆತ್ತಿತು. ರಾಮುಣ್ಣಿ ಆನೆಯ ಸೊಂಡಿಲ ತುದಿಯಲ್ಲಿ ತೂಗಾಡಿದ. ಆನೆ ತನ್ನನ್ನು ಏನು ಮಾಡುತ್ತಿದೆ ಎಂದು ಗ್ರಹಿಸುವ ಮುನ್ನ ಅವನು ಎಂಟಡಿ ಎತ್ತರದಲ್ಲಿ ನೇಲುತಿದ್ದ. ಅವನು ಆನೆ ತನ್ನನ್ನು ಕೊಲ್ಲುವುದೆಂದೇ ನಂಬಿದ. ಅವನ ಜೀವ ತಲ್ಲಣಿಸಿ ಹೋಯಿತು. ಅವನು ಉಚ್ಚ ಸ್ವರದಲ್ಲಿ " ಅಯ್ಯಯ್ಯೋ ! ಆನೆ ನನ್ನ ಕೊಲ್ಲುತ್ತಿದೆ ! ಬನ್ನಿ, ಬನ್ನಿ ¡ " ಎಂದು ಅರಚಿದ.

ತಮ್ಮ ಆನೆಗಳಿಂದ ತೊಲೆಗಳನ್ನು ಎಳಿಸಿಕೊಂಡು ಹೋಗತಿದ್ದ

ಕೋರ ಮತ್ತು ಮಮ್ಮೂಞಿಗಳಿಗೆ ರಾಮುಣ್ಣಿಯ ಆರ್ತನಾದ ಕೇಳಿಸಿತು. ಅವರು ರಾಮುಣ್ಣಿ ಏನೋ ಅನಾಹುತವನ್ನು ತಂದುಕೊಂಡ ಎಂದು ಆಲೋಚಿಸಿ, ತಮ್ಮ ತಮ್ಮ ಆನೆಗಳನ್ನು ಬಿಟ್ಟು ಓಡಿ ಬಂದರು. ಅವರು ರಾಮುಣ್ಣಿ ಆನೆ ಸೊಂಡಿಲಲ್ಲಿ ಸಿಕ್ಕಿ ನರಳುವುದನ್ನು ಕಂಡರು.

"ರಾಮುಣ್ಣಿಯ ಮೇಲೆ ಆನೆ ಸಿಟ್ಟಿಗೆದ್ದಿದೆ." ಕೋರ ಹೇಳಿದ: "ಅವನು ಆನೆಯ ಒಡಲಿಗೆ ಸರಿಯಾಗಿ ಉಣಿಸನ್ನು ಹಾಕಲಿಲ್ಲ; ಅದನ್ನು ಒಳ್ಳೆ ರೀತಿಯಿಂದ ನಡೆಸಿಕೊಳ್ಳಲೂ ಇಲ್ಲ. ಅದೆಲ್ಲಿ ರೊಚ್ಚಿಗೆದ್ದು ಆತನನ್ನು ಕೊಂದು ಬಿಡುವುದೋ!"

ಕೋರ ಕೈಯಲ್ಲಿ ಅಂಕುಶವನ್ನು ಹಿಡಿದು ಶಂಕರನನ್ನು ಸಮೀಪಿಸಿದ. ಅವನು ಮೆದು ದನಿಯಲ್ಲಿ, "ಶಂಕರ, ನೀನು ಅವನನ್ನು ಬಿಡು, ಆ ಕುನ್ನಿಯ ಮೇಲೇಕೆ ನಿನ್ನ ಸೇಡು!" ಎಂದು ಆನೆಗೆ ಹೇಳಿದ.

ಆನೆ ತನ್ನ ಮೊರದಗಲದ ಕಿವಿಗಳನ್ನೊಮ್ಮೆ ಅಲುಗಿಸಿತು. ಕೋರನ ಮೋರೆಯನ್ನೊಮ್ಮೆ ನಿಟ್ಟಿಸಿ ನೋಡಿತು. ತೊಟ್ಟಿಲನ್ನು ತೂಗುವಂತೆ ಸೊಂಡಿಲಲ್ಲಿದ್ದ ರಾಮುಣ್ಣಿಯನ್ನೊಮ್ಮೆ ಅಲುಗಾಡಿಸಿತು. ಇನ್ನೊಂದು ಕ್ಷಣದಲ್ಲಿ ಆನೆ ತನ್ನನ್ನು ಕೊಲ್ಲುವುವೆಂದು ಭೀತಿಯಿಂದ ಅವನು ಕಣ್ಣುಗಳನ್ನು ಮುಚ್ಚಿಕೊಂಡ.

"ಶಂಕರನ ಮುನಿಸು ಆರುವ ಹಾಗಿಲ್ಲ!" ನಿಸ್ಸಹಾಯಕತೆ ತುಂಬಿದ ದನಿಯಲ್ಲಿ ಕೋರ ಮಮ್ಮೂಞಿಗೆ ಉಸುರಿದ.

ಕೋರ ಸ್ವಲ್ಪ ಧೈರ್ಯತಾಳಿ ಸೊಂಡಿಲಲ್ಲಿದ್ದ ರಾಮುಣ್ಣಿಯನ್ನು ಬಿಡಿಸಲೆಂದು ಒಂದು ಹೆಜ್ಜೆ ಮುಂದಿರಿಸಿದ. ತೂಗುತಿದ್ದ ರಾಮುಣ್ಣಿಯ ಒಂದು ಕಾಲು ಅವನ ಕೈಗೆ ಸಿಕ್ಕಿತು. ಆದರೆ ಶಂಕರ ಸುಮ್ಮನಿರಲಿಲ್ಲ. ಸೊಂಡಿಲನ್ನು ಇನ್ನಷ್ಟು ಮೇಲೆತ್ತಿ ಅಡಿಯನ್ನು ಮುಂದರಿಸಿದ. ಕೋರನ ಹಿಡಿತದಿಂದ ರಾಮುಣ್ಣಿಯ ಕಾಲು ತಪ್ಪಿ ಹೋಯಿತು.

ರಾಮುಣ್ಣಿಯ ಕತೆ ಕೊನೆಗೊಂಡಿತೆಂದೇ ಕೋರ ಮಮ್ಮೂಞಿಯರು ಆಲೋಚಿಸಿದರು. ಅವರು ಎವೆ ಮಿಚುಕಿಸದೆ ಆನೆಯನ್ನೇ ನಿಟ್ಟಿಸಿ ನೋಡತೊಡಗಿದರು. ಆನೆ ಮೆಲ್ಲನೆ ಸೊಂಡಿಲನ್ನು ಕೆಳಗಿಳಿಸಿತು. ರಾಮುಣ್ಣಿಯ ತೋಳನ್ನು ಬಳಸಿದ ಸೊಂಡಿಲನ್ನು ಬಿಚ್ಚಿತು. ರಾಮು

ಣ್ಣೆಯನ್ನು ನೆಲದ ಮೇಲೆ ಇಳಿಸಿದ ಮೇಲೆ ತಿರಸ್ಕಾರ ತುಂಬಿದ ಕಣ್ಣು ಗಳಿಂದ ಆತನನ್ನೊಮ್ಮೆ ನಿಟ್ಟಿಸಿ ನೋಡಿತು. ಆ ಕಣ್ಣುಗಳು, "ನಿನ್ನಂತಹ ಹೇಡಿಯನ್ನು ಕೊಂದು ನನ್ನ ಸೊಂಡಿಲನ್ನು ಹೊಲೆಗೆಡಿಸಲಾರೆ!" ಎಂದು ಹೇಳಿದುವು.

ಶಂಕರ ಅಲ್ಲಿ ನಿಲ್ಲದೆ ನೇರಾಗಿ ಹೋಗಿ ಮುಳ್ಳುವ ಕುರುಬರ ಬಾಳೆಯ ತೋಟದ ಬೇಲಿಯನ್ನು ಮುರಿದು ಒಳಗೆ ನುಗ್ಗಿದ. ಅಲ್ಲಿದ್ದ ಬಾಳೆ ಗಿಡಗಳನ್ನು ಕೆಡುಹಿ ಮೆಲ್ಲ ತೊಡಗಿದ.

ಮುಳ್ಳುವ ಕುರುಬರು ಪುರೆಗಳಿರಲಿಲ್ಲ. ಹಂದಿ ಬೇಟೆಗೆಂದು ಅಡವಿಗೆ ಹೋದವರು ಇನ್ನೂ ಗುಡಿಸಿಲುಗಳಿಗೆ ಮರಳಿ ಬಂದಿರಲಿಲ್ಲ. ಮುಳ್ಳುವ ಕುರುಬ ಹೆಣ್ಣುಗಳು ಆನೆ ಬಾಳೆಯ ತೋಟದೊಳಗೆ ನುಗ್ಗಿ ಗಿಡಗಳನ್ನು ಎಳೆದು ಬೀಳಿಸುವ ಸಪ್ಪಳನ್ನು ಕೇಳಿ ಪುರೆಗಳೊಳಗಿಂದ ಹೊರ ಬಂದರು. ಅವರು ಬಾಳೆ ಗಿಡಗಳನ್ನು ಸಂಹಾರ ಮಾಡುತ್ತಿರುವ ಶಂಕರನನ್ನು ಕಂಡು, "ಆನೆ, ಆನೆ!" ಎಂದು ದೊಡ್ಡ ದನಿಯಲ್ಲಿ ಕೂಗಿದರು.

ಕೋರ ಶಂಕರನನ್ನು ಹೊರತರಲೆಂದು ಕೈಯಲ್ಲಿ ಅಂಕುಶವನ್ನು ಹಿಡಿದುಕೊಂಡು ತೋಟದೊಳಗೆ ನುಗ್ಗಿದ. ಶಂಕರ ಅವನನ್ನು ಕಂಡು ಸೊಂಡಿಲನ್ನೆತ್ತಿ ದೊಡ್ಡ ದನಿಯಲ್ಲಿ ಘೀಳಿಟ್ಟ. ಆನೆಯ ದನಿ ಮತ್ತು ಕಣ್ಣುಗಳ ಕ್ರೂರ ನೋಟ ಅವನ ಮುನಿಸು ಇನ್ನೂ ಆರಲಿಲ್ಲವೆಂದು ಕೋರನಿಗೆ ಅರುಹಿದುವು. ಆನೆ ಬಾಳೆ ಗಿಡಗಳನ್ನು ಧ್ವಂಸಮಾಡಿ ಒಡಲನ್ನು ತುಂಬಿಸುವತನಕ ಅದರ ಮುನಿಸು ಆರದು; ಅದನ್ನು ತೋಟದಿಂದ ಮರಳಿಸಬೇಕಾದರೆ ನಾಯಕನೊಬ್ಬನಿಂದಲೇ ಸಾಧ್ಯ ಎಂದು ಅವನು ಗ್ರಹಿಸಿದ. ಅವನು ಶಂಕರನನ್ನು ತೋಟದೊಳಗಿಂದ ಮರಳಿಸುವ ಸಾಹಸಕ್ಕೆ ಕೈ ಹಾಕದೆ ಹಿಮ್ಮೆಟ್ಟಿದ.

# ೧೨

ನಡು ಇರುಳ ಹೊತ್ತು ಕೇಳುಕುಟ್ಟಿ ನಾಯರರು ತಮ್ಮ ಸಜ್ಜೆ ಮನೆಯಲ್ಲಿ ಮಲಗಿ ನಿದ್ರಿಸುತಿದ್ದರು. ಪಕ್ಕದ ಮಂಚದಲ್ಲಿ ಅವರ ಮಡದಿ ಕಂಬಳಿ ಹೊದೆದು ಮಲಗಿ ಗೊರಕೆ ಹೊಡೆಯುತಿದ್ದರು. ಬತ್ತಿಯನ್ನು ಕಿರಿವಾಗಿಸಿದ ಲಾಂದ್ರ ಕೋಣೆಯೊಳಗೆ ಮಬ್ಬು ಬೆಳಕನ್ನು ಹರಡುತಿದ್ದಿತು. ಕಿಟಕಿಯ ಸಂದಿನಿಂದ ನುಸುಳಿ ಬಂದ ಗಾಳಿ ಲಾಂದ್ರದ ಸೊಡರನ್ನು ಮಿಣಮಿಣನೆ ಕುಣಿಸುತಿದ್ದಿತು. ಮನೆಯಾಗ ನಿದ್ದೆಯ ಕಡಲಲ್ಲಿ ತೇಲುವ ಒಂದು ಡೋಣಿಯಾಗಿತು.

ಗಾಳಿಯಲ್ಲಿ ಹರಿದು ಬಂದ ಒಂದು ದೊಡ್ಡದನಿ ಪಡುಕೋಣೆಯಲ್ಲಿ ತುಂಬಿದ್ದ ಮೌನವನ್ನು ಸೀಳಿತು. ಅದು ಅಲೆ ಅಲೆಯಾಗಿ ಹರಿದು ಬಂದು ಕೋಣೆಯೊಳಗೆ ತುಂಬಿಕೊಂಡಿತು.

ಕೇಳುಕುಟ್ಟಿ ನಾಯರರ ನಿದ್ರೆ ಯಾವಾಗಲೂ ಸೂಕ್ಷ್ಮವಾದುದು. ಈ ದೊಡ್ಡ ಸದ್ದು ಅವರ ಕಿವಿಗಳಿಗೆ ಬಡಿದುದೇ ತಡ ಎಚ್ಚರವಾಯಿತು. ಅವರು ಮೈಮುರಿದು ಆಕಳಿಸಿದರು. ಆ ಧ್ವನಿ ಇನ್ನೊಮ್ಮೆ ಹರಿದು ಬಂದು ಕೋಣೆಯಲ್ಲಿ ತುಲಬಿ ಕೊಂಡಿತು. ಇದಾವ ಧ್ವನಿ ಎಂದು ಅವರು ಆಲೋಚಿಸಿದರು. ಕೂಗು ಇನ್ನೊಮ್ಮೆ ಗಾಳಿಯನ್ನು ಸೀಳಿಕೊಂಡು ಬಂತು. ಅದು ಗಜಬೃಂಹಿತವೆಂದು ಅವರಿಗೆ ಅರಿವಾಯಿತು. ಅರಿವಿನೊಡನೆ ಆಶ್ಚರ್ಯವೂ ಅವರಲ್ಲಿ ತಲೆದೋರಿತು. “ ಈ ನಡು ರಾತ್ರಿ ಆನೆ ಎಲ್ಲಿಂದ ಬಂತು. ಶಂಕರನನ್ನು ಮರ ಎಳೆಯಲೆಂದು ಕುಪ್ಪತ್ತೋಡಿಗೆ ಕಳುಹಿಸಿ ಕೊಟ್ಟಿದ್ದೇನೆ. ನಾಯಕ ಇರುಳು ಆನೆಯನ್ನು ಅಟ್ಟಿಕೊಂಡು ಬರಲಾರ. ಇದು ಯಾವ ಆನೆ? ಕಾಡಾನೆ ಏನಾದರೂ ಈ ಕಡೆ ಸುಳಿಯಿತೇ ? ” ಎಂದು ಆಲೋಚನೆಯ ಅಲೆ ಅವರ ಚಿತ್ತದಲ್ಲಿ ಎದ್ದಿತು.

ಅವರು ಕೈಯಲ್ಲಿ ಲಾಂದ್ರವನ್ನು ಎತ್ತಿಕೊಂಡು ಬತ್ತಿಯನ್ನು ದೊಡ್ಡದು ಮಾಡಿದರು. ಕೋಣೆಯ ಕದವನ್ನು ತೆರೆದು ಹೊರತೆರಳಿದರು. ಚಂದ್ರ ಅಂಗಳದ ಮೇಲೆ ಬೆಳದಿಂಗಳ ಮಳೆಯನ್ನು ಎರೆಯುತಿದ್ದ. ಆನೆ ಬೆಳದಿಂಗಳ ಅಭಿಷೇಕವನ್ನು ಹೊಂದುತ್ತಾ ಅಂಗಳದಲ್ಲಿ ನಿಂತಿತ್ತು. ಅದರ ಕಪ್ಪು ಮೋರೆಯಿಂದ ಬಿಳಿಯ ಉದ ನ್ನ ದಂತಗಳು ಎದು ತೋರು

ತಿದ್ದುವು. ಆ ಆನೆ ಶಂಕರನೆಂದು ಪಾಪನಿಗೆ ಅರಿವಾಯಿತು. ಆನೆಯನ್ನು ನಾಯಕನೇ ಅಟ್ಟಿಕೊಂಡು ಬಂದಿದ್ದಾನೆ; ತನ್ನ ಗಂಟು ಮೂಟೆಗಳನ್ನು ಇಡಲು ಪತ್ತಾಯಪುರೆಗೆ ಹೋಗಿರಬಹುದು ಎಂದು ಅವರು ಆಲೋಚಿಸಿದರು. ಅವರು "ನಾಯಕ, ನಾಯಕ!" ಎಂದು ಆನೆಕಾರನನ್ನು ದೊಡ್ಡ ದನಿಯಲ್ಲಿ ಕೂಗಿದರು.

ಆದರೆ ನಾಯಕನಿಂದ ಪಡಿನುಡಿ ಬರಲಿಲ್ಲ. ನೀರವತೆಯೇ ಅವರಿಗೆ ದೊರೆತ ಉತ್ತರವಾಯಿತು. ಅವರು ಲಾಂದ್ರವನ್ನು ಹಿಡಿದುಕೊಂಡು ಪತ್ತಾಯಪುರೆಗೆ ಹೋದರು. ಪುರೆಯ ಕದಗಳು ಹಚ್ಚಿದ್ದುವು. ಜಗಲಿಯ ಮೇಲೆ ನಾಯಕನ ಸರಕು-ಸರಂಜಾಮುಗಳ ಗಂಟು ಇರಲಿಲ್ಲ. ಮರಳಿ ಅವರು ನಾಯಕನನ್ನು ಹೆಸರೆತ್ತಿ ಕೂಗಿದರು. ಆದರೆ ಉತ್ತರ ಬರಲಿಲ್ಲ. ನಾಯಕನು ಬರಲಿಲ್ಲ: ಆನೆಯೊಂದೇ ಬಂದಿದೆ ಎಂಬುದು ಅವರಿಗೆ ಖಚಿತವಾಯಿತು.

ಆನೆಯೊಂದೇ ಬಂದುದೇಕೆ; ನಾಯಕನೇಕೆ ಬರಲಿಲ್ಲ ಎಂದು ಪಾಪನ ಬುದ್ಧಿ ತರ್ಕಿಸಿತು. ಇರುಳು ಆನೆ ಮದವೆದ್ದು ಕಾಲ ಸಂಕಲೆಯನ್ನು ತುಂಡರಿಸಿ ಹಾಕಿ ಬಂದಿತೇ ಎಂದು ಅವರು ಶಂಕಿಸಿದರು. ಮದವೆದ್ದ ಆನೆ ಆನೆಕಾರನಿಗೆ ಕೇಡು ಮಾಡಿರಲೂ ಸಾಕು ಎಂಬ ಸಂಶಯ ಅವರಲ್ಲಿ ತಲೆದೋರದೆ ಇರಲಿಲ್ಲ. ಈ ಆಲೋಚನೆ ಮನಸ್ಸಿನಲ್ಲಿ ಸುಳಿಯಲು ಅವರು ತಲ್ಲಣ್ಣಗೊಂಡು ನಡುಗಿದರು. ಅವರು ಆನೆಯನ್ನೊಮ್ಮೆ ನಿಟ್ಟಿಸಿ ನೋಡಿದರು. ಅದು ನಿಂತಲ್ಲಿಂದ ಕದಲಿರಲಿಲ್ಲ. ತನ್ನ ಪುಟ್ಟ ಕಣ್ಣುಗಳಿಂದ ಅವರನ್ನೇ ನೋಡುತಿದ್ದಿತು. ಅವರು ಮನೆಯ ಜಗಲಿಯ ಮೇಲೆ ನಿಂತು "ಶಂಕರಾ" ಎಂದು ಕೂಗಿದರು.

ಶಂಕರ ಹೆಜ್ಜೆಗಳನ್ನಿರಿಸುತ್ತಾ ಬಂದು ನಾಯರರ ಮುಂದೆ ನಿಂತಿತು. ಅದು ಸೊಂಡಿಲಿನಿಂದ ಪಾಪನ ಪಾದಗಳನ್ನು ಸೋಂಕಿತು. ಅವರು ಆನೆಯ ಕಣ್ಣುಗಳಿಂದ ಹನಿಗಳು ತೊಟಕುವುದನ್ನು ನೋಡಿದರು. ಮದವೇರಿದ ಆನೆಯ ಹಾಗೆ ಶಂಕರ ತೋರಲಿಲ್ಲ. ಅದು ಒಡೆಯನ ಮುಂದೆ ತನ್ನ ದೂರನ್ನು ಹೇಳಿಕೊಳ್ಳುವಂತೆ ತೋರಿತು. ಪಾಪ ಆನೆಯ ಹಿಂಗಾಲನ್ನು ನೋಡಿದರು. ತೊಡಿಸಿದ ಸಂಕಲೆ ಕಾಲಿನಲ್ಲಿಯೇ ಇತ್ತು. ಅವರು

"ಶಂಕರ, ನಾಯಕನೆಲ್ಲಿ? ನೀನೊಬ್ಬನೇ ಏಕೆ ಬಂದೆ?" ಎಂದು ಕೇಳಿದರು.

ಶಂಕರನಿಗೇನಾದರೂ ಮಾತು ಬರುತಿದ್ದರೆ, ನಾಯಕ ಜ್ವರದಿಂದ ಕಟ್ಟಿಲು ಹಿಡಿದುದನ್ನೂ, ತಾನು ರಾಮುಣ್ಣಿಯಿಂದ ಬವಣೆಗೊಂಡುದನ್ನೂ ವಿವರಿಸಿ ಹೇಳುತಿದ್ದ. ಆನೆ ಮ್ಲಾನಭಾವದಿಂದ ದೊಡ್ಡ ಕಿವಿಗಳನ್ನು ಅಲುಗಾಡಿಸಿತು. ಅದರ ಮೂಕ ಸಂಕೇತವೇ ಎದೆಯಳಲನ್ನು ಅರುಹಲಿರುವ ನುಡಿಯಾಯಿತು. ಆನೆಗೆ ಮದ ಹಿಡಿಯಲಿಲ್ಲ ಎಂದು ಈಗ ಪಾಪನಿಗೆ ಧೈರ್ಯವಾಯಿತು. ಅವರು, "ಶಂಕರ, ನೀನು ಬಲು ತುಂಟ; ನೀನು ನಾಯಕನನ್ನೇಕೆ ಬಿಟ್ಟು ಬಂದೆ?" ಎಂದು ಕೇಳಿದರು.

ಇರುಳು ಆನೆಯನ್ನು ಹಾಗೆಯೇ ಬಿಟ್ಟರೆ ಅದು ಬಾಳೆಯ ತೋಟದೊಳಗೆ ನುಗ್ಗಿ ನೆಲಸಮ ಮಾಡೀತು; ಅದನ್ನು ಕಟ್ಟಿ ಬಿಗಿಯಬೇಕು ಎಂದು ನಾಯರರು ಆಲೋಚಿಸಿದರು. ಅವರು ಮನೆಯೊಳಗೆ ಹೋಗಿ ಎರಡು ಚಿಪ್ಪು ಬಾಳೆಹಣ್ಣುಗಳನ್ನು ತಂದರು. ಅವರು ಕೈಯಲ್ಲಿ ಹಿಡಿದ ಬಾಳೆಯ ಹಣ್ಣುಗಳನ್ನು ಶಂಕರನಿಗೆ ತೋರಿಸಿದರು. ಹಣ್ಣುಗಳನ್ನು ಕಾಣಲು ಆನೆಯ ಬಾಯಲ್ಲಿ ನೀರೂರಿತು. ಅದು ಬಾಯನ್ನು ತೆರೆದು ಸೊಂಡಿಲನ್ನೆತ್ತಿ ಅವರ ಕಡೆ ಹೆಜ್ಜೆ ಇರಿಸಿತು. ಅವರು ಹಣ್ಣುಗಳನ್ನು ಹಿಡಿದ ತೋಳನ್ನು ಚಾಚಿ ಮೆಲ್ಲನೆ ಸರಿದರು. ಶಂಕರ ಅವರನ್ನು ಹಿಂಬಾಲಿಸಿದ. ಅವರು ಹಲಸಿನ ಮರವಿದ್ದೆಡೆಗೆ ಬಂದು ತಲುಪಿದರು. ಕೈಯಲ್ಲಿ ಹಿಡಿದ ಹಣ್ಣುಗಳನ್ನು ಶಂಕರನ ಬಾಯೊಳಗೆ ತುರುಕಿದರು. ಆನೆ ಹಣ್ಣುಗಳನ್ನು ಮೆಲ್ಲುತ್ತಾ ನಿಂತುಕೊಂಡಿತು. ನಾಯರರು ಕಾಲ ಸಂಕಲಿಯನ್ನು ಹಿಡಿದು ಹಲಸಿನ ಮರಕ್ಕೆ ಬಿಗಿದರು.

ಪಾಪನಿಗೆ ಆ ಇರುಳು ನಿದ್ದೆಯೇ ಬರಲಿಲ್ಲ. ಆನೆ ಏಕೆ ರಾತ್ರಿ ಓಡಿ ಬಂತು; ನಾಯಕನೇಕೆ ಮರಳಿ ಬರಲಿಲ್ಲ ಎಂದು ಅವರು ಆಲೋಚಿಸುತ್ತಾ ಹಾಸಿಗೆಯ ಮೇಲೆ ಹೊರಳಿದರು. ಅವರು ನಾಯಕ ತನ್ನ ಜಾತಿಯ ಸ್ವಭಾವದಂತೆ, ಚಂದದ ಕುರುಬಿತಿಯನ್ನು ಕಂಡು ಆಕೆಯ ಬೆನ್ನ ಹಿಂದೆ ಓಡಿ ಹೋಗಿರಬಹುದೇ ಎಂದು ಸಂದೇಹ ತಾಳದೆ ಇರಲಿಲ್ಲ.

ಬೆಳಕು ಹರಿದೊಡನೆ ಅವರು ಕಾರ್ಯಕಾರನನ್ನು ಕರೆದು ಶಂಕರ

ನಿಗೆ ಮೇವು ಮತ್ತು ಆಹಾರಗಳ ವ್ಯವಸ್ಥೆ ಮಾಡಲು ಒಬ್ಬ ಆಳನ್ನು ಬಿಡಲು ಹೇಳಿದರು. ತಾವು ಬೆಳಗಿನ ಉಪಹಾರವನ್ನು ಮುಗಿಸಿದೊಡನೆ ಕುಪ್ಪತ್ತೋಡಿಗೆ ಹೋಗಿ ನಾಯಕನ ಸಮಾಚಾರವನ್ನು ಅರಿತು ಬರುವೆನೆಂದು ಮನೆಯವರಿಗೆ ತಿಳಿಸಿ, ಹೊರಟುಹೋದರು.

ಇರುಳು ಆನೆಯೊಂದೇ ಮರಳಿ ಬಂದುದು ಮನೆಯವರಿಗೆಲ್ಲಾ ಆಶ್ಚರ್ಯವನ್ನುಂಟು ಮಾಡಿತು. ನಾಯಕನೇನಾದ ಎಂದು ಮನೆಯವರೆಲ್ಲ ಒಂದೊಂದು ಬಗೆಯಲ್ಲಿ ಊಹೆಗಳ ಹಗ್ಗವನ್ನು ಹೊಸೆದರು. ಯಜಮಾನಿ, "ಅವನೆಷ್ಟಾದರೂ ಕುರುಬ ಹುಡುಗ; ನಾಯಿಯನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿದರೆ ಅದು ಸುಮ್ಮನಿರುವುದೇ ? ಯಾವಳೋ ಒಬ್ಬ ಕುರುಬಿತಿಯನ್ನು ಕಂಡು ಅವಳ ಬೆನ್ನ ಹಿಂದೆ ಓಡಿರಬೇಕು. ನಾಯಿಯ ಬಾಲವನ್ನು ಎಷ್ಟು ಸಮಯ ನಳಿಗೆಯಲ್ಲಿಟ್ಟರೂ, ಅದು ಡೊಂಕೇ ಸರಿ !" ಎಂದು ಉದ್ಗಾರವೆತ್ತಿದರು.

ಅತ್ತೆಯ ಮಾತು ಕೇಳಿ ಲಕ್ಷ್ಮಿಯ ಮನಸ್ಸು ಆದೇಕೋ ನೊಂದುಕೊಂಡಿತು. ಆಕೆಗೆ ನಾಲ್ಕೆಂಟು ವರ್ಷಗಳಿಂದ ನಾಯಕನ ಪರಿಚಯವಿತ್ತು. ನಾಯಕ ಮಾವನ ಮನೆಯಲ್ಲಿ ತಾನು ಕೆಲಸದ ಆಳು ಎಂಬಂತೆ ನಡೆದುಕೊಂಡಿರಲಿಲ್ಲ. ಆತ ತಾನು ಮನೆಯವರ ಪೈಕಿ ಒಬ್ಬನೆಂಬಂತೆ ವರ್ತಿಸುತಿದ್ದ ! ಮಾವ, "ನೀನು ಕುಪ್ಪತ್ತೋಡಿಗೆ ಹೋಗಿ ಒಂದು ತಿಂಗಳು ಕೆಲಸ ಮಾಡಬೇಕು" ಎಂದು ಹೇಳಿದಾಗ ಅವನ ಮೋರೆ ಎಷ್ಟೊಂದು ಬಾಡಿತ್ತು ! ತನ್ನೊಡನೆ ಹೇಳಿ ಹೋಗುವಾಗ ಆತನ ಕಣ್ಣುಗಳಲ್ಲಿ ಹನಿಗಳು ನೆರೆದಿದ್ದುವು. ಇಂತಹವನು ಪರಿಚಯವಿಲ್ಲದ ಕುರುಬಿತಿಯ ಬೆನ್ನ ಹಿಂದೆ ಹೇಳದೆ ಕೇಳದೆ ಓಡಿ ಹೋಗಬಹುದೇ ಎಂದು ಅವಳು ಚಿಂತಿಸಿದಳು. ಸಂಜೆಯೊಳಗೆ ಮಾವ ಮರಳಿ ಬಂದೇ ಬರುವರು; ಆಗ ನಾಯಕನು ಏನಾದನೆಂದು ತಿಳಿದೇ ತಿಳಿಯುವುದು ಎಂದು ಸಮಾಧಾನ ತಾಳಿದಳು.

ಆದರೂ ಲಕ್ಷ್ಮಿಯ ಮನಸ್ಸು ಚಿಂತೆಯಿಂದ ದೂರವಿರಲಿಲ್ಲ. ಅವಳು ಜಗಲಿಗೆ ಬಂದಾಗ ಅಂಗಳದ ತುದಿಯ ಹಲಸಿನ ಮರಕ್ಕೆ ಬಿಗಿದ ಶಂಕರನನ್ನು ಕಂಡಳು. ಆಳು ಕಡಿದು ತಂದು ಹಾಕಿದ ಬಾಳೆಯ ದಿಂಡು

ಗಳನ್ನು ಆನೆ ಸಾವಕಾಶವಾಗಿ ಮೆಲ್ಲುತ್ತಿತ್ತು. ಕಿವಿಗಳ ಮೇಲೆ ಕುಳಿ ನೊಣಗಳನ್ನು ಓಡಿಸಲು ಕಿವಿಗಳನ್ನು ಬಡಿದು ಕೊಳ್ಳುತ್ತಿತ್ತು. ಅವಳ ಆನೆ ಇದ್ದಲ್ಲಿಗೆ ಹೋದಳು. ಅವಳು ಆನೆಯಿಂದ ನಸುಮಾರದಲ್ಲಿ ನಿಂತು, " ಶಂಕರ, ನೀನು ನಾಯಕನನ್ನೇಕೆ ಬಿಟ್ಟುಬಂದೆ? " ಎಂದು ಮಾತಾಡಿಸಿದಳು.

ಶಂಕರ ಬಾಳೆದಿಂಡುಗಳನ್ನು ಮೆಲ್ಲುವುದನ್ನು ನಿಲ್ಲಿಸಿದ. ಅವನು ಕಣ್ಣರಳಿಸಿ ಲಕ್ಷ್ಮಿಯನ್ನೇ ನೋಡಿದ. ಸೊಂಡಿಲೆತ್ತಿ ಮೆಲ್ಲನೆ ಲಕ್ಷ್ಮಿಯ ನೆತ್ತಿಯನ್ನು ಸವರಿದ.

" ಶಂಕರ, ನಾಯಕನೆಲ್ಲಿದ್ದಾನೆ? "

ಕಿವಿಗಳ ಅಲುಗಾಟವೇ ಲಕ್ಷ್ಮಿಗೆ ದೊರೆತ ಉತ್ತರವಾಯಿತು.

" ಪಾಪ, ನಿನ್ನ ಕೇಳಿ ಏನು ಪ್ರಯೋಜನ? ನಿನಗೆ ಬಾಯಿ ಬರುತಿದ್ದರೆ ಖಂಡಿತ ಉತ್ತರ ಹೇಳುತಿದ್ದೆ. "

" ಶಂಕರ ಹೇಳಿದಿದ್ದರೂ ನಾನು ಹೇಳಬಲ್ಲೆ! " ಎಂಬ ಉಲಿತ ಹರಿದು ಬಂದು ಲಕ್ಷ್ಮಿಯ ಕಿವಿಗಳಲ್ಲಿ ಬಿದ್ದಿತು. ತಾನು ಆನೆಯನ್ನು ಮಾತಾಡಿಸಿದುದನ್ನು ಬೇರೆ ಯಾರೋ ಕೇಳಿದರೆಂದು ಅವಳು ಗಾಬರಿಗೊಂಡಳು. ಭೀತಿಯಿಂದ ಅವಳ ಕೆನ್ನೆಗಳು ಕೆಂಪೇರಿದುವು. ಅವಳು ಸುತ್ತಲೂ ದೃಷ್ಟಿ ಹೊರಳಿಸಿದಳು.

ಚಿರುತೆ ಕೈಯಲ್ಲೊಂದು ಕಿತ್ತಳೆಹಣ್ಣು ಹಿಡಿದು ಕೊಂಡು ಮಡಿಲಿಲ್ಲ ಮೂರು ನಾಲ್ಕು ಕಿತ್ತಳೆ ಹಣ್ಣುಗಳನ್ನು ತುಂಬಿಸಿಕೊಂಡು ಆನೆಯಿದ್ದೆಡೆಗೆ ಬರುತಿದ್ದಳು. ಅವಳೇ ಈ ಮಾತುಗಳನ್ನಾಡಿದ್ದಳು.

" ಚಿರುತೆ, ನೀನೇನು ಹೇಳೋದು? " ಲಕ್ಷ್ಮಿ ಕಣ್ಣಗಲಿಸಿ ಕೇಳಿದಳು.

" ಅದೇ, ನಾಯಕನ ಸಂಗತೀನ. ನೀನು ಅವನನ್ನು ನೆನೆದು ಬೇಸರಪಡುತಿದ್ದೀಯಲ್ಲ! " ಚಿರುತೆ ಕೈಯಲ್ಲಿ ಹಿಡಿದ ಕಿತ್ತಳೆ ಹಣ್ಣನ್ನು ಸುಲಿಯುತ್ತಾ ಉಸುರಿದಳು : " ಅಕ್ಕ, ಭಾವ ಊರುಬಿಟ್ಟು ಹೋಗಿ ಆರು ತಿಂಗಳಾಯಿತು; ನೀನು ಆತನನ್ನ ಜ್ಞಾನಿಸುವುದಿಲ್ಲ! "

" ಚಿರುತೆ, ಬಾಯಿ ಮುಚ್ಚೇ! " ಲಕ್ಷ್ಮಿ ತಂಗಿಯ ಮೇಲೆ

ರೇಗಿದಳು.

"ನೋಡು ಅಕ್ಕ, ನಾನು ನಾಯಕನ್ನ ಬಿಟ್ಟು ಕೊಡಲಾರೆ!" ಚಿರುತೆ ಉಲಿದಳು: "ತಿರುನೆಲ್ಲಿಯ ಪೆರುಮಾಳುವಿನ ಹಾಗಿರುವ, ಕಾಡಿನಿಂದ ಜೇನು ಎರಿಗಳನ್ನು ಕಿತ್ತು ತಂದುಕೊಡುವ ಕುರುಬ ಹುಡುಗನನ್ನ ನಾನು ಬಿಟ್ಟು ಕೊಡಲಾರೆ!"

"ನಿನ್ನ ಈ ಮಾತನ್ನ ಅತ್ತೆ ಕೇಳಲಿ. ಬೆತ್ತದ ಪೂಜೆ ಮಾಡುತ್ತಾರೆ!"

"ಅಕ್ಕ, ನೀನು ಮನಸ್ಸಿನಲ್ಲಿಯೇ ನಾಯಕನನ್ನು ನೆನೆಯುತಿದ್ದಿ." ಚಿರುತೆ ಕಿತ್ತಳೆಯ ತೊಳೆಯನ್ನು ಬಾಯೊಳಗೆ ಹಾಕಿಕೊಳ್ಳುತ್ತ ಅಂದಳು: "ನೋಡು, ನಿನ್ನ ಮೋರೆ ಬಾಡಿದೆ; ಕಣ್ಣು ಕೆಂಪಾಗಿದೆ. ನೀನು ಮನೆಗೆಲಸವನ್ನೆಲ್ಲಾ ಬಿಟ್ಟು ಬಾಯಿ ಬರದ ಆನೆಯನ್ನು ಮಾತಾಡಿಸುತ್ತಾ ಕುಳಿತಿರುವೆಯಲ್ಲ!"

"ಆನೆ ಹೇಗಿದೇಂತ ನೋಡಲು ಬಂದೆ. ನಾಯಕ ಯಾವ ಕುರುಬತಿಯ ಜತೆಯಲ್ಲಾದರೂ ಓಡಿಹೋಗಲಿ! ನನಗೇನು?" ಲಕ್ಷ್ಮಿಯ ಕೊರಳಿಂದ ಕನಲಿನ ಧ್ವನಿ ಹೊರಸೂಸಿತು: "ನೀನು ಬೇಕಾದರೆ ನಾಯಕನಿಗೋಸ್ಕರ ಅತ್ತು ಕಣ್ಣೀರು ಹಾಕು!"

"ಅಕ್ಕ, ನೀನು ರೇಗ ಬೇಡ." ಚಿರುತೆ ಅಕ್ಕನನ್ನು ಸಂತೈಸುವ ಧ್ವನಿಯನ್ನೆತ್ತಿದಳು: "ನನ್ನ ಉಪಾಯ ಕೇಳು. ಆಗ ನಮ್ಮಿಬ್ಬರ ಜಗಳವೂ ತಪ್ಪುವುದು. ಅತ್ತೆಯ ಎಡೆಗೆ ದೂರು ಒಯ್ಯಬೇಕಾದುದಿಲ್ಲ."

"ಏನೇ ಅದು ನಿನ್ನ ಉಪಾಯ?"

"ನೋಡು, ನಾಯಕನ ಮೋರೆಯನ್ನು ಕಾಣದಿದ್ದರೆ ನಿನಗೂ ಬೇಸರ."

"ಸುಮ್ಮನಿರೇ; ಅಬದ್ಧ ಬೊಗುಳಬೇಡ."

"ನೋಡು, ಒಂದು ತಿಂಗಳ ಹಿಂದೆ ನೀನು ಕಾಡಿನಲ್ಲಿ ಓಡಾಡುವ ಚಿಗುರೆ ಮರಿಯ ಹಾಗೆ ಇದ್ದೆ. ಈಗ ನಿನ್ನಲ್ಲಿ ಏನೂ ಲವಲವಿಕೆ ಇಲ್ಲ."

"ಕಾರಣವನ್ನೂ ನೀನೇ ಹೇಳಿಬಿಡು."

"ಅಕ್ಕ, ನನ್ನಲ್ಲಿ ಮುಚ್ಚು ಮರೆ ಏನಿಲ್ಲ. ನಾಯಕನ ಮೋರೆ

ಯನ್ನು ಒಂದು ತಿಂಗಳಿಂದ ಕಾಣದಿದ್ದುದರಿಂದಲೇ ನಿನಗೆ ಬೇಸರ ಬಂದಿದೆ. ನನಗಂತೂ ತುಂಬಾ ಬೇಸರವಾಗಿದೆ. ಆತ ಜೇನು ಎರಿಗಳನ್ನು ತಂದುಕೊಡುತಿದ್ದ; ಪೇರಳೆ ಹಣ್ಣುಗಳನ್ನು ತರುತಿದ್ದ; ಆನೆಯ ಮೇಲೆ ಕುಳ್ಳಿರಿಸಿ ಸವಾರಿ ಮಾಡಿಸುತಿದ್ದ."

"ಸರಿ. ನೀನೇ ಅವನನ್ನು ಮದುವೆಯಾಗಿ ಬಿಡು."

"ಅದಕ್ಕೋಸ್ಕರವೇ ನಾನು ಒಂದು ಉಪಾಯ ಕಂಡು ಹಿಡಿದಿದ್ದೇನೆ."

"ಏನದು?" ಉತ್ಸುಕತೆ ತುಂಬಿದ ದನಿಯಲ್ಲಿ ಕೇಳಿದಳು ಲಕ್ಷ್ಮಿ.

"ನೋಡು, ದಂಡಿಗೆ ಹೋದ ಭಾವ ಮರಳಿ ಬರಲಾರ. ನಾವಿಬ್ಬರೂ ಸೇರಿ ಆತನನ್ನು ಮದುವೆಯಾಗಿ ಬಿಡೋಣ. ಆಗ ಇಬ್ಬರಿಗೂ ಬೇಸರವಿಲ್ಲ; ಜಗಳವಿಲ್ಲ!"

ಮದುವೆ ಎಂದರೆ ಏನೆಂದು ತಿಳಿಯದ ಆ ಎಳೆಯ ಹುಡುಗಿಯ ಮಾತುಗಳನ್ನು ಕೇಳಿದಾಗ ಲಕ್ಷ್ಮಿಯ ಕೊರಳು ಬಿಗಿಯಿತು. ತಂಗಿಯ ಮರುಳು ಮಾತು ಕೇಳಿದಾಗ ನಗುವೂ ತಲೆದೋರಿತು. ಅವಳ ಮನಿಸಿನ ಮಂಜು ನಗುವಿನ ಹೂಬಿಸಿಲಲ್ಲಿ ಕರಗಿಹೋಯಿತು.

"ಅಕ್ಕ, ಏಕೆ ನಗುತ್ತಿರುವೆ? ನೀನು ನನ್ನ ಗೇಲಿಮಾಡುತ್ತಿರುವೆ!" ಸಿಡುಕು ದನಿಯಲ್ಲಿ ಚಿರುತೆ ಕೇಳಿದಳು.

"ಇಲ್ಲ. ನಿನ್ನ ಚದುರನ್ನು ನೋಡಿ ನಕ್ಕೆ. ಆದರೆ ಒಂದು ಮಾತು."

"ಏನದು?"

"ನೀನೇ ಮೊದಲು ನಾಯಕನನ್ನು ಮದುವೆಯಾಗಿ ಬಿಡು. ಆತ ಒಳ್ಳೆಯ ಗಂಡನಾದರೆ ತಿಳಿಸು."

"ಆ ಮೇಲೆ ನೀನು ಮದುವೆಯಾಗುವೆಯಾ?"

"ಥೂ ಹೋಗೇ! ನಿನಗೆ ಬೇರೇನೂ ಮಾತಿಲ್ಲವೇ?" ಲಕ್ಷ್ಮಿ ಮುಖ ಸಿಂಡರಿಸಿದಳು.

ಮನೆಯಿಂದ ಅತ್ತೆಯ ಕರೆ ಹರಿದು ಬಂತು. ಅವಳು ಲಕ್ಷ್ಮಿಯನ್ನು, "ಲಕ್ಷ್ಮೀ, ಎಲ್ಲಿ ಹೋಗಿದ್ದೀಯೆ? ಗುಡಿಯ ಪೂಜೆಗೆ

ಯಂಭಾಂದ್ರಿ ಬಂದಿದ್ದಾರೆ. ನೀನು ಅಕ್ಕಿ, ಹಾಲು ಮತ್ತು ತೆಂಗಿನಕಾಯಿ ಬಾಳೆಹಣ್ಣುಗಳನ್ನು ಕೊಡು." ಎಂದು ಕೂಗಿ ಹೇಳಿದಳು.

ಲಕ್ಷ್ಮಿ ಆನೆಯನ್ನು ಬಿಟ್ಟು ಮನೆಯೊಳಗೆ ಹೋದಳು.

೧೩

ನಾಯಕನೇನಾದವೆಂದು ವಿಚಾರಿಸಿಕೊಂಡು ಬರಲು ಹೋದ ಕೇಳುಕುಟ್ಟಿ ನಾಯರರು ಅಂದು ಸಂಜೆಯೇ ಕುಪ್ಪುತ್ತೋಡಿನಿಂದ ಮರಳಿದರು. ಅವರ ಮೊಗದಲ್ಲಿ ಮುನಿಸಿನ ಕಿಚ್ಚು ಹೊಗೆಯಾಡುತಿದ್ದಿತು. ನಡೆದು ದಣಿದ ಗಂಡನಿಗೆ ಕಾಫಿಯನ್ನು ಕೊಟ್ಟು ಉಪಚರಿಸಿ ಆದ ಮೇಲೆ ಯಜಮಾನಿ, "ನಾಯಕನೇನಾದ?" ಎಂದು ಕೇಳಿದಳು.

"ಎಲ್ಲ ಶುದ್ಧ ನರರಾಕ್ಷಸರು!" ಯಜಮಾನರ ಕೊರಳಿಂದ ಕ್ರೋಧಸ್ವರ ಹೊರಟಿತು: "ಆ ಮಾಪಿಳ್ಳೆ ಕಾರ್ಯಕಾರ ನಾಯಕನನ್ನು ಕೊಂದೇ ಹಾಕಿಬಿಡುತಿದ್ದ.

"ಏಕೆ? ಏನಾಯಿತು?" ಗಾಬರಿತುಂಬಿದ ಧ್ವನಿಯಲ್ಲಿ ಯಜಮಾನಿ ಪ್ರಶ್ನಿಸಿದಳು.

"ನೋಡು, ಕಳೆದ ಎಂಟು ಹತ್ತು ದಿನಗಳಿಂದ ನಾಯಕ ಜ್ವರ ಹಿಡಿದು ಬಿದ್ದಿದ್ದಾನೆ. ಪಾಪ, ಅವನಿಗೆ ಚಿಕಿತ್ಸೆಯಿಲ್ಲ; ಉಪಚಾರವಿಲ್ಲ. ಆ ಮೂರ್ಖ ಕಾರ್ಯಕಾರ ನಾಯಕ ಕಾಹಿಲೆ ಬಿದ್ದನೆಂದು ಶಂಕರನಿಂದ ಮರೆ ಎಳೆಯಿಸುವ ಕಾರ್ಯವನ್ನು ಬೇರೊಬ್ಬ ಆನೆಕಾರನಿಗೆ ಒಪ್ಪಿಸಿದ. ಆ ಆನೆಕಾರನ ಮೇಲೆ ಮುನಿದು ಆತನಿಗೆ ಚಳ್ಳೆಹಣ್ಣು ತಿನ್ನಿಸಿ ಶಂಕರ ಇರುಳು ಇಲ್ಲಿಗೆ ಬಂದ. ಅವ ನಿನ್ನೆ ಬರದೇ ಹೋಗಿದ್ದರೆ ನಾಯಕ ಬೇನೆ ಬಿದ್ದುದು ನಮಗೆ ತಿಳಿಯುತ್ತಲೇ ಇರಲಿಲ್ಲ."

ಮಾವನ ಮಾತುಗಳನ್ನು ಲಕ್ಷ್ಮಿ ಕೇಳುತಿದ್ದಳು. ಆ ನುಡಿಗಳನ್ನು ಕೇಳಿದ ಮೇಲೆ ಅವಳಿಗೆ ಸ್ವಲ್ಪ ಸಮಾಧಾನವಾಯಿತು. 'ಯಾವಳೋ ಒಬ್ಬ ಕುರುಬಿತಿಯ ಬೆನ್ನ ಹಿಂದೆ ಓಡಿದ' ಎಂಬ ಅತ್ತೆಯ ಊಹೆ

ಹುಸಿಯಾಯಿತಲ್ಲ ಎಂದು ಅವಳು ಸಂತೋಷ ತಳೆದಳು.

"ನೋಡು ಲಕ್ಷ್ಮಿ, ಆ ಪತ್ತಾಯಪುರೆಯಲ್ಲಿ ಒಂದು ಹಸೆದಿಂಬು ಮತ್ತು ನಾಲ್ಕು ಕಂಬಳಿಗಳನ್ನು ತೆಗೆದುಕೊಂಡು ಹೋಗಿ ಹಾಕು." ಮಾವ ಲಕ್ಷ್ಮಿಯನ್ನು ಕರೆದು ಆಜ್ಞಾಸಿದರು: "ಆ ಸಣ್ಣ ಅರೆಯ ಮೇಲೆ ನಾಯಕನಿಗೆ ಹಾಸಿಗೆಯನ್ನು ಅಣಿಗೊಳಿಸಲು ಚಿರಿಕಂಟನಿಗೆ ಹೇಳು."

"ಏಕೆ?" ಬೆರಗು ಗಣ್ಣಾಗಳಿಂದ ಯಜಮಾನಿ ಪತಿಯ ಮೋರೆಯನ್ನು ನೋಡಿದಳು.

"ಮುಳ್ಳುವ ಕುರುಬರು ಕಾಹಿಲೆ ಹಿಡಿದ ನಾಯಕನನ್ನು ಕುಪ್ಪತ್ತೋಡಿನಿಂದ ಹೊತ್ತು ತರುತಿದ್ದಾರೆ. ಅವನಿಗೆ ಚಿಕಿತ್ಸೆ ಆರೈಕೆಗಳು ನಡೆಯಬೇಕಲ್ಲ."

"ಕುರುಬ ಹುಡುಗನಿಗೆ ನಮ್ಮ ಮನೆಯಲ್ಲಿ ಆರೈಕೆಯೇ?" ಯಜಮಾನಿ ವಿರಸದ ದನಿ ಎತ್ತಿದಳು.

"ಯಾಕಾಗಬಾರದು?" ಮಾವ ಮಾರ್ನುಡಿದರು: "ಆ ಕುರುಬ ಹುಡುಗನಿಗೆ ತನ್ನವರೆಂದು ಹೇಳುವವರು ಯಾರಿದ್ದಾರೆ? ಶಂಕರನಿಗೋಸ್ಕರವಾಗಿಯಾದರೂ ನಾವು ಆತನ ಉಪಚಾರವನ್ನು ಮಾಡಬೇಕು."

ಲಕ್ಷ್ಮಿ ಮಾವನ ಆಜ್ಞೆಯಂತೆ ಪತ್ತಾಯಪುರೆಗೆ ದಿಂಬು ಕಂಬಳಿಯನ್ನು ತೆಗೆದುಕೊಂಡು ಹೋದಳು. ಚಿರಿಕಂಟ ಕರೆಯುವ ಹಸುಗಳನ್ನು ಹಟ್ಟಿಯಲ್ಲಿ ಕಟ್ಟಿ ಬರಲೆಂದು ಹೋಗಿದ್ದ ಅವನು ಬರುವವರೆಗೆ ತಾನೇಕೆ ಕಾಯಬೇಕು; ತಾನೇ ನಾಯಕನ ಹಾಸನ್ನು ಅಣಿಗೊಳಿಸುವೆನೆಂದು ತನ್ನಲ್ಲಿಯೇ ಅವಳು ಹೇಳಿಕೊಂಡಳು. ಅವಳು ಕಸಬರಿಕೆಯನ್ನು ಎತ್ತಿಕೊಂಡು, ಅರೆಯ ಮೇಲೆ ಕೆಳಗೆ ನೆಲದ ಮೇಲೆ ತುಂಬಿದ ಧೂಳನ್ನು ಉಡುಗ ತೊಡಗಿದಳು. ಉಡುಗುವಾಗ ಧೂಳಿನ ಕಣಗಳು ಹಾರಿಬಂದು ಅವಳ ಚೆಲು ಮೋರೆಯ ಮೇಲೆ ನೆಲೆಗೊಂಡುವು.

ಅವಳು ಇನ್ನೂ ಕಸ ಉಡುಗಿ ಮುಗಿಸಿರಲಿಲ್ಲ. ಅಷ್ಟರಲ್ಲಿ ಚಿರುತೆ ತನ್ನ ತಮ್ಮಂದಿರನ್ನು ಕಟ್ಟಿಕೊಂಡು ಅಲ್ಲಿಗೆ ಓಡಿ ಬಂದಳು. ಅವಳು ಅಕ್ಕಸಹ ಗುಡಿಸುವುದನ್ನು ಕಂಡು, "ಅಕ್ಕ, ಕಸಬರಿಕೆಯನ್ನು ಇಲ್ಲಿ

ಕೊಡು. '' ಎಂದು ಹೇಳಿ ಕಸಬರಿಕೆಯನ್ನು ಕಸಿದುಕೊಂಡಳು.

"ನಾನು ಗುಡಿಸುವೆನು. ಚಿರುತೆ, ನೀನು ಹೋಗಿ ಆಡು.''

"ಅದಾಗದು." ಚಿರುತೆ ಕೈಯಲ್ಲಿ ಹಿಡಿದ ಕಸಬರಿಕೆಯಿಂದ ನೆಲವನ್ನು ಉಡುಗುತ್ತಾ ನುಡಿಗಳು : "ನಾವು ಮೊದಲೇ ನಿಶ್ಚಯಿಸಿದ್ದೇವೆ."

"ಏನೆಂದು?''

"ನಾಯಕನ ಸೇವೆಯಲ್ಲಿ ನಮ್ಮಿಬ್ಬರಿಗೂ ಸಮಪಾಲೆಂದು!''

"ಹೋಗೇ, ನಿನ್ನದು ಯಾವಾಗಲೂ ತಲೆ ಹರಟೆ!'' ಎದೆಯಲ್ಲಿ ತೋರಿದ ಮುನಿಸು ಲಕ್ಷ್ಮಿಯ ಮೃದುಕಪೋಲಗಳಿಗೆ ಕೆಂಬಣ್ಣವನ್ನು ಬಳಿಯಿತು.

''ಅಕ್ಕ, ಸಿಟ್ಟಾಗಬೇಡ." ಚಿರುತೆ ಬಾಗಿದ ಬೆನ್ನನ್ನು ನೇರಾಗಿಸುತ್ತಾ ಉಸುರಿದಳು : ''ಇನ್ನೊಂದು ಕ್ಷಣದಲ್ಲಿ ಚಿರಿಕಂಟ ಬಂದು ಎಲ್ಲವನ್ನು ಅಣಿಮಾಡುತಿದ್ದ. ನೀನೇ ಏಕೆ ಕೈಯಲ್ಲಿ ಕಸಬರಿಕೆಯನ್ನು ಎತ್ತಿಕೊಂಡೆ?"

ಚಿರುತೆಯ ತುಟಿ ಬಿರಿದು ಬಂದ ಮಾತುಗಳು ತಾನು ಎದೆಯೊಳಗೆ ಗೋಪ್ಯವಾಗಿರಿಸಿದ್ದ ಗುಟ್ಟನ್ನು ನಾಲ್ದೆಸೆಗಳಿಗೆ ಎರೆಚಲು ಹೊರಟಂತೆ ಲಕ್ಷ್ಮಿಗೆ ತೋರಿದುವು. ಅವಳು ಪಡಿಮಾತು ಕೊಡಲಿಲ್ಲ. ಅವಳು ಕಿರಿಯ ಅರೆಯ ಮೇಲೆ ಕಂಬಳಿಗಳನ್ನು ಹಾಸಿ ದಿಂಬನ್ನಿರಿಸಿದಳು. ಈ ಗೆಯ್ಮೆ ಅವಳಿಗೊಂದು ಅವಿದಿತ ನಲಿವನ್ನು ಒದಗಿಸಿತು.

ಸೂರ್ಯನು ಪಡುವಲಲ್ಲಿ ಕಂತುವ ಹೊತ್ತಿಗೆ ನಾಲ್ಕು ಜನ ಮುಳ್ಳುವ ಕುರುಬರು ಬಡಿಗೆಗೆ ಕಂಬಳಿ ಕಟ್ಟಿ ಮಾಡಿದ ತೊಟ್ಟಿಲಲ್ಲಿ ನಾಯಕನನ್ನು ಹೊತ್ತು ತಂದರು. ಮಾವ ನಾಯಕನನ್ನು ಎತ್ತಿ ಪತ್ತಾಯಪುರೆಯಲ್ಲಿದ್ದ ಪುಟ್ಟ ಅರೆಯ ಮೇಲೆ ಮಲಗಿಸಲು ಅವರಿಗೆ ಹೇಳಿದರು. ಅವರು ಲಕ್ಷ್ಮಿಯನ್ನು ಕರೆದು, "ಲಕ್ಷ್ಮೀ, ನಾಯಕ ಬಾಯಾರಿದ್ದಾನು. ಒಂದಿಷ್ಟು ಕಾಫಿಯನ್ನು ತಾ." ಎಂದು ಹೇಳಿದರು.

ಮುಳ್ಳುವ ಕುರುಬರು ನಾಯಕನನ್ನು ಎತ್ತಿಕೊಂಡು ಹೋಗಿ ಪುಟ್ಟ ಅರೆಯ ಮೇಲಿನ ಹಾಸಿನ ಮೇಲೆ ಮಲಗಿಸಿದರು. ಈಗ ನಾ[illegible]ಕನ ದೇಹ ಬಹಳ ಸೊರಗಿ ಹೋಗಿತ್ತು. ಅವನ [illegible]ಣ್ಣಗಳು ಗುಳಿ ಬಿದ್ದಿ

ದ್ದುವು. ಎದೆಯಿಂದ ಕೆಮ್ಮಲಿನ ಮಾಲೆಗಳು ಏಳುತಿದ್ದುವು. ಅವನಿಗೆ ಎದ್ದು ಕುಳಿತುಕೊಳ್ಳಲು ಸಹ ಆಗುತ್ತಿರಲಿಲ್ಲ.

ಲಕ್ಷ್ಮಿ ಮಾವನ ಆಜ್ಞೆಯಂತೆ ಲೋಟದಲ್ಲಿ ಕಾಫಿಯನ್ನು ತಂದಳು. ಮಾವ ಮನೆಯಾಳು ಚಿರುಕಂಟನನ್ನು ಕರೆದು, "ಚಿರುಕಂಟಾ, ನಾಯಕ ಬಾಯಾರಿದ್ದಾನು; ನೀನು ಅವನಿಗೆ ಒಂದಿಷ್ಟು ಕಾಫಿಯನ್ನು ಕುಡಿಸು.'' ಎಂದು ಹೇಳಿದರು.

ಉತ್ತಮ ನಾಯರ ಕುಲದಲ್ಲಿ ಜನಿಸಿದ ತನಗೆ ಹೀನ ಜಾತಿಯ ನಾಯಕನ ಮೈಮುಟ್ಟಿ ಕಾಫಿ ಕುಡಿಸಲು ಹೇಳುವುದೇ ಎಂಬ ಆಕ್ಷೇಪ ಚಿರುಕಂಟನ ಕಣ್ಣುಗಳಲ್ಲಿ ತೇಲಿತು. ಅವನು ನಾಯಕನ ಮೈಮುಟ್ಟಿ ಕಾಫಿ ಕುಡಿಸಲು ಹಿಂದು ಮುಂದು ನೋಡಿದ. ಆಳಿನ ಮನಸ್ಸಿನಲ್ಲಿದ್ದ ಆಲೋಚನೆ ಏನೆಂದು ಮಾವ ಗ್ರಹಿಸಿದರು. ಅವರು ನಸು ಮುನಿಸು ಬೆರೆತ ದನಿಯಲ್ಲಿ, "ರೋಗಿಗಳನ್ನು ಉಪಚರಿಸುವಾಗ ಮಡಿ ಮೈಲಿಗೆ ಗಳನ್ನು ನೋಡಬೇಕಾದ ಅವಶ್ಯವಿಲ್ಲ. ಐತವಾಯಿತೆಂಬ ಭೀತಿಯಿದ್ದರೆ ಆ ಮೇಲೆ ಹೊಳೆಗೆ ಹೋಗಿ ಒಂದು ಮುಳುಗು ಹಾಕಿ ಬಾ. ನಿನ್ನಿಂದಾಗ ದಿದ್ದರೆ ನಾನೇ ಕಾಫಿಯನ್ನು ಕುಡಿಸುವೆನು" ಎಂದರು.

ಯಜಮಾನನಿಗೆ ಪ್ರತಿಹೇಳಲು ಚಿರುಕಂಟನಿಗೆ ಧೈರ್ಯಬರಲಿಲ್ಲ. ಅವನು ಲಕ್ಷ್ಮಿಯ ಕೈಯಿಂದ ಕಾಫಿ ಲೋಟವನ್ನು ತೆಗೆದುಕೊಂಡ. ನಾಯಕನನ್ನು ಹಿಡಿದೆತ್ತಿ ಕುಳ್ಳಿರಿಸಿ ತನ್ನ ಮೈಗೆ ಆನಿಸಿಕೊಂಡ. ಬಲ ಗೈಯ ಲೋಟವನ್ನು ಕುರುಬ ಹುಡುಗನ ತುಟಿಗೆ ಹಿಡಿದ. ನಾಯಕ ನಿಗೆ ತುಂಬಾ ನೀರಡಿಕೆಯಾಗಿತ್ತು. ಅವನು ಬಾಯಿಗೊಡ್ಡಿದ ಕಾಫಿ ಯನ್ನು ಗಟಗಟನೆ ಹೀರಿದ.

ಮಾವ ನಾಯಕನನ್ನು ಹೊತ್ತುತಂದ ಮುಳ್ಳುವ ಕುರುಬರಿಗೆ ಕಾಫಿ ಬಾಳೆಹಣ್ಣು ಮತ್ತು ಅವಲಕ್ಕಿಗಳನ್ನು ಕೊಡಿಸಿ ಉಪಚರಿಸಿದರು. ಇರುಳನ್ನು ತಮ್ಮ ಮನೆಯಲ್ಲಿಯೇ ಕಳೆದು ಮರುವಿನ ಹೋಗಲು ಅವ ರಿಗೆ ಹೇಳಿದರು. ಅವಲಕ್ಕಿ ಹಣ್ಣುಗಳನ್ನು ಮೆದ್ದು ಮುಗಿಸಿದ ಮೇಲೆ ಮುಳ್ಳುವ ಕುರುಬರು ಆ ಇರುಳೇ ತಮ್ಮ ಪುರೆಗಳಿಗೆ ಮರುಳುವುದಾಗಿ ತಿಳಿಸಿದರು. ಮಾವ ಅವರಿಗೆ ವೀಳ್ಯದೆಲೆ ಹೊಗೆಸೊಪ್ಪುಗಳನ್ನಿತ್ತರು;

ಒಬ್ಬೊಬ್ಬರಿಗೆ ಎರಡೆರಡು ರೂಪಾಯಿಗಳನ್ನು ಸಂಭಾವನೆಯಿತ್ತು ಕಳು ಹಿಸಿದರು.

"ನೋಡು, ಚಿರುಕಂಟ," ಮಾವ ಮನೆಯಾಳನ್ನು ಕರೆದು ಹೇಳಿದರು: "ನಾಯಕನಿಗೆ ನಿಮೋನಿಯಾ ಆಗಿದೆ ಎಂದು ತೋರುವುದು. ನೀನು ಅಗ್ಗಿಷ್ಟಿಕೆಯಲ್ಲಿ ಉಪ್ಪನ್ನು ಹುರಿದು ಬಿಸಿಮಾಡಿ ಎದೆಶಾಖ ಕೊಟ್ಟರೆ ಕಫ ಕರಗಿ ನೀರಾದೀತು. ನೀನು ನಾಲ್ಕುದಿನ ಪತ್ತಾಯ ಪುರೆಯಲ್ಲಿಯೇ ಮಲಗು. ನಾಳೆ ಮುಂಜಾವು ಮಾನಂದವಾಡಿಗೆ ಹೋಗಿ ಡಾಕ್ಟರರನ್ನು ಕರೆದು ತಾ."

"ಆಗಲಿ." ಎಂದು ಚಿರುಕಂಟ ತಲೆ ಬಾಗಿದ.

ಊಟ ಮಾಡುವ ಮುನ್ನ ಲಕ್ಷ್ಮಿ ಒಂದು ಬಟ್ಟಲು ರವೆ ಗಂಜಿಯನ್ನು ತೆಗೆದುಕೊಂಡು ಹೋಗಿ, ನಾಯಕನಿಗೆ ಕುಡಿಸಿ ಬಂದಳು.

ಇರುಳು ಮಲಗುವ ಮುನ್ನ ಮಾವ ಪತ್ತಾಯಪುರೆಗೆ ಹೋಗಿ ನಾಯಕನನ್ನು ನೋಡಿಕೊಂಡು ಬಂದರು. ಚಿರುಕಂಟ ರೋಗಿಯ ಎದೆಗೆ ನೀಲಗಿರಿ ತೈಲವನ್ನು ಉಜ್ಜಿ ಉಪ್ಪಿನ ಶಾಖಕೊಟ್ಟದ್ದರಿಂದ ಕಫದ ಬಾಧೆ ಸ್ವಲ್ಪ ಕಡಿಮೆಯಾಗಿತ್ತು. ಅವನಿಗೆ ತುಸ ನಿದ್ರೆ ಬಂದಿತ್ತು.

ಮಾವ ಮಲಗುವ ಮುನ್ನ ಲಕ್ಷ್ಮಿಯನ್ನು ಕರೆದರು. ಕೋಣೆಯಲ್ಲಿ ಹಾಸಿಗೆ ಹಾಸುತಿದ್ದ ಲಕ್ಷ್ಮಿ, "ಏನು ಮಾವ?" ಎಂದು ಕೇಳಲು ಮಾವನ ಸನಿಹಕ್ಕೆ ಹೋದಳು.

"ನೋಡು, ಇರುಳು ನಾಯಕನಿಗೆ ನೀರಡಿಕೆ ಯಾದೀತು." ಮಾವ ಅಂದರು: "ನೀನು ಒಲೆಯ ಮೇಲೆ ಒಂದಿಷ್ಟು ಹಾಲು ಬಿಸಿಗಿಡು. ಇರುಳೊಮ್ಮೆ ಎದ್ದು ಹೋಗಿ ಅವನಿಗೆ ಹಾಲು ಕೊಟ್ಟು ಬಂದು ಬಿಡು. ಹೇಗೂ ಚಿರುಕಂಟ ಅಲ್ಲಿಯೇ ಮಲಗುತ್ತಾನೆ. ಅವನಿಗೆ ಹೇಳು. ಅವನು ತಳದಿದ್ದರೆ ನೀನೇ ಚಮಚದಿಂದ ಬಾಯಿಗೆ ಹಾಲೆರೆದು ಬಂದು ಬಿಡು."

ಮಾವನ ಮಾತು ಕೇಳಿ ಅತ್ತೆಯ ತುಟಿಗಳ ಮೇಲೆ ಹುಸಿನಗೆಯೊಂದು ಮಿಂಚಿತು.

"ಕುಞಕಾವು, ನೀನು ನಗುವುದೇಕೆ?" ಮಾವ ಮಡದಿಯನ್ನು

ಕೇಳಿದರು.

"ನೀವು ಕುರುಬ ಹೈದನಲ್ಲಿ ಇರಿಸಿದ ಅಕ್ಕರೆಯನ್ನು ಕಂಡು ನನಗೆ ನಗು ಬಂತು."

"ಪಾಪ, ನಾಯಕ ನಿಮೋನಿಯಾ ಹಿಡಿಗು ನರಳುತಿದ್ದಾನೆ; ಆ ತಬ್ಬಲಿ ಹುಡುಗನ ಆರೈಕೆ ಮಾಡಬೇಡವೇ?"

"ಆದರೆ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಿಗಿಂತಲೂ ಹೆಚ್ಚು ಕಾಳಜಿ ಮಾಡುತ್ತಿರುವಿರಲ್ಲ?"

"ಒಂದು ರೀತಿಯಲ್ಲಿ ನಾಯಕ ಮಗನಿಗೆ ಸಮಾನ." ಕರುಣೆಯ ದನಿ ಯಜಮಾನನ ಕೊರಳಿಂದ ಹೊಮ್ಮಿತು: "ಆತ ತಂದೆಯನ್ನು ಕಳೆದುಕೊಂಡ ಮೇಲೆ ನಮ್ಮ ಮನೆಯ ಸೂರನ್ನೇ ಆಶ್ರಯಿಸಿದ್ದಾನೆ. ಅವನಿಗೆ ನಾವಲ್ಲದೆ ಬೇರಿನ್ನಾರು ದಿಕ್ಕು?"

ಲಕ್ಷ್ಮಿ ಒಲೆಯ ಮೇಲೆ ಹಾಲನ್ನು ಬಿಸಿಗಿರಿಸಿ ತನ್ನ ಕೋಣೆಗೆ ಹೋದಳು. ಆಗಲೇ ಚಿರುತೆ ಹಾಸಿಗೆಯ ಮೇಲೆ ಅಡ್ಡಲಾಗಿ ಹೊರಳಿ ಗೊರಕೆ ಹೊಡೆಯುತಿದ್ದಳು. ಲಕ್ಷ್ಮಿ ತಂಗಿಯನ್ನೆತ್ತಿ ಸರಿಯಾಗಿ ಮಲಗಿಸಿದಳು. ತಾನೂ ಮಲಗಿ ಕಂಬಳಿಯನ್ನೆಳೆದು ಹೊದೆದು ಕೊಂಡಳು. ಓದೋಣವೆಂದು ಚಂದುಮೆನೋನರು ಬರೆದ ಇಂದು ಲೇಖೆಯನ್ನು ಎತ್ತಿಕೊಂಡಳು. ಆದರೆ ಅವಳ ಮನಸ್ಸು ಆ ಕಾದಂಬರಿಯಲ್ಲಿ ನೆಲೆಗೊಳ್ಳಲಿಲ್ಲ. ಅವಳ ಮನಸ್ಸಿನಲ್ಲಿ ನಾಯಕನ ಬಾಡಿದ ಮೋರೆ ಸುಳಿದಿತು. ಆತನ ಇಳಿಬಿದ್ದ ಕಣ್ಣುಗಳು ತೋರಿದುವು. ಅವಳು ತನ್ನಲ್ಲಿಯೇ "ಪಾಪ, ತಬ್ಬಲಿ ಹುಡುಗ. ಶಂಕರ ನಿನ್ನೆಯ ಇರುಳು ಬಾರದಿದ್ದರೆ, ಆತ ಬೇನೆ ಬಿದ್ದ ಸಂಗತಿಯೇ ನಮಗೆ ತಿಳಿಯುತ್ತಿಲಿಲ್ಲ!" ಎಂದು ಉದ್ಗಾರವೆತ್ತಿದಳು.

ಆಕೆಯ ಕಣ್ಣೆವೆಗಳು ಭಾರವಾದುವು. ನಿದ್ದೆ ಆಕೆಯ ಹತ್ತಿರ ಸುಳಿದು ಆಕೆಯನ್ನು ತನ್ನ ಮಡಿಲಲ್ಲಿರಿಸಿ ತೂಗಾಡಿಸಿತು.

ಸಂಜೆ ಹೊತ್ತು; ಹೊಳೆಯಲ್ಲಿ ಯಾರೋ ಇಬ್ಬರು ಮೀಯುತ್ತಿರುವರು. ಒಬ್ಬ ಗಂಡಸು; ಇನ್ನೊಬ್ಬಳು ಹೆಣ್ಣು. ಇಬ್ಬರೂ ಬೊಗಸೆಗಳಲ್ಲಿ ನೀರೆತ್ತಿ ಪರಸ್ಪರ ಎರಚಾಡುತ್ತಿರುವರು. ಯಾರವರು? ಕುಂಞಾ

ಕಣ್ಣು ಭಾರ್ಗವಿಯರೇ? ಅಲ್ಲ. ಅವರು ನಾಯಕ ಮತ್ತು ಲಕ್ಷ್ಮಿ. ನಾಯಕ ಸೊಂಟಕ್ಕೆ ಒಂದು ತೆಳುವುಂಡನ್ನು ಸುತ್ತಿರುವನು. ಲಕ್ಷ್ಮಿಯ ಮೇಲ್ಮೈ ಬತ್ತಲೆಯಾಗಿದೆ. ಆಕೆಯ ಉಬ್ಬಿದ ಎದೆ ನಾಯಕನು ಚೇಡುತ್ತಿರುವ ನೀರಿನ ಆಘಾತಗಳನ್ನು ಪ್ರತಿರೋಧಿಸುತ್ತಿದೆ. ಅವಳು ಎರಡು ಕೈಗಳಿಂದ ನೀರೆತ್ತಿ ನಾಯಕನ ಮೊಗದ ಮೇಲೆ ಎಸೆಯುತ್ತಿರುವಳು. ಆದರೆ ನಾಯಕನ ತೋಳ ಕಸುವು ಆಕೆಯ ತೋಳುಗಳಿಗಿಲ್ಲ. ಆತ ನೀರೆರಚುತ್ತಾ ಅವಳನ್ನು ಸಮೀಪಿಸಿದ. ಅಗೋ ಆತನ ತೋಳುಗಳು ನೀರೆತ್ತುವುದನ್ನು ನಿಲ್ಲಿಸಿದುವು; ಅವು ಆಕೆಯ ಮೈಯನ್ನು ಬಳಸಿದುವು. ಅವಳ ತುಂಗಸ್ತನಗಳು ಆತನ ವಿಶಾಲ ವೃಕ್ಷದಲ್ಲಿ ಆಸರೆಯನ್ನು ಪಡೆದುವು. ಅವಳು ನಾಯಕನನ್ನು ತಡೆಯಲಿಲ್ಲ. ಬೇಡವೆನ್ನಲಿಲ್ಲ. ಅವಳ ಎದೆ ದ್ರುತಗತಿಯಲ್ಲಿ ತುಡಿದುಕೊಂಡಿತು. ಅವನ ತುಟಿದುಂಬಿ ಆಕೆಯ ಮೊಗದಾವರೆಯ ಮಕರಂದವನ್ನು ಸವಿದಿತು. ಅವಳ ಮೈ ಪುಳಕಗರ ತೊರೆಯಲ್ಲಿ ಕೊಚ್ಚಿ ಹೋಯಿತು.

ಲಕ್ಷ್ಮಿ ಕಣ್ತೆರೆದಳು. ಲಾಂದ್ರದ ಮಬ್ಬು ಬೆಳಕು ಕೋಣೆಯಲ್ಲಿ ಹರಡಿತ್ತು. ಅವಳಿಗೆ ತನ್ನ ಎದೆ ಬಡಿದುಕೊಳ್ಳುವ ಸದ್ದು ಕೇಳಿಸಿತು. ಮೈಮೇಲಿನ ರೋಮುಗಳೆಲ್ಲ ಎದ್ದು ನಿಂತಿದ್ದುವು. ತಾನು ಕಂಡ ಕನಸನ್ನು ನೆನೆದು ಅವಳಿಗೆ ನಾಚಿಕೆಯಾಯಿತು.

ಲಕ್ಷ್ಮಿ ನಾಯಕನಿಗೆ ಹಾಲೂಡಿಸಿ ಬರುವೆನೆಂದು ಹಾಸಿಗೆಯಿಂದ ಎದ್ದಳು. ಅಡುಗೆ ಕೋಣೆಗೆ ಹೋಗಿ ಹಾಲಿಗೆ ಸಕ್ಕರೆಯನ್ನು ಬೆರಸಿದಳು. ಲೋಟ ಮತ್ತು ಚಮಚಗಳನ್ನೆತ್ತಿಕೊಂಡು ಪತ್ತಾಯಪುರೆಗೆ ಹೋದಳು. ಅಲ್ಲಿ ನೆಲದಮೇಲೆ ಚಿರುಕಂಟ ಮಲಗಿ ಗೊರಕೆ ಹೊಡೆಯುತಿದ್ದ. ಅವನನ್ನೇಕೆ ಕರೆದೆಬ್ಬಿಸುವುದು, ತಾನೇ ರೋಗಿಯ ಬಾಯಿಗೆ ಹಾಲನ್ನೆರೆಯುವೆನೆಂದು ನಾಯಕನು ಮಲಗಿದ ಅರೆಯ ಹತ್ತಿರ ಹೋದಳು.

ಕುರುಬ ಹುಡುಗನಿಗೆ ನಿದ್ದೆ ಬಂದಿತ್ತು. ಲಕ್ಷ್ಮಿ ನಸುಬಾಗಿ ಅವನ ಮೋರೆಯನ್ನು ನಿಟ್ಟಿಸಿ ನೋಡಿದಳು. ಅವನಿಗೆ ಜ್ವರವಿದೆಯೇ ಎಂದು ನೋಡಬೇಕೆಂಬು ಅವಳಿಗೆ ಅನಿಸಿತು. ಅವಳು ತನ್ನ ಬಲಗೈಯನ್ನು

ಕಂಬಳಿಯೊಳಗೆ ತೂರಿ ಎದೆಯ ಮೇಲಿರಿಸಿದಳು; ಅವನ ಮೈ ಕಾದ ಕಾವಲಿಯಂತೆ ಸುಡುತ್ತಿದ್ದಿತು.

ಲಕ್ಷ್ಮಿ ನಾಯಕನ ಎದೆಯ ಮೇಲೆ ಕೈ ಇರಿಸಿದಾಗ ನಾಯಕನ ತೋಳುಗಳು ಸರಿದುವು. ಅವನ ಜೀವ ಆ ಸವಿಗನಸನ್ನು ಕಾಣುತಿತ್ತೋ! ಆ ಎರಡು ತೋಳುಗಳ ಬಾಗಿದ ಲಕ್ಷ್ಮಿಯ ಹೆಗಲುಗಳ ಮೇಲೆ ಬಿದ್ದುವು. ಈ ಸೋಂಕು ಅವಳನ್ನು ರೋಮಾಂಚನಗೊಳಿಸಿತು. ಎದೆ ರಾಗ ತರಂಗಗಳು ತುಳುಕಾಡುತ್ತಿರುವ ಮಡುವಾಯಿತು. ಆಕೆಯ ಮನಸ್ಸು ಕಟ್ಟುಪಾಡುಗಳ ಸಂಕಲೆಯನ್ನು ಕಡಿದೊಗೆಯಿತು. ಅವಳು ಕುರುಬ ಹುಡುಗನ ಮೋರೆಯ ಮೇಲೆ ತುಟಿಗಳನ್ನಿರಿಸಿದಳು.

ಲಕ್ಷ್ಮಿಗೆ ತಾನು ಗೈವ ಅಕಾರ್ಯದ ಅರಿವಾಯಿತು. ಅವಳು ಹಾವನ್ನು ಸೋಂಕಿದವಳಂತೆ ಬೆಚ್ಚಿ ಬಿದ್ದು ಹಿಂಜರಿದಳು. ಎದೆ ಗುಂಡಿಗೆಯ ರಕ್ತವೆಲ್ಲ ಹರಿದು ಬಂದುದರಿಂದ ಆಕೆಯ ಮೋರೆ ಕೆಂಗುಲಾಬಿಯಾಯಿತು. ಅವಳು ಕೊರಳು ತಿರುಗಿ ಚಿರುಕಂಟನನ್ನು ನೋಡಿದಳು. ಆತ ಇನ್ನೂ ಗೊರಕೆ ಹೊಡೆಯುವುದನ್ನು ನಿಲ್ಲಿಸಿರಲಿಲ್ಲ.

" ನಾಯಕ, ನಾಯಕ ! " ನಿದ್ರಿಸುತಿದ್ದ ಕುರುಬ ಹುಡುಗನನ್ನು ಕರೆದೆಬ್ಬಿಸಿದಳು ಲಕ್ಷ್ಮಿ.

ಆಕೆಯ ಕೂಗು ನಾಯಕನನ್ನು ಎಚ್ಚರಿಸಿತು. ಅವನು ಕಣ್ದೆರೆದು ನೋಡಿದ. ಅವನು ತನ್ನ ಪುಟ್ಟ ಪಾಪಾತಿ ತನ್ನ ಮುಂದೆ ನಿಂತಿರುವುದನ್ನು ಕಂಡ. ಅವನ ಕಣ್ಣುಗಳಲ್ಲಿ ವಿಸ್ಮಯ ತೇಲಿತು. ಅವನು " ಏಕೆ ಬಂದಿರಿ ಪಾಪಾತಿ ? " ಎಂದು ಕೇಳಿದ.

" ನೀನು ಬಾಯಾರಿರಬಹುದು; ಒಂದಿಷ್ಟು ಹಾಲು ತಂದಿದ್ದೇನೆ."

" ಈ ಕುರುಬ ಹೈದನಿಗೋಸ್ಕರ ನೀವು ತುಂಬಾ ತೊಂದರೆ ತೆಗೆದುಕೊಳ್ಳುವಿರಲ್ಲ ! "

" ಸುಮ್ಮನಿರು; ಬಾಯ್ದೆರೆ. " ಲಕ್ಷ್ಮಿ ಗದರಿಕೆಯ ದನಿಯನ್ನೆತ್ತಿದಳು.

ನಾಯಕ ಮರು ಮಾತಾಡದೆ ಬಾಯ್ದೆರೆದ. ಲಕ್ಷ್ಮಿ ಲೋಟದಲ್ಲಿದ್ದ ಹಾಲನ್ನು ಎತ್ತಿ ನಡುಗುವ ಕೈಯಿಂದ ನಾಯಕನ ಬಾಯೊಳಗೆ

ಎರೆದಳು. ನಾಯಕ ಸುರಿದ ಹಾಲನ್ನು ಮರುಮಾತಾಡದೆ ಕುಡಿದ.

ನಾಯಕನಿಗೆ ಹಾಲು ಕುಡಿಸಿ ಮುಗಿಸಿದಳು ಲಕ್ಷ್ಮಿ. ಅವಳು ಪತ್ತಾಯಪುರೆಯ ಕದಗಳನ್ನು ಎಳೆದುಕೊಂಡು ತನ್ನ ಓವರಿಗೆ ತೆರಳಿದಳು. ಅವಳು ಹೆಜ್ಜೆಗಳನ್ನು ಇರಿಸುತಿದ್ದಾಗ ಅವಳ ಮೈ ಗಾಳಿಗೆ ಸಿಲುಕಿದ ಬಾಳೆಲೆಯಂತೆ ನಡುಗಿತು.



ಮರುದಿನ ಚಿರುಕಂಟ ಮಾನಂದವಾಡಿಗೆ ಹೋಗಿ ಡಾಕ್ಟರರನ್ನು ಕರೆದುಕೊಂಡು ಬಂದ. ಅವರು ಒಂದು ರೋಗಿಯ ದೇಹವನ್ನು' ಪರಿಕ್ಷಿಸಿ ನೋಡಿ, "ಈತನಿಗೆ ನಿಮೋನಿಯಾ ಆಗಿದೆ. ನಾನು ಎರಡು ಇಂಜೆಕ್ಷನ್ ಕೊಡುವೆನು. ಮಾತ್ರೆಗಳನ್ನೂ ಔಷಧಿಯನ್ನೂ ಕೊಟ್ಟು ಕಳುಹಿಸುವೆನು. ಒಂದು ವಾರದಲ್ಲಿ ಬೇನೆ ವಾಸಿಯಾಗುವುದು." ಎಂದು ಹೇಳಿದರು.

ಡಾಕ್ಟರರು ತಾವು ಹೇಳಿದಂತೆ ರೋಗಿಗೆ ಎರಡು ಇಂಜೆಕ್ಷನ್ನುಗಳನ್ನು ಕೊಟ್ಟರು. ಹತ್ತೆಂಟು ಸಿಬಸಾಲ್ ಮಾತ್ರೆಗಳನ್ನಿತ್ತು ರೋಗಿಗೆ ಹೊತ್ತಿಗೆ ಎರಡೆರಡು ಮಾತ್ರೆಗಳನ್ನು ಕೊಡಲು ಹೇಳಿದರು. ಪಣಿಯನೊಬ್ಬ ಅವರ ಜತೆಯಲ್ಲಿ ಮಾನಂದವಾಡಿಗೆ ಹೋಗಿ ಡಾಕ್ಟರರು ಕೊಟ್ಟ ಮಾತ್ರೆ ಮತ್ತು ಮಿಕ್ಸ್‌ಚರುಗಳನ್ನು ತಂದ.

ಮನೆಯ ಮಕ್ಕಳುಮರಿಗಳಲ್ಲಿ ಯಾರಾದರೂ ಕಾಯಿಲೆ ಬಿದ್ದರೆ, ಅವರಿಗೆ ಮದ್ದು ಗಂಜಿಗಳನ್ನು ಕೊಟ್ಟು ಉಪಚರಿಸುವುದು ಲಕ್ಷ್ಮಿಯ ಕೆಲಸ. ಮನೆಯಲ್ಲಿ ಬೇರೆ ಯಾರೂ ಅವಳಷ್ಟು ನಿಗಕೊಟ್ಟು ರೋಗಿಯನ್ನು ಉಪಚರಿಸುತ್ತಿರಲಿಲ್ಲ. ಆದುದರಿಂದ ಮಾವ ಲಕ್ಷ್ಮಿಯನ್ನು ಕರೆದು, "ಲಕ್ಷ್ಮೀ, ನಾಯಕನ ಆಹಾರ ಮತ್ತು ಮದ್ದುಗಳ ವಿಚಾರದಲ್ಲಿ ನೀನು ಎಚ್ಚರಿಕೆ ತೆಗೆದುಕೊಳ್ಳಬೇಕು." ಎಂದು ಸೊಸೆಗೆ ಹೇಳಿದರು.

"ಆಗಲಿ ಮಾವ." ಲಕ್ಷ್ಮಿ ಮಾವನ ಆಜ್ಞೆಯನ್ನು ಒಪ್ಪಿಕೊಂಡಳು. ನಾಯಕನನ್ನು ಉಪಚರಿಸುವುದು ಅವಳಿಗೆ ಸಂತೋಷದ

ಎಸಕವೇ ಆಗಿತ್ತು.

ಗಂಡ ಲಕ್ಷ್ಮಿಗೆ ಹೇಳಿದ ಕಾರ್ಯ ಯಜಮಾನಿಗೆ ಉಚಿತವಾಗಿ ಕಾಣಲಿಲ್ಲ. ಅವಳು, "ಮನೆಯ ಹೆಣ್ಣನ್ನು ಕುರುಬನ ಉಪಚಾರಕ್ಕೆ ಹಾಕುವುದೇ ?" ಎಂದು ಆಕ್ಷೇಪವೆತ್ತಿದಳು.

"ಏಕಾಗಬಾರದು ?" ಮಾವ ವಾದಿಸಿದರು: "ಅವನು ನಮ್ಮ ಮನೆಯವನ ಹಾಗೆಯೇ ಇದ್ದಾನೆ. ಅವನಿಗೆ ಹೊತ್ತಿಗೆ ಸರಿಯಾಗಿ ಗಂಜಿ ಮತ್ತು ಮದ್ದುಗಳನ್ನು ಕೊಡಬೇಕಲ್ಲ ?"

"ಚಿರಿಕಂಟ ಇದ್ದಾನೆ; ದೇವತ್ತೆ ಇದ್ದಾರೆ.''

"ಚಿರಿಕಂಟನಿಗೆ ಮನೆಯಲ್ಲಿ ಹತ್ತೆಂಟು ಕೆಲಸಗಳಿರುತ್ತವೆ. ಈ ಕೆಲಸಗಳ ಗಡಿಬಿಡಿಯಲ್ಲಿ ಅವನು ನಾಯಕನನ್ನು ಮರೆತರೂ ಮರೆತ. ಇನ್ನು ದೇವತ್ತೆ ಅಡುಗೆಕೋಣೆಯನ್ನು ಬಿಟ್ಟು ಹೊರಗೆ ಕಾಲಿರಿಸುವುದೇ ಅಪರೂಪ. ಲಕ್ಷ್ಮಿಗೆ ಮನೆಯಲ್ಲಿ ವಿಶೇಷ ಕೆಲಸವೂ ಇಲ್ಲ; ರೋಗಿಗಳನ್ನು ಉಪಚರಿಸುವುದರಲ್ಲಿ ಆಸಕ್ತಿಯೂ ಹೆಚ್ಚು.''

"ನಿಮಗೆ ಚಂದಕಂಡ ಹಾಗೆ ಮಾಡಿ.'' ಎಂದು ನುಡಿದು ಅತ್ತೆ ಸುಮ್ಮನಾದಳು.

ಲಕ್ಷ್ಮಿ ನಾಯಕನ ಆರೈಕೆಯಲ್ಲಿ ಆಸಕ್ತಿ ವಹಿಸಿದಳು. ಅವನಿಗೆ ಹೊತ್ತಿಗೆ ಸರಿಯಾಗಿ ರವೆಗಂಜಿಯನ್ನು ತಯಾರಿಸಿ ತೆಗೆದುಕೊಂಡು ಹೋಗಿ ಕೊಡುತ್ತಿದ್ದಳು. ಮದ್ದನ್ನು ಕುಡಿಸುತ್ತಿದ್ದಳು. ಒಂದೆ ನಾಯಕನಿಗೆ ಉಣಬಡಿಸುತ್ತಿದ್ದಾಗ ಆಕೆಗೆ ಯಾವ ಬಗೆಯ ಸಂಕೋಚವೂ ಆಗುತ್ತಿರಲಿಲ್ಲ.

ಈಗ ನಾಯಕನಿಗೆ ಗಂಜಿ ಒಯ್ಯುವುದೆಂದರೆ, ಔಷಧಿಯನ್ನು ಎರೆದು ಕೊಡುವುದೆಂದರೆ ಅವಳ ಮನಸ್ಸೇಕೋ ಅಳುಕುತ್ತಿತ್ತು. ಅವನ ಕಣ್ಣನೋಟವನ್ನು ಎದುರಿಸಲು ಆಕೆಗೆ ಆಗುತ್ತಿರಲಿಲ್ಲ. ಈಗ ಸಹಜ ಸರಳ ವರ್ತನೆಗಳಲ್ಲಿ ಒಂದು ಬಗೆಯ ಸಂಕೀರ್ಣತೆ ತಲೆದೋರಿದಂತೆ ಅವಳಿಗೆ ಅನಿಸಿತು.

ಒಂದು ದಿನ ಮಧ್ಯಾಹ್ನ ಲಕ್ಷ್ಮಿ ನಾಯಕನಿಗೆ ಕೊಡಲೆಂದು ರವೆಗಂಜಿಯನ್ನು ತೆಗೆದುಕೊಂಡು ಹೊರಟಳು. ಬೆಳಿಗ್ಗೆ, "ಸಪ್ಪೆ ಗಂಜಿ

ಯನ್ನು ಕುಡಿಯಲಾರೆ; ಅದನ್ನು ಬಾಯಿಗೆ ಹಾಕಿದಾಗ ಓಕರಿಕೆ ಬರುತ್ತದೆ." ಎಂದು ನಾಯಕ ಹೇಳಿದುದು ಅವಳಿಗೆ ನೆನಪಾಯಿತು. ನಂಜಿಕೊಳ್ಳಲು ಎರಡು ಹೋಳು ಉಪ್ಪಿನಕಾಯಿ ತೆಗೆದುಕೊಳ್ಳುವೆನೆಂದು ಅವಳು ಆಲೋಚಿಸಿದಳು. ಮರಿಗೆಯಿಂದ ಎರಡು ಹೋಳು ಉಪ್ಪಿನಕಾಯಿ ತೆಗೆದು ಬಾಳೆಲೆಯಲ್ಲಿ ಸುತ್ತಿಕೊಂಡಳು. ಅಷ್ಟರಲ್ಲಿ ಅಲ್ಲಿಗೆ ಚಿರುತೆಯ ಸವಾರಿ ಚಿತ್ತೈಸಿತು. ಅವಳು ಬಾಳೆಲೆಯಲ್ಲಿದ್ದ ಉಪ್ಪಿನಕಾಯಿಯನ್ನು ಕಂಡು, "ಅಕ್ಕ, ಇದು ಯಾರಿಗೆ?" ಎಂದು ಕೇಳಿದಳು.

"ನಾಯಕನಿಗೆ. ಅವನ ನಾಲಿಗೆ ಸಪ್ಪೆ ಬಿದ್ದಿದೆಯಂತೆ."

"ನಾನು ತೆಗೆದುಕೊಳ್ಳುವೆನು." ಎಂದು ಹೇಳಿ ಚಿರುತೆ ಬಾಳೆಲೆಯಲ್ಲಿದ್ದ ಉಪ್ಪಿನಕಾಯಿಯನ್ನು ಎತ್ತಿಕೊಂಡು ಅಕ್ಕನನ್ನು ಹಿಂಬಾಲಿಸಿದಳು.

ನಾಯಕ ತನ್ನ ಹಾಸಿಗೆಯಲ್ಲಿ ಕುಳಿತುಕೊಂಡಿದ್ದ. ಈಗ ಅವನಿಗೆ ಜ್ವರ ಬಿಟ್ಟಿತ್ತು. ಕೆಮ್ಮಲು ಕಡಿಮೆಯಾಗಿತ್ತು. ಅವನು ಎದ್ದು ಕುಳಿತುಕೊಳ್ಳಬಲ್ಲ. ಪತ್ತಾಯಪುರಿಯೊಳಗೆ ನಾಲ್ಕು ಹೆಜ್ಜೆಗಳನ್ನಿಡಬಲ್ಲ. ಲಕ್ಷ್ಮಿಯನ್ನು ಕಂಡೊಡನೆ ಆತನ ಮುಖದಲ್ಲಿ ಮಂದಹಾಸ ಮಿನುಗಿತು. ಅವನು, "ಪಾಪಾತಿ, ನನಗೋಸುಗ ನೀವು ಎಷ್ಟು ತೊಂದರೆ ತೆಗೆದುಕೊಳ್ಳುತ್ತಿರುವಿರಿ. ಹೊತ್ತು ಸ್ವಲ್ಪವೂ ಹೆಚ್ಚು ಕಡಿಮೆಯಾಗದಂತೆ ಉಣಿಸನ್ನು ತರುವಿರಲ್ಲ!" ಎಂದು ಉದ್ಗಾರವೆತ್ತಿದ.

"ನಾಯಕ, ನಿನಗೆ ನಾವು ಅಂಜಬೇಕಲ್ಲ!" ಚಿರುತೆ ಕೊಂಕು ದನಿ ಎತ್ತಿದಳು. "ನೀನೆಲ್ಲಾದರೂ ಶಂಕರನನ್ನು ನಮ್ಮ ಮೇಲೆ ಬಿಟ್ಟರೆ!"

"ಶಂಕರನನ್ನು ನಾನೇಕೆ ನಿಮ್ಮ ಮೇಲೆ ಬಿಡಬೇಕು?"

"ನಿನಗೆ ಸರಿಯಾಗಿ ಉಪಚಾರ ಮಾಡಲಿಲ್ಲವೆಂದು. ಆಗ ಆ ರಾಮುಣ್ಣಿಯ ಪಾಡು ನಮ್ಮ ಪಾಡು!"

"ರಾಮುಣ್ಣಿ ಶಂಕರನಿಗೆ ಕೇಡು ಮಾಡಿದ. ಅದಕ್ಕೆ ತಕ್ಕ ಶಾಸ್ತಿ ಅವನಿಗಾಯಿತು."

"ಚಿರುತೆ, ನೀನು ನಿನ್ನ ಪುರಾಣವನ್ನು ಆ ಮೇಲೆ ಬಿಚ್ಚುವಿಯಂತೆ." ಲಕ್ಷ್ಮಿ ತಂಗಿಯನ್ನು ಗದರಿಸಿದಳು: "ನಾಯಕ ನೀನು ತಟ್ಟೆಯನ್ನು ಹಿಡಿ."

ನಾಯಕ ತಲೆದೆಸೆಯಲ್ಲಿದ್ದ ತಟ್ಟೆಯನ್ನು ಎತ್ತಿಕೊಂಡ. ಲಕ್ಷ್ಮಿ ತಾನು ತಂದ ಗಂಜಿಯನ್ನು ಬಡಿಸಿದಳು.

"ನಾಯಕ, ಗಂಜಿ ಸಪ್ಪೆಯಾಗಿದೆಯಲ್ಲವೇ?" ಚಿರುತೆ ನಡುವೆ ಬಾಯಿ ಹಾಕಿದಳು.

"ಹೌದು. ಪಾಪಾತಿ, ಬಾಯೆಲ್ಲ ಕಹಿಯಾಗಿ ಹೋಗಿದೆ."

"ನೋಡು, ಅದಕ್ಕೆಂತಲೇ ನಾನು ನಿನಗೆ ಉಪ್ಪಿನಕಾಯಿಯನ್ನು ತಂದ್ದಿದ್ದೇನೆ." ಚಿರುತೆ ಕೈಯಲ್ಲಿ ಹಿಡಿದ ಬಾಳೆ ಎಲೆಯನ್ನು ನಾಯಕನ ಮುಂದಿರಿಸಿದಳು.

ಉಪ್ಪಿನಕಾಯಿಯನ್ನು ಕಾಣಲು ನಾಯಕನ ಕಣ್ಣುಗಳು ಅರಳಿದುವು. ಅವನು ಉಪ್ಪಿನಕಾಯಿಯನ್ನು ನಂಜಿಕೊಂಡು ಉಣತೊಡಗಿದ. ಚಿರುತೆಯ ಬಾಯಿ ಸುಮ್ಮನಿರಲಿಲ್ಲ. ಅವಳು, "ನಾಯಕ, ನಮ್ಮಿಬ್ಬರಲ್ಲಿ ನೀನು ಯಾರನ್ನು ಮೆಚ್ಚುವೆ?" ಎಂದು ಕೇಳಿದಳು.

"ಏಕೆ ಪಾಪಾತಿ?" ಚಿರುತೆಯ ಮಾತು ನಾಯಕನಿಗೆ ಹೊಲಬಾಗಲಿಲ್ಲ.

"ನೋಡು. ನೀನು ಹೇಳಬೇಕು."

"ಚಂದದ ಮಾತುಗಳನ್ನು ಕೇಳುವಾಗ ನಿಮ್ಮನ್ನು............"

"ಊಟ ಉಣಿಸುಗಳನ್ನು ಕೊಡುವದನ್ನು ಆಲೋಚಿಸುವಾಗ ಅಕ್ಕನನ್ನು; ಅಲ್ಲವೇ?"

"ಹೂಂ." ಎಂದು ನಾಯಕ ತಲೆಯಲುಗಿಸಿದ.

"ನೋಡು, ನಾನು ಅಕ್ಕನಷ್ಟು ದೊಡ್ಡವಳಾದ ಮೇಲೆ ನಿನಗೆ ಊಟ ತಿಂಡಿಗಳನ್ನು ತಂದುಕೊಡಬಲ್ಲೆ."

ನಾಯಕ ಮಾತಾಡಲಿಲ್ಲ. ಚಿರುತೆ ನಾಯಕನ ಎಡಗೈಯನ್ನು ಎತ್ತಿಕೊಂಡು ಬೆರಳುಗಳಲ್ಲಿದ್ದ ಬೆಳ್ಳಿಯ ಉಂಗುರಗಳನ್ನು ನೋಡುತ್ತಾ, "ಆಗ ನೀನು ನನ್ನನ್ನೇ ಮೆಚ್ಚುವೆ; ಅಲ್ಲವೇ?" ಎಂದು ಕೇಳಿದಳು.

"ಹೂಂ." ಎಂದ ನಾಯಕ.

"ನಾಯಕ, ನೋಡು, ನನ್ನದೊಂದು ಗುಟ್ಟಿದೆ."

"ಪಾಪಾತಿ, ಏನದು?"

"ಅಕ್ಕನಿಗಲ್ಲದೆ ಬೇರೆ ಯಾರಿಗೂ ಅದು ತಿಳಿಯದು."

"ಸುಮ್ಮನಿರೇ ಚಿರುತೆ." ಲಕ್ಷ್ಮಿ ತಂಗಿಯ ಮೇಲೆ ರೇಗಿದಳು. "ಉಣವಾಗ ಆತನನ್ನು ಗೋಳು ಹುಯ್ಯಬೇಡ."

"ಅಕ್ಕ, ನಾಯಕನೇನು ಬಾಯಿಯಿಂದ ಕೇಳುವುದಿಲ್ಲ." ಚಿರುತೆ ನೊಂದ ದನಿಯಲ್ಲಿ ಉಸುರಿದಳು: "ಅವನು ಕಿವಿಗಳಿಂದ ಕೇಳುತ್ತಾನೆ. ನೋಡು, ನಾಯಕ ನಾನು ನಿನ್ನನ್ನೇ ಮದುವೆಯಾಗುವುದು. ನೀನು ಅಕ್ಕನಿಗೆಲ್ಲಿಯಾದರೂ ಮಾತು ಕೊಡಬೇಡ. ಅವಳ ಗಂಡನೇನೂ ಯುದ್ಧದಿಂದ ಮರಳಿ ಬರುವುದಿಲ್ಲ."

ಚಿರುತೆಯ ಅಧಿಕಪ್ರಸಂಗವನ್ನು ಕಂಡು ಲಕ್ಷ್ಮಿಗೆ ಸಿಟ್ಟು ಬಂತು. ಅವಳು, "ಹೋಗೇ! ನಿನ್ನ ಮಾತಿಗೆ ತುದಿ ಬುಡವಿಲ್ಲ." ಎಂದು ಗಜರಿದಳು.

ಚಿರುತೆಯ ಮಾತು ಕೇಳಿದಾಗ ನಾಯಕ ತನ್ನ ಗಂಡನಾಗದಿದರೆ ಎಂಬ ಭಾವ ಲಕ್ಷ್ಮಿಯ ಅಂತರಂಗದಲ್ಲಿ ಸುಳಿಯದೆ ಹೋಗಲಿಲ್ಲ. ಅದು ಆಕಾಶದಲ್ಲಿ ತೇಲುವ ಚಂದ್ರನನ್ನು ಹಿಡಿಯಲು ಕೈಚಾಚಿದ ಹಾಗೆ ಈಡೇರದ ಆಶೆ ಎಂಬುದನ್ನು ಅವಳು ಬಲ್ಲಳು. ಆದರೂ ಆ ಆಲೋಚನೆ ಅವಳ ಮನಸ್ಸಿಗೆ ನಲವನ್ನಿತ್ತಿತು. ಅವಳ ಮೋರೆ ರಕ್ತವರ್ಣವನ್ನು ತಾಳಿತು. ಅವಳು ಅಲ್ಲಿ ನಿಲ್ಲಲು ಇಷ್ಟಪಡದೆ ನಾಯಕ ಕೈಬಾಯಿಗಳನ್ನು ತೊಳೆದುಕೊಳ್ಳಲು ನೀರು ತರಲೆಂದು ಹೊರಟುಹೋದಳು.

ಅಂದು ಹಗಲೆಲ್ಲ ಲಕ್ಷ್ಮಿಯ ಅಂತರಂಗದಲ್ಲಿ ಒಂದು ಘನಘೋರ ಸಂಗ್ರಾಮ ನಡೆಯಿತು. ಕುಲದ ಹೆಮ್ಮೆ, ಜಾತಿಯ ಅಭಿಮಾನ ಅವಳ ಕಾಲುಗಳನ್ನು ಹಿಡಿದು ಜಗ್ಗಿದುವು. ಎಳವೆಯಿಂದಲೇ ಅಭ್ಯಾಸಮಾಡಿ ಮೈಗೂಡಿಸಿಕೊಂಡ ನೀತಿ-ಸದಾಚಾರಗಳು ಅವಳ ಬಯಕೆಗೆ ಬೇಡಿಯನ್ನು ತೊಡಿಸಿ ಸೆರೆಯಲ್ಲಿಡಲು ಹೆಣಗಿದವು. "ನಾನು ಉತ್ತಮ ತರವಾಡಿನಲ್ಲಿ ಹುಟ್ಟಿದವಳು. ಕೀಳು ಜಾತಿಯ ಕುರುಬ ಹುಡುಗನ ಜತೆಯಲ್ಲಿ ಚಕ್ಕಂದ ಸಲ್ಲದು. ಅವನು ಯಾರು; ನಾನು ಯಾರು! ಮಾವನ ಹೆಸರಿಗೆ ಎಂದಿಗೂ ಮಸಿ ಬಳಿಯೆನು!" ಎಂದು ಹೇಳಿ ಜಾಗೃತಿಗೊಳ್ಳಲು ಹವಣಿಸುತ್ತಿರುವ ಸುಪ್ತಾಕಾಂಕ್ಷೆಯನ್ನು ಅಂತರಂಗದಲ್ಲಿಯೇ ಅದುಮಿ

ದಳು. ಆದರೆ ಅಂತರಂಗದ ಬಯಕೆ ತನಗೆ ಬಿಗಿಯಲು ಹವಣಿಸಿದ ಸಂಕಲೆಯನ್ನು ಕಡಿದು ನುಚ್ಚುನುರಿಯಾಗಿಸಲು ಅವಳ ರಕ್ತದ ಕಣಕಣ ಗಳಲ್ಲಿಯೂ ತುಂಬಿ ಸೆಣಸಿತು!

ಸಂಜೆ ಲಕ್ಷ್ಮಿ ಆನೆಕಾರ ಹುಡುಗನಿಗೆ ಕಾಫಿಯನ್ನು ತೆಗೆದುಕೊಂಡು ಹೋಗಿ ಕೊಡಲಿಲ್ಲ. ಅವಳು ಚಿರುತೆಯನ್ನು ಕರೆದು ಆಕೆಯ ಕೈಯಲ್ಲಿ ಕಾಫಿಯನ್ನು ಕೊಟ್ಟು ಕಳುಹಿಸಿದಳು. ಚಿರುತೆ, "ನೀನೇಕೆ ಕಾಫಿಯನ್ನು ಒಯ್ಯುವುದಿಲ್ಲ?" ಎಂದು ಅಕ್ಕನನ್ನು ಕೇಳದಿರಲಿಲ್ಲ.

"ಕುರುಬ ಹುಡುಗನನ್ನು ಮದುವೆಯಾಗಲು ಹಾತ್ತೊರೆಯುತ್ತಿರು ವವಳು ನೀನು!" ಲಕ್ಷ್ಮಿ ತಂಗಿಯ ಮೋರೆಯನ್ನು ನೋಡಿ ನಕ್ಕಳು: "ಆದುದರಿಂದ ನೀನೇ ಕಾಫಿಯನ್ನು ತೆಗೆದುಕೊಂಡು ಹೋಗಿ ಕೊಡ ಬೇಕು."

ಹಿಗ್ಗಿನಿಂದ ಚಿರುತೆಯ ಮೋರೆ ಹೀರೇ ಹೂವಾಯಿತು. ಅವಳು ಮರುಮಾತಾಡದೆ ಕಾಫಿಯನ್ನು ತೆಗೆದುಕೊಂಡು ಹೋಗಿ ನಾಯಕನಿಗೆ ಕೊಟ್ಟಳು.

ಇರುಳೂ ಲಕ್ಷ್ಮಿ ಗಂಜಿಯನ್ನು ಒಯ್ದು ನಾಯಕನಿಗೆ ಬಡಿಸಲಿಲ್ಲ. ತಂಗಿಯ ವಶದಲ್ಲಿಯೇ ಕೊಟ್ಟು ಕಳುಹಿಸಿದಳು. ಪುಟ್ಟ ಪಾಪಾತಿ ಏಕೆ ಬರಲಿಲ್ಲವೆಂದು ಅವನಿಗೆ ಆಶ್ಚರ್ಯವಾಯಿತು. ಅವನು "ಮರಿ ಪಾಪಾತಿ ದೊಡ್ಡ ಪಾಪಾತಿ ಏಕೆ ಬರಲಿಲ್ಲ?" ಎಂದು ಚಿರುತೆಯನ್ನು ಕೇಳಿದ.

"ಅಕ್ಕನಿಗೇನೋ ಕೆಲಸ. ಅವಳು ನನ್ನ ವಶಕೊಟ್ಟು ಕಳುಹಿಸಿ ದಳು." ಚಿರುತೆ ಮಾರ್ನುಡಿದಳು: "ಆಕೆಯೇ ತಂದು ಕೊಡಬೇಕಿತ್ತೇ?"

"ಹಾಗೇನೂ ಇಲ್ಲ." ನಾಯಕ ಉಲಿದ. ಆದರೆ ಅವನ ದನಿ ಯಲ್ಲಿ ಬೇಸರವಿತ್ತು. ಅವನಿಗೆ ಗಂಜಿ ಬೆಳಗಿನಷ್ಟು ಸವಿಯಾಗಿ ತೋರ ಲಿಲ್ಲ. ಗಂಜಿಯ ಸವಿಯನ್ನು ಹೆಚ್ಚಿಸಲು ಪುಟ್ಟ ಪಾಪಾತಿಯ ಕಣ್ಣುಗಳ ಹೊಳಪು ಇರಲಿಲ್ಲ.

ಇರಳು ಊಟ ಮುಗಿದ ಮೇಲೆ ಚಿರುತೆ ಅತ್ತೆಮಾವಂದಿರ ಹಾಸಿಗೆ ದುಪ್ಪಟಿಗಳನ್ನು ಕೊಡಹಿ ಸರಿಪಡಿಸಿದ್ದಳು. ಅಲ್ಲಿಗೆ ಮಾವ ಚಿತ್ತೈಸಿದರು. ಅವರು, "ಲಕ್ಷ್ಮೀ, ನೀನು ನಾಯಕನಿಗೆ ಮದ್ದು ಮತ್ತು ಮಾತ್ರೆಗಳನ್ನು

ಕೊಟ್ಟೆಯಾ ? " ಎಂದು ಸೊಸೆಯನ್ನು ಕೇಳಿದರು.

ಆನೆಕಾರನಿಗೆ ಮದ್ದನ್ನು ಕೊಡುವ ಕೆಲಸ ಲಕ್ಷ್ಮಿಗೆ ಮರೆತು ಹೋಗಿತ್ತು. ಈಗ ಮಾವ ಹೇಳಿದುದರಿಂದ ಅವಳಿಗೆ ನೆನಪಾಯಿತು. ಅವಳು, "ಇಲ್ಲ ಮಾವ. ಹಾಸಿಗೆಗಳನ್ನು ಹಾಸಿಯಾದ ಮೇಲೆ ಕೊಟ್ಟು ಬರುವೆನು." ಎಂದು ಮಾರ್ನುಡಿದಳು.

ಈಗ ನಾಯಕನ ಸನಿಹದಲ್ಲಿ ಸುಳಿಯಲು ಅವಳ ಮನಸ್ಸು ಅಂಜಿತು. ತಾನು ಸಂಯಮದ ಅಂಕೆಯನ್ನು ಮೀರಿ ಎಲ್ಲಿ ಕೆಳಗಿನ ಹಳ್ಳಕ್ಕೆ ಉರುಳುವೆನೋ ಎಂದು ಅವಳ ಜೀವ ಹೈರಣಗೊಂಡಿತು. ಅವಳು ಅತ್ತೆ ಮಾವಂದಿರ ಹಾಸಿಗೆಗಳನ್ನು ಸರಿಪಡಿಸಿಯಾದ ಮೇಲೆ ಮದ್ದು ಮಾತ್ರೆಗಳನ್ನು ಕಳುಹಿಸಿಕೊಡಲು ತಂಗಿಯನ್ನು ಕರೆದಳು. ಆದರೆ ಚಿರುತೆಯು ಒಡಲಿಗೆ ಕೂಳು ಬಿದ್ದೊಡನೆಯೇ ಆಕೆಯ ಕಣ್ಣುಗಳು ಭಾರವಾಗಿದ್ದುವು. ಈಗಲೇ ಅವಳು ನೆಲದ ಮೇಲೆ ಹೊರಳಿ ನಿದ್ದಿಸುತಿದ್ದಳು. ಲಕ್ಷ್ಮಿಯೇ ಮದ್ದು ಮಾತ್ರೆಗಳನ್ನು ಎತ್ತಿಕೊಂಡು ಪತ್ತಾಯಪುರೆಗೆ ಹೊರಟಳು.

ಈಗ ಪತ್ತಾಯಪುರೆಯಲ್ಲಿ ಚಿರಿಕಂಟ ನಾಯಕನ ಎಚ್ಚರಿಕೆ ನೋಡಿಕೊಳ್ಳಲೆಂದು ಮಲಗುತ್ತಿರಲಿಲ್ಲ. ನಾಯಕನ ಬೇನೆ ಗುಣಮುಖವಾಗಿತ್ತು. ಚಿರಿಕಂಟ ಮಡದಿಮಕ್ಕಳುಗಳುಳ್ಳವನಾದುದರಿಂದ ಹಗಲೆಲ್ಲ ಯಜಮಾನನ ಮನೆಯಲ್ಲಿ ದುಡಿದು ಇರುಳು ತನ್ನ ಗುಡಿಸಲಿಗೆ ಹೋಗುತ್ತಿದ್ದ.

ನಾಯಕನಿಗೆ ಲಕ್ಷ್ಮಿಯ ಹೆಜ್ಜೆಗಳ ಸದ್ದು ಕೇಳಿಸಿತು. ಅವನು ಮಲಗಿದಲ್ಲಿಂದ ಎದ್ದು ಕುಳಿತ. ಲಾಂದ್ರದ ಬೆಳಕು ಕೋಣೆಯೊಳಗೆ ತುಂಬಿದ ಕತ್ತಲೆಯನ್ನು ಹೊರಗಟ್ಟುತಿದ್ದಿತು. ಕೈಯಲ್ಲಿ ಮದ್ದಿನ ಶೀಸೆ ಮತ್ತು ಔನ್ಸು ಗ್ಲಾಸುಗಗನ್ನು ಹಿಡಿದುಕೊಂಡು ಲಕ್ಷ್ಮಿ ಪತ್ತಾಯಪುರೆಯೊಳಗೆ ನುಗ್ಗಿದಳು.

"ಪಾಪಾತಿ, ನನಗೆ ಮದ್ದು ಕುಡಿಸುವ ನೇಮವನ್ನು ನೀವು ಇಂದಾದರೂ ಬಿಡುವಿರೋ ಎಂದು ನಾನು ಆಲೋಚಿಸುತಿದ್ದೆ." ನಾಯಕ ಉಸುರಿದ: "ಈಗ ಮದ್ದು ಕುಡಿದರೆ ಬೆಳಗಿನ ತನಕ ಬಾಯಿಯ ಕಹಿ ಹೋಗುವುದಿಲ್ಲ."

" ನಾಯಕ, ಮದ್ದು ಅಷ್ಟು ಕಹಿಯೇ ? "

" ಪಾಪಾತಿ, ನೀವು ಬಾಯಿಯೊಳಗೆ ಒಂದು ತೊಟ್ಟು ಹಾಕಿ ನೋಡಿ. ಆಗ ತಿಳಿಯುವುದು ಮದ್ದಿನ ಗುಣ. "

ಲಕ್ಷ್ಮಿ ಮದ್ದಿನ ಸೀಸೆಯ ಬಿರುಡೆಯನ್ನು ತೆಗೆದು ಒಂದು ಹನಿಯನ್ನು ಅಂಗೈಗೆ ತೊಟಕಿಸಿದಳು. ಅದನ್ನು ನಾಲಗೆಯ ತುದಿಯಿಂದ ನೆಕ್ಕಿದಳು. ಮದ್ದು ನಾಲಗೆಯನ್ನು ಸೋಂಕಿದೊಡನೆ ಅವಳ ಮುಖ ವಿಕಾರವಾಯಿತು. ಅದು ಅಷ್ಟು ಕಹಿಯಾಗಿತ್ತು.

" ನಿಜ. ಮದ್ದು ಕಾಳಕೂಟದಷ್ಟು ಕಹಿ. ನಿನಗೆ ಒಂದಿಷ್ಟು ಎಲೆ ಅಡಿಕೆಗಳನ್ನು ತಂದು ಕೊಡುವೆನು. ಮದ್ದು ಕುಡಿದಾದ ಮೇಲೆ ನೀನು ಅವನ್ನು ಮೆಲ್ಲುವೆಯಂತೆ. "

" ನೀವು ಎಲೆ ಅಡಿಕೆಗಳನ್ನು ತಂದು ಕೊಟ್ಟರೆ ಹಿರಿಯ ಉಪಕಾರ ವಾಗುವುದು. " ನಾಯಕ ಪಡಿನುಡಿದ: " ನಾನು ಎಲೆ ಅಡಿಕೆಗಳ ರುಚಿ ನೋಡದೆ ಹತ್ತೆಂಟು ದಿನಗಳಾಗಿ ಹೋದುವು. "

ಲಕ್ಷ್ಮಿ ಮರಳಿ ಮನೆಗೆ ಹೋಗಿ ಎಲೆ ಅಡಿಕೆ ಸುಣ್ಣಗಳನ್ನು ತಂದಳು. ನಾಯಕ, "ಇಲ್ಲಿ ತನ್ನಿ, ಪಾಪಾತಿ" ಎಂದು ಕೈ ಚಾಚಿದ.

" ನಿಲ್ಲು. ನೀನು ಮೊದಲು ಮದ್ದು ಕುಡಿಯುವಿಯಂತೆ. ಆ ಮೇಲೆ ಎಲೆ ಅಡಿಕೆಗಳನ್ನು ಕೊಡುವೆನು. " ಎಂದು ನುಡಿದು ಶೀಸೆಯ ಮದ್ದನ್ನು ಔನ್ಸ್‌ಗ್ಲಾಸಿಗೆ ಬಗ್ಗಿಸಿ ನಾಯಕನಿಗೆ ಕೊಟ್ಟಳು. ಅವನು ಮದ್ದನ್ನು ಕೇಳಿಕೊಂಡು ತುಟಿವಿಡೆಗೆ ಒಯ್ದ. ಲಕ್ಷ್ಮಿ ಎರಡು ವೀಳ್ಯದೆಲೆಗಳಿಗೆ ಸುಣ್ಣ ಹಚ್ಚಿ ಜತೆಗೆ ಅಡಿಕೆ ಸೇರಿಸಿದಳು. ನಾಯಕ ಮುಖವನ್ನು ಸಿಂಡರಿಸಿಕೊಂಡು ಔಷಧಿಯನ್ನು ಕುಡಿದ. ಲಕ್ಷ್ಮಿ ತಾನು ಮಡಚಿ ಹಿಡಿದುಕೊಂಡ ತಾಂಬೂಲವನ್ನು ನಾಯಕನ ಕೈಗೆ ಕೊಟ್ಟಳು.

" ಪಾಪಾತಿ, ನೀವೇ ಎಲೆ ಸುಣ್ಣಹಚ್ಚಿ ನನ್ನ ಕೈಗೆ ಹಾಕಿದರಲ್ಲ? " ನಾಯಕ ಕೇಳಿದ.

" ನಾಯಕ ಕೊಡಬಾರದೇ? "

" ಹಾಗೆ ಕೊಟ್ಟರೆ ನಮ್ಮ ಕುರುಬ ಜಾತಿಯಲ್ಲಿ ಅದು ಏನು ಅರ್ಥ ವಾಗುವುದೆಂಬುದನ್ನು ಬಲ್ಲಿರಾ? "

"ಏನು ಅರ್ಥ?"

"ಅದು ಪ್ರೀತಿಯ ಗುರುತು. ಹೆಣ್ಣು ತಾನು ಒಲಿದ ಗಂಡಿಗೆ ಎಲೆಗೆ ಸುಣ್ಣ ಹಚ್ಚಿಕೊಡುವುದು."

ನಾಯಕನ ಮಾತು ಕೇಳಿ ಲಕ್ಷ್ಮಿಯ ಮೋರೆ ಕೆಂಪೇರಿತು. ಅವಳು ಮಧ್ಯಾಹ್ನದಿಂದಲೇ ಮನಸ್ಸಿನೊಳಗೆ ಅದು ಮಾಡಿದ್ದ ಬಯಕೆ ಈಗ ಮೇಲೆದ್ದು ಬಂದಿತು. ಅವಳು, "ನಾಯಕ, ನಾನು ಪ್ರೀತಿಯಿಂದಲೇ ನಿನಗೆ ತಾಂಬೂಲ ಕೊಟ್ಟೆನೆಂದು ತಿಳಿದುಕೋ." ಎಂದು ತಗ್ಗಿದ ದನಿಯಲ್ಲಿ ಹೇಳಿದಳು.

"ಪ್ರೀತಿಯೇ!" ನಾಯಕ ಎವೆ ಮುಚ್ಚದೆ ಬೆರಗುಗಣ್ಣುಗಳಿಂದ ಪಾಪಾತಿಯ ಮೋರೆಯನ್ನು ನಿಟ್ಟಿಸಿ ನೋಡಿದ. ಆಕೆಯ ನೀರು ತುಂಬಿದ ಕಣ್ಣುಗಳು ಅಮವಾಸಿಯ ಇರುಳು ಆಗಸದಲ್ಲಿ ತೋರುವ ಚಿಕ್ಕೆಗಳಂತೆ ಮಿನುಗಿದುವು.

"ಹೌದು, ನಾಯಕ!" ಲಕ್ಷ್ಮಿಯ ಶಕ್ತಿ ಎಲ್ಲ ಉಡುಗಿ ಹೋಯಿತು. ಅವಳು ಕುರುಬ ಹುಡುಗನ ಮೈಮೇಲೆ ಕುಸಿದಳು. ಆಕೆಯ ಎರಡು ತೋಳುಗಳು ಕುರುಬನ ಕೊರಳನ್ನು ಬಳಸಿದುವು.

"ಪಾಪಾತಿ, ನಾನು ಕುರುಬ; ನೀವು ಪಾಪಾತಿ!"

"ನಾಯಕ, ನನ್ನ ಎದೆಯ ಅಳಲನ್ನು ನೀನು ಅರಿಯಲಾರೆ. ಈ ಪಾಪಾತಿತನ ನನಗೆ ಬೇಡದ ಹೊರೆಯಾಗಿದೆ!" ಲಕ್ಷ್ಮಿ ಬಿಕ್ಕುದನಿಯಲ್ಲಿ ಉಸುರಿದಳು. "ನೀನು ಒಪ್ಪುವುದಾದರೆ ನಾನು ಕುರುಬಿತಿಯಾಗುತ್ತೇನೆ!"

"ಆದರೆ ಪಾಪ ಉಣಿಸಿದ ಉಪ್ಪಿಗೆ ನಾನು ಕೇಡು ಬಗೆದಂತಾಗುವುದು."

"ಕೇಡಲ್ಲ. ನೀನು ಕೂಳಿಗೋಸ್ಕರ ಬೆವರು ಹರಸಿ ದುಡಿದಿದ್ದೀಯೆ!" ಲಕ್ಷ್ಮಿ ನುಡಿದಳು: "ನೀನು ಒಲ್ಲೆನೆಂದರೆ ನಾನು ಹೊಳೆಯಲ್ಲಿ ಬಿದ್ದು ಪ್ರಾಣವನ್ನು ಕಳೆದುಕೊಳ್ಳುವೆನು!"

"ಆದರೆ ನಿಮಗೊಬ್ಬ ಒಡೆಯನಿದ್ದಾನಲ್ಲ!"

"ಆತ ಇದ್ದರೂ ನನ್ನ ಪಾಲಿಗೆ ಸತ್ತಂತೆ."

"ಪಾಪಾತಿ, ನನಗೆ ದಿಗಿಲಾಗುವುದು"

"ನೀನು ಹೇಳಿದಲ್ಲಿಗೆ, ದೂರ-ಬಹುದೂರ ಬರುವೆನು. ನಿನ್ನ ಕೂದಲು ಕೊಂಕದಂತೆ ನೋಡಿಕೊಳ್ಳುವೆನು."

ಕುರುಬ ಹುಡುಗನ ಬುದ್ಧಿ ಆಲೋಚಿಸದಾಯಿತು. ಅವನ ಕೊರಳನ್ನು ಸುತ್ತಿದ ತೋಳ ಸೋಂಕು ಅವನಿಗೆ ಸುಖಾನುಭವವನ್ನು ಒದವಿಸಿತು. ಹೆಣ್ಣು ಮೈಯ ಬಿಸಿಗೆ ಅವನ ಧೃಢತೆ ಎಲ್ಲ ಕರಗಿ ನೀರಾಯಿತು. ಅವನು ತನ್ನ ಮೈಮೇಲಿದ್ದ ತೋಳನ್ನು ಕಿತ್ತೆಸೆಯಲಿಲ್ಲ. ಅವನು ಬೆರಳುಗಳಿಂದ ಮಿದುವಾಗಿ ಲಕ್ಷ್ಮಿಯ ಬಿಚ್ಚಿದ ತುರುಬನ್ನು ನೇವರಿಸಿದ. ಆ ಸೋಂಕು ಅವಳ ಅಂತರಂಗದಲ್ಲಿ ನಲವಿನ ತೊರೆಯನ್ನು ಹರಿಯಿಸಿತು.

ಲಕ್ಷ್ಮಿ ನಾಯಕನ ಮೋರೆಯ ಹತ್ತಿರಕ್ಕೆ ತನ್ನ ತುಟಿಗಳನ್ನು ತಂದಳು. ನಾಯಕ ಅವಳನ್ನು ತಡೆಯಲಿಲ್ಲ. ಆಕೆಯ ಹಸಿದ ತುಟಿಗಳು ಅವನ ತುಟಿಗಳ ಜತೆಯಲ್ಲಿ ಮೇಳವಿಸಿದುವು. ಅವನ ದೇಹದಲ್ಲಿ ವಿದ್ಯುತ್ಸಂಚಾರವಾಯಿತು. ಅವನ ಬುದ್ಧಿ ವಿವೇಕದ ಅಂಕೆಯಿಂದ ತಪ್ಪಿಸಿಕೊಂಡಿತು. ತನ್ನ ಸೊರಗಿದ ತೋಳುಗಳಿಂದ ಆಕೆಯನ್ನು ತನ್ನ ಎದೆಗೆ ಅಪ್ಪಿಕೊಂಡ. ಹೆಣ್ಣು ಮೈಯ ಸ್ಪರ್ಶ ನೂತನವಾದ ಒಂದು ಜಗತ್ತಿನೆಡೆಗೆ ಅವನನ್ನು ಒಯ್ದಿತು.

## ೧೫

ಮರುದಿನ ಮುಂಜಾನೆ ಲಕ್ಷ್ಮಿ ಎಳೆಯ ಚಿಗುರಿನಂತೆ ಉತ್ಸಾಹಭರಿತಳಾಗಿದ್ದಳು. ಲವಲವಿಕೆ ಅವಳ ಅಂಗಾಂಗಗಳಲ್ಲಿ ಹಬ್ಬಿ ದಾಂಗುಡಿಗಳನ್ನು ಹೊರಚೆಲ್ಲುತ್ತಿದ್ದಿತು. ಅವಳ ಕಣ್ಣುಗಳಿಂದ ಸಂತಸದ ತನಿಬೆಳಕು ಹೊರಚೆಲ್ಲುತ್ತಿದ್ದಿತು. ಅಕ್ಕನ ಈ ಉಲ್ಲಾಸವನ್ನು ಕಂಡು ಚಿರುತೆಗೆ ಆಶ್ಚರ್ಯವಾಯಿತು. ಅವಳು ಬೆಳಗಿನ ಫಲಾಹಾರವನ್ನು ಮುಗಿಸಿಯಾದ ಮೇಲೆ ಅಕ್ಕನನ್ನು ಸಮೀಪಿಸಿ, "ಅಕ್ಕ, ಇದೇನೇ ಇಷ್ಟೊಂದು ಉಲ್ಲಾಸದಲ್ಲಿರುವೆ? ಹಕ್ಕಿಯ ಹಾಗೆ ಹಗುರವಾಗಿದ್ದೀಯಲ್ಲೇ?" ಎಂದು ಕೇಳಿದಳು.

“ ನೀನು ಮದುವೆಯಾಗಬೇಕೆಂದಿದ್ದ ನಾಯಕನನ್ನು ನಾನು ಗೆದ್ದೆ ಕಣೇ ! ” ಎಂಥು ಹೇಳಬೇಕೆಂದು ಲಕ್ಷ್ಮಿ ಬಾಯ್ದೆರೆದಳು. ಆದರೆ ಸ್ಫುರಿಸಿ ಹೊಳೆದ ವಿವೇಕ ಅವಳನ್ನು ಎಚ್ಚರಿಸಿತು. ಅವಳು ನಾಲಗೆ ತುದಿಗೆ ಬಂದ ಮಾತನ್ನು ತಡೆದು ತುಟಿ ಕಚ್ಚಿಕೊಂಡಳು. ಅವಳು, “ ಚಿರುತೆ, ನಾನು ನಗುತ್ತಿರುವುದನ್ನು ನೋಡಿ ನಿನಗೆ ಹೊಟ್ಟೆ ಉರಿಯಿತೇನೆ ? ನಾನು ಯಾವಾಗಲೂ ಅಳು ಮೋರೆ ಮಾಡಿಕೊಂಡಿರಬೇಕೆ ?” ಎಂದು ತಂಗಿಗೆ ಕೇಳಿದಳು.

“ ಅಕ್ಕ, ನೀನು ಯಾವಾಗಲೂ ನನ್ನ ಮೇಲೆ ಮುನಿದೆರಗುವೆಯಲ್ಲ ! ” ಚಿರುತೆ ನೊಂದ ದನಿಯಲ್ಲಿ ಉಸುರಿದಳು: “ನೀನು ಯಾವಾಗಲೂ ಹೀಗೆ ಏಕೆ ನಗುತ್ತಿರುವದಿಲ್ಲ ಎಂದು ಆಲೋಚಿಸುತಿದ್ದೆ. ಕಳೆದ ಎಂಟು ಹತ್ತು ದಿನಗಳಲ್ಲಿ ನಾನು ನಿನ್ನ ಮೋರೆಯ ಮೇಲೆ ಒಂದೇ ಒಂದು ನಗುವನ್ನು ಕಾಣಲಿಲ್ಲ. ನೀನು ಹೀಗೆ ನಗುತ್ತಾ ನಿಂತರೆ ಎಷ್ಟು ಚಂದ ಕಾಣಿಸುತ್ತಿಯೆ ! ಕನ್ನಡಿ ತಂದು ತೋರಿಸಲಾ ? ”

ತಂಗಿಯ ಮಾತು ಕೇಳಿದ ಮೇಲೆ ಲಕ್ಷ್ಮಿಯ ಎದೆ ಆರ್ದ್ರವಾಯಿತು. ಮುಗ್ಧ ಬಾಲಿಕೆಯೆನ್ನು ಅಕಾರಣವಾಗಿ ಗದರಿಸಿದೆನಲ್ಲ ಎಂದು ಅವಳು ಬೇಸರಪಟ್ಟುಕೊಂಡಳು. ಅವಳು ತಂಗಿಯ ಕೈ ಹಿಡಿದು ಬೆನ್ನು ಸವರಿದಳು. ಅವಳು, “ ಚಿರುತೆ, ಇಲ್ಲ. ನಾನು ಇನ್ನು ಮುಂದೆ ನಿನ್ನನ್ನು ಗದರಿಸುವುದಿಲ್ಲ; ಅಳುಮೋರೆ ಮಾಡಿಕೊಂಡಿರುವುದಿಲ್ಲ. ಯಾವಾಗಲೂ ನಗುನಗುತ್ತಾ ಇರುವೆನು. ” ಎಂದು ಹೇಳಿದಳು.

ಆ ದಿನ ಲಕ್ಷ್ಮಿಯ ಹೆಸರಿನಲ್ಲಿ ಸರಕಾರದ ರಕ್ಷಣಾಖಾತೆಯಿಂದ ಒಂದು ಪತ್ರ ಬಂತು. ಸೊಸೆಗೆ ಸರಕಾರದಿಂದ ಪತ್ರ ಬರಲು ಕಾರಣವೇನೆಂದು ಮಾವನಿಗೆ ಕೌತುಕವಾಯಿತು. ಅವರು ಅಂಚೆಯ ಪೇದೆಯಿಂದ ಪತ್ರವನ್ನು ತೆಗೆದುಕೊಂಡು ಓದಿ ನೋಡಿದರು. ಆ ಓಲೆಯಲ್ಲಿ ಅಧಿಕಾರಿಗಳು “ಲಕ್ಷ್ಮಿಯ ಗಂಡ ರಾಮುಣ್ಣಿನಾಯರ ಬರ್ಮ ಯುದ್ಧಮುಖದಲ್ಲಿ ಹಗೆಗಳ ಬಾಂಬು ಧಾಳಿಗೆ ಒಳಗಾಗಿ ಮಡಿದನೆಂದು ತಿಳಿಸಲು ವಿಷಾದಿಸುತ್ತೇವೆ. ” ಎಂದು ತಿಳಿಸಿದ್ದರು. ಕಾಗದವನ್ನು ಓದಿದ ಮೇಲೆ ಮಾವನ ಮೋರೆ ಒಂದು ಕ್ಷಣ ಗಂಭೀರವಾಯಿತು.

"ಏನು ಸಮಾಚಾರ ?" ಕಾಗದದ ಸುದ್ದಿಯನ್ನು ಗಂಡ ಅರುಹ ದುದನ್ನು ನೋಡಿ ಅತ್ತೆ ಕೇಳಿದಳು.

"ಲಕ್ಷ್ಮಿಯ ಗಂಡ ಮಡಿದನಂತೆ."

"ಹೇಗೆ?"

"ಯುದ್ಧದಲ್ಲಿ. ರಂಗೂನಿನ ಮೇಲೆ ಜಪಾನಿಯರು ನಡೆಸಿದ ಧಾಳಿಯಲ್ಲಿ ಬಾಂಬಿನ ಎಸೆತಕ್ಕೆ ಸಿಕ್ಕಿ ಮೃತನಾದನಂತೆ."

"ಅಯ್ಯೋ! ಲಕ್ಷ್ಮಿಯ ಹಣೆಬರಹ ಯಾವಾಗಲೂ ಸೊಟ್ಟಗೆ! ಇಲ್ಲದಿದ್ದರೆ ತಿಂಗಳಿಗೆ ನೂರು ರೂಪಾಯಿ ಸಂಬಳ ಸಿಕ್ಕುವ ಉದ್ಯೋಗ ವನ್ನು ಬಿಟ್ಟು ಆತ ದಂಡಿಗೆ ಸೇರುತಿದ್ದನೇ ?"

"ನಾನೇ ಆತನನ್ನು ಬಾಂಬಿಗೆ ಬಲಿಕೊಟ್ಟ ಹಾಗಾಯಿತು." ಮಾವ ಪೇರುಸಿರೊಂದನ್ನು ಹೊರಚೆಲ್ಲಿದರು.

"ಅದೇಕೆ ಹಾಗೆ ಹೇಳುವಿರಿ ?"

"ಅವನಿಗೆ ಕೇಳಿದಷ್ಟು ರೊಕ್ಕ ಕೊಟ್ಟಿದ್ದರೆ ದಂಡಿಗೆ ಸೇರುತ್ತಿರ ಲಿಲ್ಲ; ಸಾಯುತ್ತಲೂ ಇರಲಿಲ್ಲ."

"ಈಗ ಅತ್ತೇನು ಪ್ರಯೋಜನ ? ಆತನ ಹಣೆಯಲ್ಲಿ ಹಾಗೆ ಬರೆ ದಿತ್ತು." ಎಂದು ನುಡಿದು ಅತ್ತೆ ಸುಮ್ಮನಾದಳು.

ತನ್ನ ಗಂಡ ಮಡಿದ ಸುದ್ದಿ ಲಕ್ಷ್ಮಿಯ ಕಿವಿಗೂ ಬಿದ್ದಿತು. ಆತ ಮಡಿದನೆಂದು ಅವಳಿಗೇನೂ ದುಃಖವಾಗಲಿಲ್ಲ. ಆಕೆಯ ಎದೆಗೆ ಆತ ಒಲವಿನ ಸವಿನೀರನ್ನು ಎರೆದು ಕೊರಗಿಸಿದ್ದರಲ್ಲವೇ ಅವಳ ಜೀವ ತನ್ನ ಬಾಳು ಬರಿದಾಯಿತೆಂದು ಮರುಗುವುದು? ಆ ಪುಣ್ಯಾತ್ಮ ಆಕೆಯ ಹೃದಯದಲ್ಲಿ ಪ್ರೇಮದ ಬದಲು ಭಯವನ್ನೇ ಕೊನರಿಸಿದ್ದ. ಈಗ ಆ ಭೀತಿಯ ದುಸ್ವಪ್ನ ಮರೆಯಾಯಿತಲ್ಲ ಎಂದು ಅವಳ ಮನಸ್ಸು ಒಂದು ನಿಶ್ವಾಸವನ್ನು ಹೊರಚೆಲ್ಲಿತು. ಆದರೆ ಜನವನ್ನು ಮೆಚ್ಚಿಸಲು ದುಃಖದ ಸೋಗನ್ನು ತಳೆಯಬೇಕು; ಕಣ್ಣೀರು ಕರೆಯಬೇಕು. ಇಲ್ಲದಿದ್ದರೆ ಗಂಡ ಸತ್ತಾಗಲೂ ಕಣ್ಣೀರು ಹಾಕದಿದ್ದ ದಿಟ್ಟೆ ಎಂದು ಜನ ನಿಂದಿಸಿಯಾರು!

ಲಕ್ಷ್ಮಿ ಗಂಡ ಸತ್ತ ಸೂತಕವನ್ನು ಆಚರಿಸಿದಳು. ಮಾವ ಹದಿ ನಾಲ್ಕನೆಯ ದಿನ ಸತ್ತವನ ಅಪರಕರ್ಮಗಳನ್ನು ಮಾಡಿಸಿದರು. ಅವರು

ಸಮಾರಾಧನೆ ನಡೆಸಿ ಬ್ರಾಹ್ಮಣರಿಗೆಲ್ಲ ದಕ್ಷಿಣೆ ಕೊಟ್ಟರು.

ಈಗ ನಾಯಕ ಎದ್ದು ಓಡಾಡಿ ಕೆಲಸಮಾಡುವಂತಾಗಿದ್ದ. ಅವನು ಶಂಕರನನ್ನು ಮೇವಿಗೆಂದು ಅಡವಿಗೆ ಒಯ್ಯುತಿದ; ಆನೆಯ ಸೇವೆ ಶುಶ್ರೂಷೆಗಳನ್ನು ಮಾಡುತಿದ್ದ. ನಾಯಕ ಆನೆಯನ್ನು ನೋಡಿಕೊಳ್ಳು ವಂತಾದುದನ್ನು ಕಂಡು ಎಲ್ಲರಿಗಿಂತೂ ಚಿರುತೆಗೆ ಹೆಚ್ಚು ಹಿಗ್ಗು. ಪ್ರತಿ ದಿನ ಸಂಜೆ ಆತ ಆನೆಯನ್ನು ಮೀಹಕ್ಕೆ ಹೊಳೆಗೆ ಒಯ್ಯುವ ಮುನ್ನ ಆಕೆಯನ್ನು ಆನೆಯ ಬೆನ್ನ ಮೇಲೆ ಕುಳ್ಳಿರಿಸಿ ಕಳದಲ್ಲಿ ನಾಲ್ಕು ಸುತ್ತು ಸವಾರಿ ಮಾಡಿಸುತಿದ್ದ.

ಒಂದು ದಿನ ಸಂಜೆ ಚಿರುತೆಯನ್ನು ಆನೆಯ ಬೆನ್ನ ಮೇಲೆ ಕುಳ್ಳಿರಿಸಿ ಸವಾರಿ ಮಾಡಿಸುತಿದ್ದ. ಲಕ್ಷ್ಮಿ ಜಗಲಿಯಲ್ಲಿ ಕೈಯಲ್ಲೊಂದು ಪುಸ್ತಕ ವನ್ನು ಹಿಡಿದು ಕುಳಿತಿದ್ದಳು. ಚಿರುತೆ ಅಕ್ಕನನ್ನು ನೋಡಿ, "ಅಕ್ಕ, ನೀನೂ ಬಾ. ನಾವಿಬ್ಬರೂ ಜತೆಯಲ್ಲಿ ಕುಳಿತು ಸವಾರಿ ಮಾಡೋಣ." ಎಂದು ಕರೆದಳು.

ಬೇರೆ ಯಾರೂ ಇಲ್ಲದ ಎಡೆಯಾಗಿದರೆ ಲಕ್ಷ್ಮಿ ಸಂತೋಷದಿಂದ ಆನೆಯ ಬೆನ್ನ ಮೇಲೆ ಕುಳಿತು ಸವಾರಿ ಮಾಡುತಿದ್ದಳು. ಆದರೆ ಅತ್ತೆ ಜಗಲಿಯ ಮೇಲೆ ಕುಳಿತು ತಾಂಬೂಲವನ್ನು ಮೆಲ್ಲುತಿದಳು. ಅವರು ತನ್ನನ್ನು ಗದರಿಸಿಯಾರು ಎಂದು ಆಲೋಚಿಸಿ ಅವಳು ಸುಮ್ಮನಾದಳು.

ಚಿರುತೆ ಆಡಿದ ಮಾತು ತಾಂಬೂಲ ಮೆಲ್ಲುತಿದ್ದ ಅತ್ತೆಗೆ ಕೇಳಿಸಿತು. ಅವಳು, "ಗಂಡು ಬೀರಿ! ತಾನು ಕುರುಬ ಹುಡುಗನ ಜತೆಯಲ್ಲಿ ಆನೆಯ ಬೆನ್ನೇರಿ ಮೆರೆವುದು ಸಾಲದೆ ಅಕ್ಕನನ್ನು ಬೇರೆ ಕರೆಯುತಿದ್ದಾಳೆ. ನಿನ ಗೆಲ್ಲ ತರವಾಡು ಹೆಣ್ಣುಗಳ ಘನತೆ ಗಾಂಭೀರ್ಯಗಳು ಬರುವುದು ಯಾವಾಗಲೋ. ಶುದ್ಧ ಚೆಲ್ಲು!" ಎಂದು ಚಿರುತೆಯನ್ನು ಬೈದು ಗದರಿಸಿದಳು.

ಅತ್ತೆಯ ಗದರಿಕೆಯನ್ನು ಕೇಳಿ ಚಿರುತೆ ಆನೆಯ ಬೆನ್ನ ಮೇಲಿಂದಿಳಿ ದಳು. ನಾಯಕ ಲಕ್ಷ್ಮಿ ತಂದಿತ್ತ ಕಾಫಿಯನ್ನು ಕುಡಿದು ಆನೆಯನ್ನು ಮೀಯಿಸಲೆಂದು ಹೊಳೆಗೆ ಅಟ್ಟಿಕೊಂಡು ಹೋದ.

ಘಾಸೊಂದು ಕಳೆಯಿತು. ತೋಟಕ್ಕೆ ಹೋದ ಮಾವ ಮನೆಗೆ

ಮರಳಿ ಬರುವ ಹೊತ್ತಾಯಿತು. ಮನೆ ಜಗಲಿತುಂಬಾ ಕಸಕಡ್ಡಿಗಳು ಬಿದ್ದಿವೆ. ಜಗಲಿ ಕೊಳೆಯಾಗಿರುವದನ್ನು ಕಂಡರೆ ಮಾವ ರೇಗುವರು. ಸಾಮಾನು ತರಲೆಂದು ಮಾನಂದವಾಡಿಗೆ ಹೋದ ಮನೆಯಾಳು ಚಿರಿ ಕಂಟ ಮರಳಿ ಬಂದಿಲ್ಲ. ತಾನು ಗುಡಿಸಿ ಸ್ವಚ್ಛಗೊಳಿಸುವೆನೆಂದು ಲಕ್ಷ್ಮಿ ಆಲೋಚಿಸಿ ಕಸಬರಿಕೆಯನ್ನು ಎತ್ತಿಕೊಂಡು ಗುಡಿಸತೊಡಗಿದಳು. ಅವಳು ಹಜಾರ ಮತ್ತು ಜಗಲಿಗಳನ್ನು ಗುಡಿಸಿ ಮುಗಿಸುವಷ್ಟರಲ್ಲಿ ಮನೆ ಯೊಳಗಿಂದ ಅತ್ತೆ ಆಕೆಯನ್ನು ಕರೆದಳು.

ಲಕ್ಷ್ಮಿ ಕಸಬರಿಕೆಯನ್ನು ಮೂಲೆಯಲ್ಲಿರಿಸಿ, " ಏನತ್ತೆ ? " ಎಂದು ಕೇಳಿದಳು.

"ನೋಡು, ಬಾಳೆ ತೋಟದಲ್ಲಿ ಹಾಕಿದ ಕೆಸು ಚೆನ್ನಾಗಿ ಬೆಳೆದಿದೆ." ಅತ್ತೆ ಲಕ್ಷ್ಮಿಗೆ ಹೇಳಿದಳು: "ನೀನು ಹೋಗಿ ನಾಲ್ಕು ಎಲೆಗಳನ್ನು ಕಿತ್ತು ತಂದರೆ ಇರುಳು ಊಟಕ್ಕೆ ನಂಜಿಕೊಳ್ಳಲು ಚಟ್ನಿ ಮಾಡಬಹುದು. ಕೆಸು ವಿನೆಲೆ ಚಟ್ನಿ ಮಾಡದೆ ಬಹು ದಿನಗಳಾಗಿ ಹೋದುವು. "

ಅತ್ತೆ ಸೊಸೆಗೊಂದು ಕೆಲಸ ಕೊಟ್ಟಳು. ಲಕ್ಷ್ಮಿ ಕೈಯಲ್ಲೊಂದು ಪುಟ್ಟ ಕತ್ತಿಯನ್ನೆತ್ತಿಕೊಂಡು ಬಾಳೆಯ ತೋಟದೊಳಗೆ ನುಗ್ಗಿದಳು. ತೋಟದಲ್ಲಿ ಹತ್ತೆಂಟು ಮಾರು ದೂರ ನಡೆಯಲು ಅವಳಿಗೆ ಕೆಸುವಿನ ಪಾತಿ ಸಿಕ್ಕಿತು. ಪಾತಿಯಲ್ಲಿ ಕವಾಯತು ಮಾಡಲು ನಿಂತ ಸಿಪಾಯಿ ಗಳಂತೆ ಕೆಸುವಿನ ಗಿಡಗಳು ಸಾಲಾಗಿ ನಿಂತಿದ್ದುವು. ಸಂಜೆ ಸೂರ್ಯನ ಹೊಂಗಿರಣಗಳು ಲಾಸ್ಯವಾಡುತ್ತಿದ ಆ ಹಸಿರೆಲೆಗಳು ತಿಳಿ ರೇಶ್ಮೆಯ ಪತ್ತಲಗಳಂತೆ ತೋರುತ್ತಿದ್ದುವು. ಬಾಳೆ ಗಿಡಗಳಲ್ಲಿ ಕುಳಿತು ಚಿಲಿಪಿಲಿ ಗುಟ್ಟುವ ಹಕ್ಕಿಗಳ ಸವಿ ಹಾಡನ್ನು ಮೆಚ್ಚಿ ತಲೆಮಾಗುವಂತೆ ಆ ಎಲೆಗಳು ಗಾಳಿಗೆ ಸಿಲುಕಿ ಅಲುಗಾಡುತ್ತಿದ್ದುವು.

ಲಕ್ಷ್ಮಿ ಕತ್ತಿಯಿಂದ ಆರೆಂಟು ಕಸುವಿನ ದಂಟುಗಳನ್ನು ಕತ್ತರಿಸಿ ದಳು. ಅವುಗಳನ್ನು ಜತೆಗೂಡಿಸಿ ಬಾಳೆ ನಾರಿನಿಂದ ಕಟ್ಟಿದಳು. ಅಷ್ಟ ರಲ್ಲಿ ನಸುದೂರದಲ್ಲಿದ್ದ ಸಿಬೆ ಗಿಡ ಅಲುಗಾಡಿದ ಸದ್ದು ಕೇಳಿಸಿತು. ಅವಳು ತಲೆಯನ್ನು ಆ ಕಡೆ ತಿರುಗಿಸಿದಳು. ಪೇರಳೆ ಗಿಡದ ಕೊಂಬೆಯ ಮೇಲೆ ನಾಯಕನಿದ್ದ. ಆನೆಯನ್ನು ಮೀಯಿಸಿ ಆದ ಮೇಲೆ ಆತ ಬಾಳೆ

ದಿಂಡುಗಳನ್ನು ಕಡಿಯಲೆಂದು ಬಂದಿದ್ದ. ಅಲ್ಲಿ ಎತ್ತರದ ಸೀಬೆ ಗಿಡದ ಕೊಂಬೆಗಳಲ್ಲಿ ಹಣ್ಣುಗಳು ತೂಗಾಡುತಿದ್ದುವು. ಹಣ್ಣುಗಳನ್ನು ನೋಡಿ ನಾಯಕನ ಬಾಯಲ್ಲಿ ನೀರೂರಿತು. ಬಾಳೆ ದಿಂಡು ಕಡಿಯುವುದನ್ನು ಬಿಟ್ಟು ಅವನು ಗಿಡವನ್ನೇರಿ ಹಣ್ಣುಗಳನ್ನು ಕೀಳಲು ಹೊರಟಿದ್ದ. ಅವನು ಹಣ್ಣೊಂದನ್ನು ಕಿತ್ತು ಹಲ್ಲುಗಳ ಎಡೆಯಲ್ಲಿ ಕಚ್ಚಿ ಹಿಡಿದು ಇನ್ನೊಂದು ಹಣ್ಣನ್ನು ಕೀಳಲು ತೋಳು ಚಾಚಿದ.

ಲಕ್ಷ್ಮಿ ಪೇರಳೆ ಗಿಡದ ಕೊಂಬೆಯನ್ನು ಹಿಡಿದು ನೇಲುತ್ತಿದ್ದ ನಾಯಕನನ್ನು ನೋಡಿದಳು. ಅವಳು ಕೆಸುವಿನ ದಂಟುಗಳ ಕಟ್ಟನ್ನು ನೆಲದಮೇಲಿರಿಸಿ ಪೇರಳೆ ಗಿಡದೆಡೆಗೆ ಸಾಗಿದಳು. ಕಳಿತ ಹಣ್ಣುಗಳನ್ನು ಕಂಡು ಅವಳ ಬಾಯಲ್ಲಿಯೂ ನೀರೂರಿತು. ಆಕೆ ಗಿಡದಡಿಯಲ್ಲಿ ನಿಂತು "ನಾಯಕ, ನನಗೆ ಮಾಗಿದ ಹಣ್ಣುಗಳನ್ನು ಕಿತ್ತುಹಾಕು." ಎಂದು ಉಲಿದಳು.

"ನಿಲ್ಲಿ ಪಾಪಾತಿ, ಈ ಕೊಂಬೆಯಲ್ಲಿ ಸೊಗಸಾದ ಹಣ್ಣುಗಳಿವೆ. ಒಂದೊಂದು ಹಣ್ಣೂ ಪೇರಳೆಕಾಯಿಯಷ್ಟು ಗಾತ್ರವಾಗಿವೆ!" ಎಂದು ಹೇಳಲು ನಾಯಕ ಬಾಯ್ದೆರೆದ. ಅವನ ಹಲ್ಲುಗಳ ಎಡೆಯಲ್ಲಿದ್ದ ಹಣ್ಣು ಕೆಳಗುದುರಿತು. ಲಕ್ಷ್ಮಿ ಹಣ್ಣನ್ನು ಎತ್ತಿಕೊಂಡು ನೋಡಿದಳು. ನಾಲ್ಕು ಹಲ್ಲುಗಳು ಆ ಹಣ್ಣಿನ ಮೇಲೆ ಮೂಡಿದ್ದುವು. ಹಣ್ಣಿನ ಮೇಲೆ ಮೂಡಿದ ಹಲ್ಲುಗಳ ಗುರುತು ಅವಳ ಎದೆಯಲ್ಲಿ ಸವಿ ಭಾವವೊಂದನ್ನು ಮೂಡಿಸಿತು. ಅವನ ಹಲ್ಲುಗಳು ಹಣ್ಣಿನ ಸವಿಯನ್ನು ಇಮ್ಮಡಿಗೊಳಿಸಿರಬೇಕೆಂದು ಅವಳು ತನ್ನಲ್ಲಿಯೇ ಹೇಳಿಕೊಂಡಳು. ಅವಳು ಉಟ್ಟ ಪೊಡವೆಯ ತುದಿಯಿಂದ ಹಣ್ಣಿಗೆ ಅಂಟಿದ ಧೂಳನ್ನು ಒರೆಸಿ ತೆಗೆದಳು. ಹಣ್ಣನ್ನು ತುಟಿಗಳೆಡೆಗೆ ಒಯ್ದು ಹಲ್ಲುಗಳಿಂದ ಕಡಿದು ಮೆಲ್ಲಲಾರಂಭಿಸಿದಳು.

ನಾಯಕ ಪಾಪಾತಿ ಎಂಜಲು ಹಣ್ಣನ್ನು ಮೆಲ್ಲುವುದನ್ನು ನೋಡಿದ. ಅವನ ಮೋರೆ ಸೋಜಿಗದ ಆಗರವಾಯಿತು. ಅವನು ಬೆರಗು ತುಂಬಿದ ದನಿಯಲ್ಲಿ, "ಪಾಪಾತಿ, ನೀವೇನು ಮಾಡುತ್ತಿದ್ದಿರಿ ?" ಎಂದು ಕೇಳಿದ.

"ನಾನು ಕೆಳಗೆ ಹಾಕಿದ ಹಣ್ಣನ್ನು ಮೆಲ್ಲುತಿದ್ದೇನೆ."

"ಆದರೆ ಪಾಪಾತಿ ಅದು ನನ್ನ ಎಂಜಲು; ನನ್ನ ಬಾಯಿಯಿಂದ

ಬಿದ್ದುದು ! ''

'' ಅದು ಎಂಜಲೆಂದು ನನಗೆ ತಿಳಿಯಲೇ ಇಲ್ಲ. '' ಲಕ್ಷ್ಮಿ ಮೋರೆಯನ್ನು ಕೆಂಪು ಮಾಡಿಕೊಂಡು ಉಸುರಿದಳು. ಆದರೆ ಅವಳು ತಾನು ತಿನ್ನುತಿದ್ದ ಎಂಜಲು ಹಣ್ಣನ್ನು ದೂರ ಎಸೆಯಲಿಲ್ಲ.

ಚಿರುತೆ ಈ ವರೆಗೆ ಎಲ್ಲಿದ್ದಳೆನೋ. ಶಿವಪೂಜೆಯು ಎಡೆಗೆ ನುಗ್ಗಿದ ಸಿಂಗಳೀಕದಂತೆ ಅವಳು ಅಲ್ಲಿಗೆ ಬಂದಳು. ಅವಳು ಅಕ್ಕನ ಮೋರೆಯನ್ನು ನೋಡುತ್ತಾ, '' ಅಕ್ಕ, ಅಕ್ಕ, ನಿನ್ನ ಜಾತಿ ಹೋಯಿತು ! '' ಎಂದು ಗೆಲುವಿನ ದನಿಯಲ್ಲಿ ಕೂಗಿದಳು.

'' ಏಕೆ ಚಿರುತೆ ? '' ಲಜ್ಜೆಯ ದನಿಯಲ್ಲಿ ಕೇಳಿದಳು ಲಕ್ಷ್ಮಿ.

'' ನೀನು ನಾಯಕನ ಬಾಯಿಯಿಂದ ಉದುರಿದ ಎಂಜಲು ಹಣ್ಣು ತಿಂದೆ ! ''

'' ಸುಮ್ಮನೆ ಸುಳ್ಳು ಬೊಗುಳಬೇಡವೇ ?''

'' ಸುಳ್ಳಂತೆ ಸುಳು ! ನಾನು ಕಣ್ಣಾರೆ ಕಂಡೆ; ನಾಯಕ ಬೇರೆ ಅದು ಎಂಜಲು ಹಣ್ಣೆಂದು ಹೇಳುತ್ತಿದ್ದ. ನಿನ್ನ ಜಾತಿ ಹೋಯಿತು; ನೀನು ಇನ್ನು ಮುಂದೆ ಮನೆಯೊಳಗೆ ಬರಕೂಡದು ! ''

ಗಿಡದ ಕೊಂಬೆಯ ಮೇಲಿದ್ದ ನಾಯಕ ಈ ಕಿಲಾಡಿ ಹುಡುಗಿ ಪುಟ್ಟಪಾಪಾತಿ ಎಂಜಲ ಹಣ್ಣು ತಿಂದಳೆಂದು ತೊಡಿಯಲ್ಲಿ ಚಾಡಿ ಹೇಳಿದರೆ ದೊಡ್ಡ ರಾಮರಂಪ ಏಳುವುದೆಂದು ಆಲೋಚಿಸಿದ. ಅವನು ಬೇರೊಂದು ಹಣ್ಣು ತೆಗೆದು ಚಿರುತೆಯ ಕಡೆ ಬೆನ್ನು ಹಾಕಿ ಹಲ್ಲುಗಳಿಂದ ಕಡಿದು ಕೆಳಗೆ ಹಾಕಿದ. '' ಹೋ ! ಕೈಯಿಂದ ಹಣ್ಣು ಜಾರಿಬಿತ್ತು ! '' ಎಂದು ಉದ್ಗಾರವೆತ್ತಿದ.

ಚಿರುತೆ ಆಸೆಯಿಂದ ಬಿದ್ದ ಹಣ್ಣನ್ನು ಹೆಕ್ಕಿಕೊಂಡಳು. ಹಣ್ಣಿಗಂಟಿದ ಮಣ್ಣಿನ ಕಣಗಳನ್ನು ತೊಡೆಯುವ ಗೋಜಿಗೆ ಹೋಗಲಿಲ್ಲ. ಅವಳು ಹಣ್ಣನ್ನು ತುಟಿಯ ಮೇಲೆರಿಸಿ ಹಲ್ಲುಗಳಿಂದ ಕಡಿದು ಜಗಿಯಲಾರಂಭಿಸಿದಳು.

ಹಣ್ಣಿನ ಮೇಲೆ ಮೂಡಿದ ಹಲ್ಲುಗಳ ಗುರುತನ್ನು ಲಕ್ಷ್ಮಿಯ ಕಣ್ಣುಗಳು ಕಾಣದೆ ಹೋಗಲಿಲ್ಲ. ಚಿರುತೆ ಹಣ್ಣನ್ನು ಬಾಯಿಗೆ ಹಾಕಿ

ಕೊಂಡಡನೆ ಅವಳು, " ಚಿರುತೆ, ಈಗ ನಿನ್ನ ಜಾತಿ ಹೋಯಿತು !" ಎಂದು ನಗುತ್ತಾ ಹೇಳಿದಳು.

" ಏಕೆ ? ನಾನು ನಿನ್ನ ಹಾಗೆ ನಾಯಕನ ಎಂಜಲನ್ನು ತಿನ್ನಲಿಲ್ಲ."

" ನಿನ್ನ ಕೈಯಲ್ಲಿರುವುದು ಎಂಜಲು ಹಣ್ಣು !"

" ಸುಳ್ಳು. "

" ಅಲ್ಲಿ ನೋಡು, ಹಣ್ಣಿನ ಮೇಲೆ ನಾಯಕನ ಹಲ್ಲುಗಳ ಗುರುತಿವೆ."

" ಹೌದೇ ನಾಯಕ ? " ಕೈಯಲ್ಲಿ ಹಿಡಿದ ಹಣ್ಣಿನ ಮೇಲೆ ಹಲ್ಲುಗಳ ಗುರುತನ್ನು ಕಂಡು ನೊಂದ ದನಿಯಲ್ಲಿ ಕೇಳಿದಳು.

" ಮರಿಪಾಪಾತಿ, ನನ್ನ ಕೈಯಿಂದ ಉದುರಿದ ಹಣ್ಣನ್ನು ಹೆಕ್ಕಿ ತಿಂದಿರಾ ? " ನಾಯಕ ತಾನು ಅರಿಯದವನಂತೆ ಪ್ರಶ್ನಿಸಿದ.

" ಹೂಂ. ಒಳ್ಳೆಯ ಮಾಗಿದ ಹಣ್ಣು ಎಂದು ಎತ್ತಿಕೊಂಡೆ."

" ನಾನು ಆ ಹಣ್ಣನ್ನು ಬಾಯಲ್ಲಿ ಕಚ್ಚಿಕೊಂಡಿದ್ದೆ. ಕೊಂಬೆಯಿಂದ ಕೊಂಬೆಗೆ ದಾಟುವಾಗ ಅದು ಬಾಯಿಯಿಂದ ಉದುರಿ ಹೋಯಿತು. ನೀವು ಹೇಳಿದ್ದರೆ ಬೇಕಾದಷ್ಟು ಹಣ್ಣುಗಳನ್ನು ಕೆಳಗೆ ಹಾಕುತ್ತಿದ್ದೆ. "

" ನೋಡಿದಿಯೇನೆ ? ಈಗ ನೀನು ಕುರುಬನ ಎಂಜಲು ತಿಂದು ಕುರುಬಿತಿಯಾದೆ !" ಲಕ್ಷ್ಮಿ ತಂಗಿಯನ್ನು ಹಂಗಿಸುವ ದನಿಯಲ್ಲಿ ನುಡಿದಳು: " ನೋಡು, ಆಗ ನೀನು ನನಗೆ ಜಾತಿ ಇಲ್ಲವೆಂದು ಹಾಸ್ಯ ಮಾಡಿದೆಯಲ್ಲ !"

" ಹೋಗಕ್ಕ ! ನೀನೇ ಎಂಜಲು ಹಣ್ಣನ್ನು ಬಾಯೊಳಗೆ ಹಾಕಿಕೊಂಡ ಮೇಲೆ, ನಾನು ತಿಂದುದು ಯಾವ ಲೆಕ್ಕಾ !" ಚಿರುತೆ ಮಾರ್ನುಡಿದಳು: " ನಾವಿಬ್ಬರೂ ಈ ಸಂಗತಿಯನ್ನು ಮನೆಯಲ್ಲಿ ಬಾಯಿ ಬಿಡದಿದ್ದರಾಯಿತು. "

ನಾಯಕ ತನ್ನ ಹೆಗಲಮೇಲಿನ ವಸ್ತ್ರವನ್ನು ಜೋಳಿಗೆ ಮಾಡಿಕೊಂಡು, ಅದರೊಳಗೆ ತಾನು ಕಿತ್ತ ಹಣ್ಣುಗಳನ್ನು ತುಂಬಿಸಿದ. ಅವನು ಹಣ್ಣು ಕುಯ್ದಾದ ಮೇಲೆ ಗಿಡದ ಮೇಲಿಂದ ಇಳಿದ. ಅವನು ಜೋಳಿಗೆಯಲ್ಲಿದ್ದ ಹಣ್ಣುಗಳನ್ನು ನೆಲದ ಮೇಲಿರಿಸಿ, " ಈ ಹಣ್ಣುಗಳನ್ನು

ತೊಡಿಗೆ ತೆಗೆದುಕೊಂಡು ಹೋಗಿರಿ; ನೀವೂ ತೆಗೆದುಕೊಂಡು ಪುಟ್ಟ ಪಾಪಂದಿರಿಗೆ ಕೊಡಿ." ಎಂದು ಹೇಳಿದ.

ಚಿರುತೆ ಹಣ್ಣುಗಳನ್ನೆಲ್ಲಾ ಹೆಕ್ಕಿಕೊಂಡು ಉತ್ತರೀಯದಲ್ಲಿ ಕಟ್ಟಿದಳು. ಎರಡು ಹಣ್ಣುಗಳನ್ನು ಅಕ್ಕನಿಗೆ ಕೊಟ್ಟಳು. ಅವಳು ಉಳಿದ ಹಣ್ಣುಗಳನ್ನು ಎತ್ತಿಕೊಂಡು ಮನೆಗೆ ಓಡಿದಳು.

"ಪಾಪಾತಿ, ನೀವು ಎಂತಹ ಅನರ್ಥ ಮಾಡಿಬಿಡುತಿದ್ದಿರಿ!" ನಾಯಕ ತುಟಿಗಳ ಮೇಲೆ ಕಿರುನಗುವನ್ನು ತಂದುಕೊಂಡು ಉಸುರಿದ: "ನೀವು ಎಂಜಲು ಹಣ್ಣನ್ನು ಕಡಿದು ತಿಂದುದನ್ನು ಆ ಹುಡುಗಿ ನೋಡುತಿತ್ತು. ಅದು ಮನೆಗೆ ಹೋಗಿ ಹೇಳಿದ್ದರೆ ದೊಡ್ಡ ರಂಪವೇಳುತಿತ್ತು."

"ಆ ಕೋಡುಗಿ ಇಲ್ಲಿಗೆ ಬರುವುದೆಂದು ಯಾರು ಯೋಚಿಸಿದ್ದರು!" ಲಕ್ಷ್ಮಿ ಪಡಿನುಡಿದಳು: "ಆದರೂ ನೀನು ಉಪಾಯ ಮಾಡಿ ಅವಳಿಗೂ ಎಂಜಲು ಹಣ್ಣನ್ನು ತಿನ್ನಿಸಿದೆಯಲ್ಲ!"

"ಪಾಪನ ಬೆತ್ತದ ಬಡಿತದಿಂದ ಪಾರಾಗಬೇಕಾದರೆ ಉಪಾಯ ಮಾಡಲೇಬೇಕು."

"ಕುರುಬ ಹುಡುಗನ ಬುದ್ಧಿ ಇಷ್ಟು ಚುರುಕಾಗಿ ಓಡುವುದೇ?"

"ನಾನು ಕುರುಬನಾದರೇನು? ಕಳೆದ ಹತ್ತೆಂಟು ವರ್ಷಗಳನ್ನು ಪಾಪನ ತೊಡೆಯಲ್ಲಿಯೇ ಕಳೆದಿದ್ದೇನಲ್ಲ. ನಿಮ್ಮ ಜಾಣತನವೆಲ್ಲ ನನಗೆ ಅಂಟಿಬಿಟ್ಟಿದೆ. ಪಾಪಾತಿ, ನನ್ನನ್ನು ಚದುರನನ್ನಾಗಿ ಮಾಡಿದವರು ನೀವು!"

"ನಿನ್ನ ಎಲ್ಲ ಒಳಿತು ಕೆಡುಕುಗಳಿಗೆ ನಾನು ಹೊಣೆ ಎಂದು ಹೇಳಿಬಿಡು!" ಲಕ್ಷ್ಮಿ ನೆಲದ ಮೇಲಿನ ಕೆಸುವಿನ ಕಟ್ಟನ್ನು ಎತ್ತಿಕೊಳ್ಳುತ್ತಾ ಉಲಿದಳು.

ನಾಯಕ ಬಾಳೆದಿಂಡುಗಳನ್ನು ಕಡಿಯಲೆಂದು ಪೇರಳೆ ಗಿಡಕ್ಕೆ ಚುಚ್ಚಿ ಇರಿಸಿದ ಕತ್ತಿಯನ್ನೆತ್ತಿಕೊಂಡ. ಲಕ್ಷ್ಮಿ "ನಾನಿನ್ನು ಹೋಗುವೆನು; ತಡವಾದರೆ ಅತ್ತೆ ಬಯ್ದಾರು." ಎಂದು ಹೇಳಿ ಮನೆಯ ಕಡೆ ಹೆಜ್ಜೆ ಹಾಕಿದಳು.



ಚಿರುತೆ ನಡುರಾತ್ರಿ ಎಚ್ಚತ್ತಳು. ಕೋಣೆಯೊಳಗೆ ಹಬ್ಬಿದ ಮಬ್ಬು ಬೆಳಕು ಕತ್ತಲೆಯನ್ನು ಹೊರಗಟ್ಟಿತ್ತು. ಅವಳು ಕಣ್ಣೆರೆದು ಪಕ್ಕದ ಹಾಸಿಗೆಯನ್ನು ನೋಡಿದಳು. ಆದರೆ ಅಲ್ಲಿ ಲಕ್ಷ್ಮಿ ಇರಲಿಲ್ಲ. ಅವಳು " ಅಕ್ಕ, ಅಕ್ಕ, " ಎಂದು ಕೂಗಿದಳು.

ಆದರೆ ಲಕ್ಷ್ಮಿಯ ಪಡಿದನಿ ಬರಲಿಲ್ಲ. ಹಾಸಿಗೆಯ ಮೇಲೆ ಅಕ್ಕನ ಹಚ್ಚಡ ಮತ್ತು ಕಂಬಳಿಗಳು ಹೊರಳುತಿದ್ದುವು. ಆದರೆ ಅಕ್ಕ ಮಾತ್ರ ಇರಲಿಲ್ಲ. ಚಿರುತೆಗೆ ಹೊರಗೆ ಹೋಗಬೇಕಾಗಿತ್ತು. ಆದರೆ ಇರುಳು ಮನೆಯ ಹೊರಗೆ ಒಬ್ಬಂಟಿಗಳಾಗಿ ಕಾಲಿಡಲು ಅಂಜಿಕೆ ಬಿಡಲೊಲ್ಲದು. ಆದುದರಿಂದ ಅವಳು ಉಚ್ಚ ದನಿಯಲ್ಲಿ " ಅಕ್ಕ, ಅಕ್ಕ. " ಎಂದು ಕೂಗಿದಳು.

ಅವಳ ಕರೆಯನ್ನು ಕೇಳಿ ಅಕ್ಕ ಮಾತ್ರ ಕೋಣೆಯೊಳಗೆ ಬರಲಿಲ್ಲ. ಅವಳ ಕೂಗು ಪಕ್ಕದ ಕೋಣೆಯಲ್ಲಿ ಮಲಗಿ ನಿದ್ದಿಸುತಿದ್ದ ಅತ್ತೆಯನ್ನು ಎಚ್ಚರಿಸಿತು. ಅವಳು ಕಣ್ಣುಗಳನ್ನು ಉಜ್ಜಿಕೊಳ್ಳುತ್ತಾ, " ಚಿರುತೆ, ನಡುರಾತ್ರಿ ಏಕೆ ಬಾಯಿ ಬಡಿದು ಕೊಳ್ಳುತ್ತೀಯೇ ? " ಎಂದು ಕೇಳಿದಳು.

" ನಂಗೆ ಹೊರಗೆ ಹೋಗಬೇಕು. ಅಕ್ಕ ಇಲ್ಲ. " ಅಳುದನಿಯಲ್ಲಿ ಮಾರ್ನುಡಿದಳು ಚಿರುತೆ.

ಅತ್ತೆ ಲಕ್ಷ್ಮಿ ಜಲಬಾಧೆಯನ್ನು ನಿವಾರಿಸಿಕೊಳ್ಳಲು ಹೊರಗೆ ಹೋಗಿರಬಹುದೆಂದು ಆಲೋಚಿಸುತ್ತಾ ಹಾಸಿಗೆಯನ್ನು ಬಿಟ್ಟೆದ್ದಳು; ಲಕ್ಷ್ಮಿಯ ಕೋಣೆಗೆ ಹೋದಳು. ಅವಳು ಅಳುತ್ತಾ ಕುಳಿತಿದ್ದ ಚಿರುತೆಯನ್ನು ನೋಡಿ, " ಲೇ ಚಿರುತೆ, ನೀನೆಂತಹ ಪುಕ್ಕಲು ಹೆಣ್ಣು ! ಲಾಂದ್ರ ಇದೆ. ಕದ ತೆರೆದು ಹೊರಗೆ ಹೋಗಲು ಆಗುವದಿಲ್ಲವೇನೇ ? ನಡುರಾತ್ರಿ ಬೊಬ್ಬೆ ಹೊಡೆದು ಎಲ್ಲರ ನಿದ್ದೆಯನ್ನು ಕೆಡಿಸಬೇಕೇ ? " ಎಂದು ಪುಟ್ಟ ಸೊಸೆಯನ್ನು ಗದರಿಸಿದಳು.

" ಅಕ್ಕ ಇಲ್ಲ. ನಂಗೆ ಹೆದರಿಕೆ ಯಾಗುತ್ತೆ. "

" ಬಾ ಮತ್ತೆ. " ಅತ್ತೆ ಲಾಂದ್ರವನ್ನೆತ್ತಿ ಕೊಂಡು ಹೊರಗೆ ಹೆಜ್ಜೆ

ಹಾಕಿದಳು. ಚಿರುತೆ ಅವಳನ್ನು ಅನುಸರಿಸಿದಳು.

ಅತ್ತೆ ಹಿತ್ತಲ ಬಾಗಿಲನ್ನು ತೆರೆದಾಗ ಲಕ್ಷ್ಮಿ ಅಂಗೆಳದಿಂದ ಜಗಲಿಯ ಮೆಟ್ಟಲುಗಳನ್ನೆರಿ ಬರುತ್ತಿದ್ದಳು. ಅತ್ತೆ ಕೈಯ ಲಾಂದ್ರವನ್ನೆತ್ತಿ ಲಕ್ಷ್ಮಿಯ ಮುಖಕ್ಕೆ ಬೆಳಕನ್ನು ಚೆಲ್ಲಿದರು. ಲಕ್ಷ್ಮಿಯ ತಲೆಗೂದಲು ಕೆದರಿತ್ತು. ಮೋರೆ ನಸುಗೆಂಪು ಬಣ್ಣವನ್ನು ತಳೆದಿತ್ತು. ಹಣೆಯ ಮೇಲೆ ಅಲ್ಲೊಂದು ಇಲ್ಲೊಂದು ಬೆವರ ಕಣಗಳು ಮೂಡಿ ನಿಂತಿದ್ದುವು. ಕಣ್ಣುಗಳಿಂದ ನಲವು ಸಂತೃಪ್ತಿಗಳನ್ನು ತಳೆದ ತಂಬೆಳಕು ಹರಿದು ಬರುತಿದ್ದಿತು. ಎದೆ ದ್ರುತಗತಿಯಿಂದ ಏರಿ ಇಳಿಯುತಿದ್ದಿತು. ಅತ್ತೆ ಮಾತಾಡದೆ ಸೊಸೆಯ ಮೋರೆಯನ್ನೇ ದೃಷ್ಟಿಸಿ ನೋಡಿದಳು.

ಲಕ್ಷ್ಮಿ ಅತ್ತೆಯ ಕಣ್ಣಸೋಟವನ್ನು ಇದಿರಿಸಲಾಗದೆ ತಲೆಯನ್ನು ತಗ್ಗಿಸಿದಳು. ಅವಳು ಮುಖದ ಮೇಲೆ ಪ್ರಯತ್ನಪೂರ್ವಕವಾಗಿ ನಗುವನ್ನು ತಂದುಕೊಂಡು “ಅತ್ತೆ, ನೀವು ದೆವ್ವವನ್ನು ಕಂಡವರ ಹಾಗೆ ಗಾಬರಿಯಿಂದ ನೋಡುತ್ತಿರುವಿರಲ್ಲ !” ಎಂದು ಉದ್ಗಾರವೆತ್ತಿದಳು.

“ಗಾಬರಿಯಾಗದೆ ಏನು ಮಾಡಿಯೇನೇ? ನೀನು ಹೀಗೆ ಇರುಳು ಅಲೆದಾಟಕ್ಕೆ ಹೊರಟ ಮೇಲೆ!”

“ಅತ್ತೆ, ಅಲೆದಾಟವಲ್ಲ, ಏಕೋ ನನ್ನ ಹೊಟ್ಟೆ ಸರಿಯಾಗಿಲ್ಲ.” ಲಕ್ಷ್ಮಿ ನಡುಗುವ ದನಿಯಲ್ಲಿ ಉತ್ತರಿಸಿದಳು. “ಆ ಕೆಸುವಿನ ಚಟ್ನಿ ನನ್ನ ಒಡಲಿಗೆ ಹಿಡಿಸಲಿಲ್ಲ.”

“ಇರುಳು ಒಬ್ಬಂಟಿಗಳಾಗಿ ಹೋಗುವುದೇನೇ? ಕೈಯಲ್ಲಿ ಲಾಂದ್ರವನ್ನು ಸಹ ಎತ್ತಿಕೊಳ್ಳಲಿಲ್ಲ. ಜತೆಯಲ್ಲಿ ದೇವತ್ತೆಯನ್ನು ಕರೆದುಕೊಂಡು ಹೋಗಲು ಏನಾಗಿತ್ತು ಧಾಡಿ?”

“ಹೊಟ್ಟೆ ನೋವಿನಿಂದ ನಾನು ಪಟ್ಟ ಪಾಡನ್ನು ಆ ಶಿವನೇ ಬಲ್ಲ!” ನೊಂದ ಸ್ವರದಲ್ಲಿ ಲಕ್ಷ್ಮಿ ಮಾರ್ನುಡಿದಳು: “ದೇವತ್ತೆಯನ್ನು ಕರೆದೆಬ್ಬಿಸಲು ಬಿಡುವೆಲ್ಲಿ? ಉಟ್ಟ ಪೊಡವೆಯೆಲ್ಲ ಹೊಲಸಾಗಿ ಬಿಡುತಿತ್ತು!”

“ಲಕ್ಷ್ಮಿ, ನೀನು ಮಾತಿಗೆ ಪ್ರತಿಮಾತು ಕೊಡುವದರಲ್ಲಿ ಬಲು ಜಾಣೆ!” ಅತ್ತೆ ರೇಗಿದ ಸ್ವರದಲ್ಲಿ ಅಂದರು: “ಆದರೆ ನೋಡು, ಇರುಳು

ಒಬ್ಬಳೇ ಹೊರಗೆ ಹೋಗೋದು ಚನ್ನಾಗಿಲ್ಲೋಲ್ಲ.''

"ಅತ್ತೆ ನೀವು ಸುಮ್ಮಸುಮ್ಮನೆ ಮುನಿದು ಕೆಂಡವಾಗುತಿದ್ದೀರಿ." ಲಕ್ಷ್ಮಿ ಕಣ್ಣುಗಳಲ್ಲಿ ನೀರು ತಂದುಕೊಂಡಳು: "ನಾನು ಈ ಮನೆಯಲ್ಲಿ ಹೇಗೆ ದಿನ ದೂಡಬೇಕೋ ಆ ದೇವರೇ ಬಲ್ಲ.''

ಅತ್ತೆ ಮಾತಾಡಲಿಲ್ಲ. ತಾನು ತರವಾಡಿನ ಕಾರಣವನ ಕೈ ಹಿಡಿದವಳಾದರೂ ಕುಟುಂಬಕ್ಕೆ ಹೊರಗಿನವಳು; ತನ್ನ ಮಾತು ಸೊಸೆಗೆ ಪ್ರಿಯವೆನಿಸದ ಮೇಲೆ ಏಕೆ ಮಾತಾಡಬೇಕೆಂದು ತುಟಿ ಬಿಗಿ ಹಿಡಿದಳು.

ಮೂವರೂ ಕದಗಳನ್ನು ಹಚ್ಚಿ ತಮ್ಮ ತಮ್ಮ ಕೋಣೆಗಳಿಗೆ ಹೋದರು. ಈಗ ಮಾವನಿಗೆ ಎಚ್ಚರವಾಗಿತ್ತು. ಅವರಿಗೆ ಅತ್ತೆ ಸೊಸೆಯರ ಮಾತಿನ ಗದ್ದಲ ಕೇಳಿಸಿತ್ತು. ಆದರೆ ಅವರಿಗೆ ವಾದಿಸುವ ವಿಷಯವೇನೆಂದು ತಿಳಿಯಲಿಲ್ಲ. ಮಡದಿ ಕೋಣೆಗೆ ಬಂದೊಡನೆ, "ಕುಂಞಿಕಾವು, ಅದೇನು ದೊಡ್ಡ ಗದ್ದಲ ಎಬ್ಬಿಸುತಿದ್ದೆಯಲ್ಲ?" ಎಂದು ಕೇಳಿದರು.

"ಇದ್ದಾಳಲ್ಲ ಆ ನಿಮ್ಮ ಸೊಸೆರಾಣಿ!'' ಸಿಡುಕು ದನಿ ಅತ್ತೆಯ ಕೊರಳಿಂದ ಬಿರಿದು ಬಂತು: "ಅವಳಿರುವಾಗ ನಾನು ಗದ್ದಲ ಎಬ್ಬಿಸದೆ ಏನು ಮಾಡಲಿ?''

"ಲಕ್ಷ್ಮಿ ಏನು ಮಾಡಿದಳು?"

"ನೀವು ಹೀಗೆ ಲಂಗು ಲಗಾಮು ಇಲ್ಲದೆ ಸೊಸೆಯನ್ನು ಬಿಡಿ. ಅವಳು ಮಾಡದೆ ಇರುವುದು ಒಂದೂ ಉಳಿಯಲಾರದು!''

"ಏನಾಯಿತೇ? ಈ ನಿನ್ನ ಕೋಪಕ್ಕೆ ಕಾರಣವೇನೆಂದು ಸ್ವಲ್ಪ ಬಿಡಿಸಿ ಹೇಳಬಾರದೇ?"

"ನೋಡಿ, ನಿಮ್ಮ ಮುದ್ದು ಸೊಸೆಯ ಸಾಹಸವನ್ನು!" ಮಡದಿಯ ಕೊರಳಿಂದ ಅಣಕ ಧ್ವನಿ ಹೊರಟಿತು: "ಇರುಳು ದೇವತ್ತೆಯನ್ನು ಸಹ ಜತೆಯಲ್ಲಿ ಕರೆದುಕೊಳ್ಳದೆ, ಕೈಯಲ್ಲಿ ಲಾಂದ್ರವನ್ನು ಸಹ ಎತ್ತಿಕೊಳ್ಳದೆ ಹೊರಗೆ ಹೋಗಿದ್ದಾಳೆ. ಕೇಳಿದರೆ ಹೊಟ್ಟೆನೋವು ಎಂದು ಹೇಳುತ್ತಾಳೆ."

"ಇರಬಹುದು.' ಮಾವ ಉಸುರಿದರು: "ಒಡಲು ಸಡಿಲವಾದರೆ ಯಾರು ತಾನೇ ಹೊರಗೆ ಹೋಗುವುದಿಲ್ಲ?"

"ನೀವು ಯಾವಾಗಲೂ ಸೊಸೆಯ ಬೆನ್ನನ್ನು ಕಟ್ಟುವವರು. ಆದುದರಿಂದಲೇ ಅವಳು ನನ್ನ ಮಾತುಗಳನ್ನು ಕಿವಿಗಳಿಗೆ ಹಾಕಿಕೊಳ್ಳೋದಿಲ್ಲ. ನಾಳೆ ತರವಾಡಿನಲ್ಲಿ ಗಂಡಾಂತರ ತಲೆ ದೋರಿದರೆ ನೀನೇಕೆ ನಿಗವಿಡಲಿಲ್ಲ ಅಂತ ನನ್ನ ಕೇಳಬೇಡಿ."

"ಲಕ್ಷ್ಮಿ ಒಬ್ಬಂಟಿಗಳಾಗಿ ಹೊರಗೆ ಹೋದಳು. ಆದ ಪ್ರಮಾದವೇನು?"

"ಅವಳು ಪ್ರಾಯದ ಹೆಣ್ಣು. ಗಂಡನನ್ನು ಬೇರೆ ಕಳೆದುಕೊಂಡಿದ್ದಾಳೆ. ಅವಳ ಮನಸ್ಸಿನಲ್ಲಿ ಹುಚ್ಚು ಹುಚ್ಚು ಆಸೆಗಳು ಏಳುವುದು ಸಹಜ."

"ಆಕೆಯ ಮನಸೆಳೆವ ಗಂಡೊಂದು ಹತ್ತಿರಲ್ಲಿ ಬೇಕಲ್ಲ?"

"ಗಂಡು ಕಣ್ಣಮುಂದೇ ಇದೆಯಲ್ಲ!"

"ಯಾರದು? ನಾನು ಯಾರನ್ನೂ ಕಾಣೆ."

"ಅಯ್ಯೋ, ಪಾಪ. ಆತ ಯಾರೆಂದು ನಾನು ತೋರಿಸಿಕೊಡಬೇಕೇನೊ?"

"ಯಾರು ಹೇಳು."

"ನಿಮ್ಮ ನಚ್ಚಿನ ಆನೆಕಾರ."

"ನಾಯಕನೇ!" ಮಾವನ ಕಣ್ಣುಗಳಿಂದ ವಿಸ್ಮಯದ ಕಿಡಿಗಳು ಉದುರಿದುವು.

"ಹೌದು. ಲಕ್ಷ್ಮಿ ಆ ಕುರುಬ ಹುಡುಗನ ಸಂಗಾತ ಎಷ್ಟೊಂದು ಚೆಲ್ಲಾಟ ನಡೆಸುತ್ತಿರುವಳು!"

"ಕುಂಞಿಕಾವೆ, ಇದು ನಿನಗೊಂದು ಭ್ರಮೆ!" ಮಡದಿಯ ನುಡಿಯನ್ನು ಕೇಳಿ ಮಾವ ಉಸುರಿದರು: "ನಾಯಕ ಕುರುಬನ ಹುಡುಗ. ನಮ್ಮ ಮನೆಯಲ್ಲಿಯೇ ಬೆಳೆದಿದ್ದಾನೆ. ಮನೆ ಮಕ್ಕಳೆಲ್ಲ ಆತನೊಡನೆ ಆಟವಾಡಿ ನಲಿಯುತಿದ್ದಾರೆ. ಲಕ್ಷ್ಮಿ ಸಲುಗೆಯಿಂದ ಆತನ ಸಂಗಡ ಮಾತನಾಡುತ್ತಿರಬಹುದು; ನಕ್ಕು ನಲಿಯುತ್ತಿರಬಹುದು. ಅವಳು ಏನೂ ಅರಿಯದ ಮಳ್ಳಿ ಹೆಣ್ಣಲ್ಲ. ಓದು ಬರಹ ಸಾಕಷ್ಟು ಇದೆ. ಅವಳು ಅವನನ್ನು ನೋಡಿ ಮರುಳುಗೊಂಡು ಹಳ್ಳಕ್ಕೆ ಹಾರುವ ಸಾಹಸ

ಮಾಡಲಾರಳು. ಅವನು ಎಷ್ಟಾದರೂ ಕುರುಬರ ಹುಡುಗ!"

ಬಯಕೆಗೊಂಡ ಹೆಣ್ಣೆದೆ ಕುಲಜಾತಿಗಳ ಕಟ್ಟುಕಟ್ಟಳೆಗಳನ್ನು ಮೆಟ್ಟಿ ನೆಗೆಯಬಲ್ಲುದೆಂದು ಹೇಳಬೇಕು ಎಂದು ಅತ್ತೆಗೆ ಅನಿಸಿತು. ಆದರೆ ಗಂಡನಿಗೆ ನಾಯಕನಲ್ಲಿ ಅಪಾರ ವಿಶ್ವಾಸ. ಅವನು ಮುದ್ದಿನ ಶಂಕರನನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದುದರಿಂದ ನಾಯಕನಂತಹ ಒಳ್ಳೆಯ ಆಳು ಬೇರೊಬ್ಬನಿಲ್ಲವೆಂಬ ನಂಬಿಕೆ ಮಾವನಲ್ಲಿ ಬೇರೂರಿ ಹೋಗಿತ್ತು. ಇತರ ಆಳುಗಳಿಗೆ ದೊರೆಯದ ಸ್ವಾತಂತ್ರ್ಯವನ್ನು ಈ ಕುರುಬರ ಹುಡುಗ ಪಾಪನ ತೊಡಿಯಲ್ಲಿ ಕಸಿದುಕೊಂಡಿದ್ದ. ಮನೆಯ ಮಕ್ಕಳಿಗೆ ನಡೆಯುವ ಹಾಗೆ ನಾಯಕನಿಗೂ ಉಪಚಾರ ನಡೆಯುತ್ತಿತ್ತು. ಆದುದರಿಂದ ಗಂಡನಿಗೆ ತನ್ನ ಸಂದೇಹವನ್ನು ಬಿತ್ತರಿಸಿ ಹೇಳುವುದರಿಂದ ಪ್ರಯೋಜನವಾಗದು ಎಂದು ಅತ್ತೆಗೆ ತೋರಿತು. ಸೊಸೆಯನ್ನು ಕಂಡರಾಗದುದರಿಂದ ಸುಳ್ಳು ದೂರು ತಂದಳು ಎಂಬ ಅಪವಾದ ತನ್ನ ತಲೆಗೆ ಸುತ್ತಿಕೊಂಡೀತು ಎಂದು ಅವಳು ಸುಮ್ಮನಾದಳು.

ಅತ್ತೆಯ ಗದರಿಕೆ ಲಕ್ಷ್ಮಿಯನ್ನೂ ಚಿಂತೆಗೆ ಈಡುಮಾಡಿತು. ತನ್ನ ಎದೆಯ ಹಂಬಲದ ಸುಳಿವು ಅತ್ತೆಗೆ ತಿಳಿದು ಹೋಗಿದೆ ಎಂದು ಅವಳು ದಿಗಿಲುಗೊಂಡಳು. ಹಾಸಿಗೆಯ ಮೇಲೆ ಹೊರಳುತ್ತಿದ್ದ ಅವಳಿಗೆ ನಿದ್ದೆಯೇ ಬರಲಿಲ್ಲ. ಅವಳ ಜೀವ ಆಲೋಚನೆಗಳ ಹೊನಲಲ್ಲಿ ಈಸ ತೊಡಗಿತು.

ತನ್ನ ಅದೃಷ್ಟ ಒಳ್ಳೆಯದು; ತಾನು ನಾಯಕನ ಅಪ್ಪುಗೆಯನ್ನು ತೊರೆದು ಬರಲು ಒಂದು ಕ್ಷಣ ತಡವಾಗಿದ್ದರೆ ತನ್ನ ರಹಸ್ಯ ಪ್ರಣಯ ಬಟ್ಟಬಯಲಾಗಿ ಹೋಗುತ್ತಿತ್ತು! ಕುರುಬ ಹುಡುಗನ ಸಂಗಡ ಸರಸಕ್ಕೆ ಎಳಸಿದಾಕೆ ಎಂಬ ಅಪಮಾನ ನೆತ್ತಿಯ ಮೇಲೆ ಕೂರುತ್ತಿತ್ತು. ತನ್ನ ಒಲವಿನ ಬಲೆಗೆ ಸಿಕ್ಕಿಬಿದ್ದ ಸಾರಂಗ ನಾಯಕನಿಗೂ ಕೇಡು! ಆದುದು ಆಗಿ ಹೋಯಿತು; ಇನ್ನು ನಾಯಕನಿಂದ ದೂರವಿರಬೇಕು! ಎಂದು ಲಕ್ಷ್ಮಿ ತನ್ನಲ್ಲಿಯೇ ಹೇಳಿಕೊಂಡಳು. ಆದರೆ ನಾಯಕನ ನಿಡುದೋಳುಗಳ ಅಪ್ಪುಗೆ, ತಾಂಬೂಲ ರಾಗರಂಜಿತ ತುಟಿಗಳ ಸವಿ, ಅವನ ಮೈ ಬೆವರಿನ ಕಂಪು ಇವೆಲ್ಲ ಅವಳ ನೆನಪಿಗೆ ಬಂದುವು. ಆ ನೆನಹು ಅವಳ ದೇಹವನ್ನು ಪುಳಕಗಳ ತೊರೆಯಲ್ಲಿ ಮುಳುಗಿಸಿತು. ಅವುಗಳಿಂದ ದೂರವಿರ

ಬೇಕೆಂದು ಆಲೋಚಿಸಿದಾಗ ಅವಳ ಎದೆಯೊಳಗಿಂದ ನಿಡುಸುಯ್ಲು ಹೊರಟಿತು. ಅವನ ಒಡನಾಟ ಒದಗಿಸಿದ ನಲವಿಗೆ ತನ್ನ ಜೀವವನ್ನೇ ಬೆಲೆಯಾಗಿ ತೆತ್ತರೂ ಅದು ಅತ್ಯಲ್ಪವೆಂದು ಅವಳು ಹೇಳಿಕೊಂಡಳು. ನಾಯಕನಿಲ್ಲದ ಬಾಳು ಬರಡು; ಚಂದ್ರನಿಲ್ಲದ ಅಮವಾಸ್ಯೆಯ ಇರುಳು!

ಕೊನೆಗೆ ಲಕ್ಷ್ಮಿ ನಾಯಕನ ಆಲೋಚನೆಯಲ್ಲಿಯೇ ನಿದ್ದೆ ಹೋದಳು.

ಬೆಳಕು ಹರಿಯಿತು. ಇನ್ನು ಅತ್ತೆಯ ಸಂಶಯಕ್ಕೆ ಅವಕಾಶ ಕೊಡಲಾಗದು; ನಾಯಕನಿಂದ ಆದಷ್ಟು ದೂರವಿರಬೇಕು ಎಂದು ಸಂಕಲ್ಪ ಮಾಡಿಕೊಳ್ಳುತ್ತಾ ಲಕ್ಷ್ಮಿ ಹಾಸಿಗೆಯಿಂದ ಎದ್ದಳು. ಅಂದು ಅವಳ ಮುಖ ಬಾಡಿತ್ತು; ಉಲ್ಲಾಸ ಆ ಮೊಗದಲ್ಲಿ ಕಳೆಯಾಡುತ್ತಿರಲಿಲ್ಲ. ಚುರುಕು ಚಟುವಟಿಕೆಗಳು ಅವಳ ಮೈ ಕೈಗಳಲ್ಲಿ ಓಡಾಡಲಿಲ್ಲ. ಅಕ್ಕ ಎಂದಿನಂತೆ ಇಲ್ಲದೆ ಇರುವುದನ್ನು ಕಂಡು ಚಿರುತೆಗೆ ಆಶ್ಚರ್ಯವಾಯಿತು. ಅವಳು ಬಚ್ಚಲು ಮನೆಯಲ್ಲಿ ಹಲ್ಲುಜ್ಜುತಿದ್ದಾಗ ಅಕ್ಕನ ಕಳೆಗೆಟ್ಟ ಮೋರೆಯನ್ನು ನೋಡುತ್ತಾ, "ಅಕ್ಕ, ಇಂದು ನಿನ್ನ ಮೊಗ ನರಪೇತಲ ಮುಖವಾಗಿದೆಯಲ್ಲ!" ಎಂದು ಹೇಳಿದಳು.

"ಯಾಕೆ?" ಮೋರೆ ತೊಳೆದುಕೊಳ್ಳುತಿದ್ದ ಲಕ್ಷ್ಮಿ ಕೇಳಿದಳು.

"ನಿನ್ನ ಮೋರೆ ಬಿಳಿಚಿಕೊಂಡಿದೆ. ಮೊಗದಲ್ಲಿ ಕಳೆಯಿಲ್ಲ. ಮೈಯಲ್ಲಿ ಬೇಸರ ತುಂಬಿದೆ."

"ಈ ಮನೆಯಲ್ಲಿ ಬೇಸರವಲ್ಲದೆ ಬೇರೇನು ಸಿಕ್ಕೀತು?"

"ಅಕ್ಕ, ನೀನು ಚಿಳಿಗ್ಗೇ ರೇಗುತ್ತಿರುವೆಯಲ್ಲ?"

"ಚಿರುತೆ, ನಿನ್ನಮೇಲೆ ರೇಗಲಿಲ್ಲ ಕಣೆ." ಲಕ್ಷ್ಮಿ ಟವೆಲಿನಿಂದ ಒದ್ದೆಯಾದ ತನ್ನ ಮೋರೆಯನ್ನು ಒರೆಸುತ್ತಾ ಹೇಳಿದಳು: "ಇರುಳು ಹೊರಗೆ ಹೋದರೆ ಅತ್ತೆಗೆ ಸಿಟ್ಟು ಬರುತ್ತದೆ; ನಾಯಕನ ಜತೆಯಲ್ಲಿ ನಾಲ್ಕು ನಗುಮಾತುಗಳನ್ನಾಡಿದರೆ ಚಾಮುಂಡಿಯಾಗುತ್ತಾಳೆ."

ಅಂದು ಲಕ್ಷ್ಮಿ ಬೆಳಗಿನ ಕಾಫಿ ತಿಂಡಿಗಳನ್ನು ನಾಯಕನಿಗೆ ಕೊಡಲು ಹೋಗಲಿಲ್ಲ. ಅವಳು ಕಾಫಿ ತಿಂಡಿಗಳನ್ನು ತಂಗಿಯ ವಶದಲ್ಲಿ ಕೊಟ್ಟು ಕಳುಹಿದಳು. ಆನೆಯನ್ನು ಕಾಡಿಗೆ ಅಟ್ಟಿಕೊಂಡು ಹೋಗುವ

ಮುನ್ನ ನಾಯಕ ಹೊರಜಗಲಿಯಲ್ಲಿ ನಿಂತು "ಪುಟ್ಟ ಪಾಪಾತಿ!" ಎಂದು ಕೂಗಿದ.

ಆದರೆ ಲಕ್ಷ್ಮಿ ಆತನ ಕೂಗನ್ನು ಕೇಳಿ ಹೊರಬರಲಿಲ್ಲ. ಅವಳು ಬಾಚಿಕೊಳ್ಳಲೆಂದು ತುರುಬು ಬಿಚ್ಚಿಕೊಳ್ಳುತ್ತಿದ್ದ ತಂಗಿಯನ್ನು ಕರೆದು, "ಆ ನಾಯಕನಿಗೆ ಏನು ಬೇಕಂತೆ ಎಂದು ಕೇಳಿ ಬಾ." ಎಂದು ಹೇಳಿ ಕಳುಹಿದಳು.

ಕೆದರಿದ ತುರುಬಿನೊಡನೆ ಹೊರ ಬಂದ ಚಿರುತೆಯನ್ನು ಕಂಡು ನಾಯಕ ಅಪ್ರತಿಭನಾದ. ಅವನು ತನ್ನ ನಚ್ಚಿನ ಪಾಪಾತಿಯನ್ನು ಕಾಣಬೇಕು; ಅಡವಿಗೆ ತೆರಳುವ ಮುನ್ನ ನಾಲ್ಕು ಮಾತುಗಳನ್ನು ಆಡಬೇಕು ಎಂದು ಬಯಿಸಿ ಬಂದಿದ್ದ.

"ನಾಯಕ, ನಿನಗೇನು ಬೇಕು?" ಚಿರುತೆ ಕೇಳಿದಳು.

"ಶಂಕರನ್ನ ಅಡವಿಗೆ ಅಟ್ಟಿಕೊಂಡು ಹೋಗಬೇಕು" ನಾಯಕ ಬೆರಳತುದಿಯಿಂದ ತಲೆಗೆದರಿಕೊಳ್ಳುತ್ತಾ ಉಸುರಿದ: "ಒಂದಿಷ್ಟು ಎಲೆ ಅಡಿಕೆ ಬೇಕಿತ್ತು. ಮುಗಿದು ಹೋಗಿದೆ."

"ಅಕ್ಕ ಅವನಿಗೆ ಎಲೆ ಅಡಿಕೆ ಬೇಕಂತೆ" ಚಿರುತೆ ಒಳಬಂದು ಅಕ್ಕನಿಗೆ ಹೇಳಿದಳು.

"ಕುರುಬ ದೊರೆಮಗನಿಗೆ ಎಲೆ ಅಡಿಕೆ ಸಿಗದಿದ್ದರೆ ಆಗುವುದೇ ಇಲ್ಲವೇನೋ?" ಲಕ್ಷ್ಮಿ ಗೊಣಗಿದಳು: "ನಾಲ್ಕು ಎಲೆ ಒಂದಿಷ್ಟು ಅಡಿಕೆ ತೆಗೆದುಕೊಂಡು ಹೋಗಿಕೊಡು."

ನಾಯಕ ತನಗೆ ಎಲೆ ಅಡಿಕೆಗಳನ್ನು ಕೊಡುವುದಕ್ಕಾದರೂ ಪಾಪಾತಿ ಹೊರಬಂದಾಳು ಎಂದು ಆಲೋಚಿಸಿದ್ದ. ಅವನ ಕೈಗಳಿಗೆ ತಾಂಬೂಲ ಹಾಕುವುದು ಆಕೆಯ ಮೆಚ್ಚಿನ ಕೆಲಸಗಳಲ್ಲೊಂದು. ಪ್ರತಿನಿತ್ಯ ಲಕ್ಷ್ಮಿಯೇ ಎಲೆ ಅಡಿಕೆಗಳನ್ನು ಕೊಟ್ಟು ಅವನನ್ನು ದುಡಿಮೆಗೆ ಕಳುಹಿತಿದ್ದಳು. ಈಗ ಚಿರುತೆ ಎಲೆ ಅಡಿಕೆಗಳನ್ನು ತಂದುದನ್ನು ಕಂಡು ಅವನ ಮುಖ ಕಳೆಗುಂದಿತು.

"ನೋಡು, ನಾಯಕ ನಾನು ಅಕ್ಕನ ಹಾಗಲ್ಲ!" ಚಿರುತೆ ಹೇಳಿದಳು: "ಎಲೆ ಅಡಿಕೆಗಳನ್ನು ಧಾರಾಳ ತಂದಿದ್ದೇನೆ. ನೋಡು, ಹನ್ನೆ

ರಡು ಎಲೆಗಳಿವೆ; ಒಂದು ಮುಷ್ಟಿ ಅಡಿಕೆ ಇದೆ. ನೀನು ಕಾಡಿನಿಂದ ಬರುವಾಗ ನನಗೆ ಏನು ತರುವೆ ಎಂದು ಹೇಳು."

ಲಕ್ಷ್ಮಿ ನಿತ್ಯ ತಂದು ಕೊಡುವುದಕ್ಕಿಂತ ಹೆಚ್ಚು ಎಲೆ ಅಡಿಕೆ ಗಳನ್ನು ಚಿರುತೆ ತಂದಿದ್ದಳೆಂಬುದು ನಿಜ. ಆದರೆ ಅವು ಲಕ್ಷ್ಮಿಯ ಕೈ ಯಿಂದ ದೊರೆತ ತಾಂಬೂಲಿದಷ್ಟು ಆಹ್ಲಾದವನ್ನೊದಗಿಸಿಲಿಲ್ಲ,

"ಮರಿ ಪಾಪಾತಿ, ನಾನು ಕಾಡು ಗೆಣಸನ್ನು ತರಲಾ?" ನಾಯಕ ಕೇಳಿದ.

"ಗೆಣಸು ಬೇಡ. ಅದು ಸಪ್ಪೆ"

"ಹಲಸಿನ ಹಣ್ಣು,"

"ನನಗೆ ತಿಂದು ತಿಂದು ಬೇಸರ ಹಿಡಿದಿದೆ.

"ಪೇರಳೆ ಹಣ್ಣು."

"ನಮ್ಮ ಬಾಳೆಯ ತೋಟದಲ್ಲಿಯೇ ಇದೆ.";

"ಹಾಗಾದರೆ ಏನು ತರಲಿ?" ನಾಯಕ ಆಲೋಚಿಸತೊಡಗಿದ.

"ನಾನು ನೀರಿಲೆ ಹಣ್ಣು ತರಲಾ?"

"ಹೂಂ, ನೀರಲೆ ಹಣ್ಣನ್ನು ತಾ. ಸಂಜೆ ರಾಮು, ಕುಂಞಂಬು ಸಾಲೆಯಿಂದ ಮರಳಿ ಬರುವರು." ಚಿರುತೆ ಉತ್ಸಾಹದಿಂದ ಕರತಟ್ಟುತ್ತಾ ಉಸುರಿದಳು: "ಎಲ್ಲರೂ ಉಪ್ಪು ಬೆರಸಿ ತಿನ್ನಬಹುದು."

"ಆಗಲಿ, ನಿಮಗೆ ತಿನ್ನಲು ನಾಲ್ಕುಸೇರು ನೀರಿಲೆ ಹಣ್ಣು ತರು ವೆನು." ಎಂಬ ಭರವಸೆಯನ್ನು ನೀಡಿ ನಾಯಕ ಹೊರಟು ಹೋದ.

ಮಧ್ಯಾಹ್ನ ಊಟ ಮುಗಿಸಿದ ಮೇಲೆ ಲಕ್ಷ್ಮಿ ಸೂಜಿನೂಲುಗಳನ್ನು ಎತ್ತಿಕೊಂಡು ಹರಿದ ಬ್ಲವುಸುಗಳನ್ನು ಹೊಲಿದು ಸರಿಪಡಿಸಲಾರಂಭಿಸಿ ದಳು. ಅವಳು ಹೊಲಿಗೆಯಲ್ಲಿ ಮಗ್ನಳಾಗಿದ್ದಾಗ ದೇವತ್ತೆ ಹತ್ತಿರ ಬಂದು, "ಲಕ್ಷ್ಮೀ, ನಾಯಕ ಕಾಡಿಂದ ಬಂದಿದ್ದಾನೆ. ಆತನಿಗೆ ಊಟ ಬಡಿಸಿದ ರಾಗುತಿತ್ತು." ಎಂದು ಹೇಳಿದಳು.

"ದೇವತ್ತೆ" ಲಕ್ಷ್ಮಿ ಕೈಯಲ್ಲಿ ಹಿಡಿದ ಬ್ಲವುಸಿನಿಂದ ಕಣ್ಣುಗಳನ್ನು ಮೇಲೆತ್ತಿದಳು: "ನಾಯಕನಿಗೆ ಊಟ ಬಡಿಸುವುದು ನನಗೊಬ್ಬಳಿಗೇ ವಹಿಸಿದ ಗುತ್ತಿಗೆಯಲ್ಲ: ಯಾರು ಬೇಕಾದರೂ ಬಡಿಸಿಕೊಳ್ಳಲಿ. ನನ್ನಿಂದ

ಮಾತ್ರ ಆಗದು. ''

"ಯಾಕೆ ಲಕ್ಷ್ಮಿ? ದಿನ ನಿತ್ಯ ನೀನೇ ಆತನಿಗೆ ಬಡಿಸುತಿದ್ದೆ ಯಲ್ಲ!" ಲಕ್ಷ್ಮಿಯ ಮಾತು ಕೇಳಿ ದೇವತ್ತೆಗೆ ಆಶ್ಚರ್ಯವಾಯಿತು.

"ದೇವತ್ತೆ, ನಾಯಕನಿಗೆ ಊಟ ಬಡಿಸುವಾಗ ಮಾತಾಡಬೇಕಾಗುವುದು.'' ಲಕ್ಷ್ಮಿ ಉತ್ತರಿಸಿದಳು: ''ನಾನು ಆ ಕುರುಬ ಹುಡುಗನ ಸಂಗಡ ಮಾತಾಡುವುದನ್ನು ಕಂಡು ಯಾರು ಯಾರೋ ಏನೇನೋ ಅರ್ಥ ಮಾಡಿಕೊಳ್ಳುತ್ತಾರೆ. ಈ ದೂರು ಅಪವಾದಗಳಿಗೆ ನಾನೇಕೆ ಹೆಗಲೊಡ್ಡಬೇಕು. ಬೇರೇನಾದರೂ ಕೆಲಸವಿದ್ದರೆ ಹೇಳಿ."

ನಾಯಕನಿಗೆ ಬಡಿಸಲು ದೇವತ್ತೆಯೇ ಹೋದಳು. ಲಕ್ಷ್ಮಿ ತನ್ನ ಹೊಲಿಗೆಯನ್ನು ಮುಂದುವರಿಸಿದಳು.

ಮಾವ ಮುರುಗಸ್ವಾಮಿಯ ಭಕ್ತರು. ಪ್ರತಿ ಮಂಗಳವಾರ ಶುಕ್ರವಾರ ರಾತ್ರಿ ಅವರು ಮುರುಗನ ಪೂಜೆ ಮಾಡುತಿದ್ದರು. ವರ್ಷಕ್ಕೊಮ್ಮೆ ಪಳನಿಗೆ ಹೋಗಿ ಆಂಡವನ ಸೇವೆಮಾಡಿ ಬರುತಿದ್ದರು. ಮುರುಗನ ಪೂಜೆಯೆಂದು ಅವರು ಹಗಲೆಲ್ಲ ಉಪವಾಸವಿರುತಿದ್ದರು. ಇರುಳು ಸ್ವಾಮಿಯ ಪೂಜೆಯಾದ ಮೇಲೆ ಮಡಿಯಿಂದ ಮಾಡಿದ ಅಡುಗೆಯನ್ನು ಉಣುತಿದ್ದರು. ಇರುಳು ಮಾವನಿಗೆ ಇರುವ ಅಡುಗೆಯನ್ನು ಮತ್ತು ಸ್ವಾಮಿಗಿರುವ ನೈವೇದ್ಯವನ್ನು ತಯಾರಿಸುವುದು ಲಕ್ಷ್ಮಿಯ ಕೆಲಸವಾಗಿತ್ತು. ಅವಳು ಸಂಜೆ ನದಿಗೆ ಹೋಗಿ ತಣ್ಣೀರಲ್ಲಿ ಮಿಂದು ಬಂದು ಒದ್ದೆ ಬಟ್ಟೆಯನ್ನುಟ್ಟುಕೊಂಡು ಪ್ರತ್ಯೇಕವಾದ ಒಂದು ಕೋಣೆಯಲ್ಲಿ ಅಡಿಗೆ ಮಾಡುತಿದ್ದಳು; ಸ್ವಾಮಿಗಿರುವ ನೈವೇದ್ಯವನ್ನು ತಯಾರಿಸಿ ಕೊಡುತಿದ್ದಳು.

ಅಂದು ಶುಕ್ರವಾರ ದಿನವಾದುದರಿಂದ ಇರುಳು ಮನೆಯಲ್ಲಿ ಮುರುಗನ ಪೂಜೆ ಇತ್ತು. ಲಕ್ಷ್ಮಿ ಇರುಳು ಅಡುಗೆಯನ್ನು ಸಿದ್ಧಗೊಳಿಸುವ ಮುನ್ನ ಮಿಂದುಬರಲೆಂದು ಹೊಳೆಗೆ ಹೋದಳು. ಸ್ನಾನ ಮಾಡುವ ಕಡವಿನಲ್ಲಿ ಜನ ಸಂಚಾರವಿರಲಿಲ್ಲ. ದೊಡ್ಡದೊಂದು ಮಾವಿನ ಮರ ಹೊಳೆಯ ದಂಡೆಯಲ್ಲಿ ಬೆಳೆದು ನಿಂತು ಕಡವನ್ನು ಜನ ದೃಷ್ಟಿಯಿಂದ ಮರೆಯಾಗಿಸಿತ್ತು. ಅವಳು ಹೊಳೆ ದಂಡೆಯುಲ್ಲಿದ್ದ ಕಲ್ಲಿನ ಮೇಲೆ ಒಗೆಯು

ಲೆಂದು ತೊಟ್ಟ ಬ್ಲವುಸನ್ನು ಬಿಚ್ಚಿ ಹಾಕಿದಳು. ಒಂದು ಕಿರಿಯ ಮುಂಡನ್ನು ಸುತ್ತಿಕೊಂಡು ಸೊಂಟಕ್ಕೆ ಸುತ್ತಿದ ಪೊಡವೆಯನ್ನು ಬಿಚ್ಚಿ ನೀರಿಗೆ ಹಾಕಿದಳು. ಪೊಡವೆ ಬ್ಲವುಸುಗಳಿಗೆ ಸಾಬೂನು ಹಾಕಿ ಕಲ್ಲು ಮೇಲೆ ನಾಲ್ಕು ಸಲ ಬಡಿದಳು.

ಲಕ್ಷ್ಮಿ ವಸ್ತ್ರಗಳನ್ನು ಒಗೆಯುತಿದ್ದಾಗ ಅವಳ ಮನಸ್ಸು ನಾಯಕನ ಬೆನ್ನ ಹಿಂದೆ ಓಡುತಿತ್ತು. ಬೆಳಗಿನಿಂದ ಅವಳು ಆತನ ಮೋರೆಯನ್ನು ನೋಡಿರಲಿಲ್ಲ. ಅತ್ತೆಯ ಮೇಲಿನ ಮುನಿಸೇ ಅದಕ್ಕೆ ಕಾರಣವಾಗಿತ್ತು. ಅತ್ತೆಯ ಗದರಿಕೆಯಿಂದ ನೊಂದ ತಾನು ನಾಯಕನಿಗೆ ಶಿಕ್ಷೆ ಮಾಡಿದುದನ್ನು ಆಲೋಚಿಸಿ ಅವಳಿಗೇ ನಗು ಬಂತು. ಅವಳು ಅಂದು ನಾಯಕನ ಮುಖವನ್ನು ನೋಡದಿದ್ದರೂ, ಆತ ಆಕೆಯ ಮನಸ್ಸಿನಿಂದ ಒಂದು ಕ್ಷಣ ಮರೆಯಾಗಿರಲಿಲ್ಲ. ಅವನು ಆಕೆಯ ಚಿತ್ತದಲ್ಲಿ ಸುಳಿದು, " ನೋಡು, ನೀನು ಮಾತಾಡದಿದ್ದರೇನು ? ನನಗೆ ಮೋರೆ ತೋರಿಸದೆ ಗಾವುದ ದೂರ ಸರಿದು ನಿಂತರೇನು ? ಇಗೋ, ನಾನು ನಿನ್ನ ಜತೆಯಲ್ಲಿಯೇ ಇರುವೆನು; ಬೆನ್ನನ್ನು ಬಿಡದೆ ನಿನ್ನನ್ನು ಅನುಸರಿಸುತ್ತಿರುವೆನು; ನನ್ನನ್ನು ನಿನ್ನಿಂದ ಬೇರ್ಪಡಿಸಲು ಸಾಧ್ಯವೇ ಇಲ್ಲ ! " ಎಂದು ಹೇಳುತಿದ್ದ.

ಅವಳು ಬಾಗಿ ಮಡುವಿನಲ್ಲಿ ನಿಂತ ನೀರನ್ನು ನೋಡಿದಳು. ಆ ನೀರಲ್ಲಿ ತನ್ನ ನೆರಳಿಗೆ ಪ್ರತಿಯಾಗಿ ನಾಯಕನ ಮುಖ ಅವಳಿಗೆ ಗೋಚರಿಸಿತು. ಅವಳು ತಲೆಯನ್ನೆತ್ತಿ " ನಾಯಕ, ನಾನು ನಿನ್ನಿಂದ ದೂರ ಸರಿದರೂ ನೀನು ನನ್ನ ಬಿಡಲೊಲ್ಲಿ; ನೀನು ನನ್ನ ಪ್ರಾಣದ ಪ್ರಾಣವಾಗಿ ಹೋಗಿದ್ದಿ ! " ಎಂದು ಉದ್ಗಾರವೆತ್ತಿದಳು.

ಈಗ ಲಕ್ಷ್ಮಿ ನೀರಲ್ಲಿ ತನ್ನ ಮೋರೆಯನ್ನೇ ಕಂಡಳು. ತಾನು ಮಾಡುತಿದ್ದ ನಾಯಕನ ಧ್ಯಾನ ತನ್ನನ್ನು ಮರುಳುಗೊಳಿಸಿತೆಂದು ಅವಳಿಗೆ ತಿಳಿಯಿತು. ಅವಳು ನೀರಲ್ಲಿ ಒಂದು ಮುಳುಗು ಹಾಕಿ ಮೈಗೆ ಸಾಬೂನು ಉಜ್ಜುತ್ತಾ, " ಹೌದು. ನಾಯಕನನ್ನು ಕಾಣದಿದ್ದರೆ ನನಗೆ ಮರುಳು ಹಿಡಿದು ಬಿಡುವುದು. " ಎಂದು ತನ್ನಲ್ಲಿಯೇ ಹೇಳಿಕೊಂಡಳು.

ಮೈಯುಜ್ಜಿ ಮುಗಿಸಿದಳು. ಅವಳು ಮಡುವಿಗಿಳಿದು ನಾಲ್ಕು

ಮೂರು ಈಜಿದಳು. ನೀರಲ್ಲಿ ಮರಳಿ ಮುಳುಗ ಹಾಕಿ ಮೈಗೆಂಟಿದ ಸಾಬೂನನ್ನು ತೊಳೆದು ಕಳೆದಳು.

ಅಷ್ಟರಲ್ಲಿ ಸೂರ್ಯ ಅಸ್ತಮಿಸಿದ್ದ. ಬೆಳಕು ಮಬ್ಬಾಗತೊಡಗಿತು. ಲಕ್ಷ್ಮಿ ನೀರಿನಿಂದ ಮೇಲೆದ್ದು ಬಂದಳು. ಅವಳು ಮೈಗೆ ಒದ್ದೆ ಪೊಡವೆಯನ್ನು ಸುತ್ತಿಕೊಂಡು ಟವೆಲಿನಿಂದ ನೆನೆದ ಮುಡಿಯನ್ನು ಒರೆಸಿ ನೀರು ತೆಗೆದಳು. ಆ ವೇಳೆಗೆ ಬೆಳಕೆಲ್ಲ ಮರೆಯಾಗಿ ಕತ್ತಲೆ ಕವಿಯಿತು. ಇನ್ನು ನಿಂತರೆ ಅಡುಗೆ ಮಾಡಲು ವಿಳಂಬವಾಗುವುದು; ದಿನವೆಲ್ಲ ಉಪವಾಸ ವಿದ್ದು ಹಸಿದ ಮಾವ ರೊಚ್ಚಿಗೆದ್ದಾರು ಎಂದು ಆಲೋಚಿಸಿ ಅವಳು ತುರುಬು ಗಂಟುಹಾಕಿಕೊಂಡು ಮನೆಗೆ ಹೊರಟಳು.

ಲಕ್ಷ್ಮಿ ನದಿಯ ಪಾತ್ರೆಯಿಂದ ಮೇಲೇರಿ ಬಂದಳು. ಮನೆಗೆ ಹೆಚ್ಚು ದೂರವಿರಲಿಲ್ಲ. ಅವಳು ಬೇಗ ಬೇಗನೆ ಹೆಜ್ಜೆ ಹಾಕುತ್ತಾ ಸಾಗಿದಳು. ಮಾವಿನ ಮರದೆಡೆಗೆ ಬಂದಾಗ ಅವಳ ಮೈಮೇಲೆ ಸರಸರನೆ ನೀರಿನ ಅಭಿಷೇಕವಾಯಿತು. ತನ್ನ ಮೈಮೇಲೆ ನೀರು ಸುರಿದವರು ಯಾರೆಂದು ಅವಳಿಗೆ ಆಶ್ಚರ್ಯವಾಯಿತು. ತನ್ನನ್ನು ಬೆದರಿಸಲೆಂದು ಚಿರುತೆ ಮಾವಿನ ಮರದ ಮರೆಯಲ್ಲಿ ನಿಂತು ಶೀಸೆಯಲ್ಲೋ, ತಂಬಿಗೆಯಲ್ಲೋ ತುಂಬಿಸಿ ತಂದ ನೀರನ್ನು ತನ್ನ ಮೇಲೆ ಎರಚಿರಬಹುದೆಂದು ಅವಳು ಆಲೋಚಿಸಿದಳು. ಹಿಂದೊಂದು ಮಂಗಳವಾರ ದಿನ ಹೊಳೆಯಲ್ಲಿ ಸ್ನಾನಮಾಡಿ ಬರುತಿದ್ದಾಗ ಆ ಕಿಲಾಡಿ ಹುಡುಗಿ ಮರೆಯಲ್ಲಿ ನಿಂತು ನೀರೆರಚಿದ್ದಳು. ಈ ಚೇಷ್ಟೆ ಅವಳದೇ ಆಗಿರಬೇಕೆಂದು ಊಹಿಸಿ ಲಕ್ಷ್ಮಿ, " ಲೇ ಚಿರುತೆ, ಇದೇನೇ ನಿನ್ನ ಕುಚೇಷ್ಟೆ! ನೋಡು, ಮಾವನ ಪೂಜೆಗೆ ತಡವಾಯಿತು. ನೀನು ನೀರು ಸುರಿದು ಮೈಲಿಗೆ ಮಾಡಿದುದರಿಂದ ನಾನು ಮರಳಿ ನೀರಲ್ಲಿ ಮುಳುಗಿ ಬರಬೇಕಾಯಿತು! " ಎಂದು ಉದ್ಗಾರವೆತ್ತಿದಳು.

ಮಾವಿನ ಮರದ ಮರೆಯಿಂದ ಚಿರುತೆಯ ನಗುವಿನ ಧ್ವನಿ ಕೇಳಿಸಲಿಲ್ಲ. ಆದರೆ ನೀರು ಮಾತ್ರ ಧಾರಾಕಾರವಾಗಿ ಅವಳ ಮೈಮೇಲೆ ಬೀಳುತ್ತಿತ್ತು. ಇದು ಚಿರುತೆಯ ಕಿಡಿಗೇಡಿತನವಲ್ಲವೆಂದು ಲಕ್ಷ್ಮಿಗೆ ತಿಳಿಯಿತು. ಅವಳ ಆಶ್ಚರ್ಯ ಇಮ್ಮಡಿಸಿತು. ಆಶ್ಚರ್ಯದೊಡನೆ ದಿಗಿಲೂ ಬೆರೆಯಿತು. ಹೌದು. ಮರದ ಮರೆಯಲ್ಲಿದ್ದ ಶಂಕರ ತನ್ನ ಸೊಂಡಿ

ಲನ್ನು ಅವಳ ನೆತ್ತಿಯ ಮೇಲೆ ಎತ್ತಿ ಹಿಡಿದಿದ್ದ. ಆತನೇ ಸೊಂಡಿಲಲ್ಲಿ ತುಂಬಿಸಿ ತಂದ ನೀರನ್ನು ಆಕೆಯ ಮೈಮೇಲೆ ಧಾರೆ ಎರೆಯುತಿದ್ದ !

ಶಂಕರನ ಕೀಟಲೆಯನ್ನು ಕಂಡು ಲಕ್ಷ್ಮಿಗೆ ನಗು ಬಂತು. ಆನೆ ಬಹಳ ಸಮೀಪದಲ್ಲಿರುವುದನ್ನು ಕಂಡು ಅವಳಿಗೆ ದಿಗಿಲಾಯಿತು. ಆನೆ ಕಾರನೂ ಸಮೀಪದಲ್ಲಿರಲಿಲ್ಲ. ಅವಳು ಮುಂದೆ ಅಡಿ ಇಡುವುದರೊಳಗೆ ಆನೆ ಮಾವಿನ ಮರದ ಮರೆಯಿಂದ ಸರಿದು ಅವಳ ದಾರಿಗೆ ಅಡ್ಡ ನಿಂ ತಿತು. ಆನೆಯನ್ನು ಹಾಯ್ದು ಹೋಗಲು ದಾರಿಯಲ್ಲಿ ಎಡೆ ಇರಲಿಲ್ಲ. ಲಕ್ಷ್ಮಿ ನಾಲ್ಕು ಹೆಜೆ ಹಿಂದೆ ಸರಿದು, " ಶಂಕರ, ಇದೇನು ನಿನ್ನ ಉಪ ದ್ರವ ? ಆನೆಕಾರ ನಿನ್ನ ಬಿಟ್ಟು ಎಲ್ಲಿ ಭಂಗಿ ಮುಕ್ಕುತಿದ್ದಾನೋ ? '' ಎಂದು ದೊಡ್ಡ ದನಿಯಲ್ಲಿ ಉದ್ಗಾರವೆತ್ತಿದಳು.

" ಪಾಪಾತಿ, ಶಂಕರ ಅಲ್ಲಿಗೆ ಬಂದಿದ್ದಾನೆಯೇ ? '' ಹೊಳೆಯಾಚೆ ದಡದಿಂದ ನಾಯಕನ ಸ್ವರ ಕೇಳಿಸಿತು.

'' ಹೂಂ. ಇಲ್ಲಿ ಬಂದು ನನ್ನ ಕಾಡುತಿದ್ದಾನೆ. ನೀನೆಲ್ಲಿ ಹೋದೆ. ಮಾವನ ಪೂಜೆಗೆ ತಡವಾಯಿತು। '' ಲಕ್ಷ್ಮಿ ದೊಡ್ಡ ದನಿಯಲ್ಲಿ ಕೂಗಿ ಹೇಳಿದಳು : '' ಶಂಕರ ದಾರಿಗೆ ಅಡ್ಡನಿಂತು ನನ್ನ ತಡೆದಿದ್ದಾನೆ. ''

'' ಅವನು ಬಲು ತುಂಟನಾಗಿ ಹೋಗಿದ್ದಾನೆ. " ನಾಯಕ ಮಾರು ಲಿದ : " ನಾನು ಮೀಯಿಸಿ ದಡ ಹತ್ತಿಸಿದೆ. ಒಂದಿಷ್ಟು ಮೈ ತೊಳೆದು ಕೊಳ್ಳೋಣವೆಂದು ನೀರಿಗಿಳಿದೆ. ಅಷ್ಟರಲ್ಲಿ ಅವನು ಮಂಗಮಾಯದಲ್ಲಿ ಹೊಳೆದಾಟಿ ನಿಮ್ಮನ್ನು ಕಾಡುತಿದ್ದಾನೆ ! "

ನಾಯಕ ಮಡುವಿಗೆ ಧುಮುಕಿ ಹೊಳೆಯನ್ನು ಈಜಿ ಈಚೆ ದಡ ವನ್ನು ಸೇರಿದ. ಅವನ ಮೈ ಮುಡಿಗಳಿಂದ ನೀರ ಹನಿಗಳು ತೊಟಕುತಿ ದ್ದುವು. ಲಕ್ಷ್ಮಿ '' ನನಗೆ ತಡವಾಯಿತು. ನೀನು ಬೇಗ ಅಡ್ಡನಿಂತ ಶಂಕರನನ್ನು ಅಟ್ಟಿಕೊಂಡು ಹೋಗು. " ಎಂದು ನುಡಿದಳು.

ನಾಯಕ ನಿಂತಲ್ಲಿಂದ ಅಲುಗದೆ ಪಾಪಾತಿಯ ಮೋರೆಯನ್ನು ನಿಟ್ಟಿಸಿ ನೋಡಿದ. ಅನಂತರ ಅವನು, " ಪುಟ್ಟ ಪಾಪಾತಿ, ನಿಮಗೇಕೆ ನನ್ನ ಮೇಲೆ ಸಿಟ್ಟು ? '' ಎಂದು ಪ್ರಶ್ನಿಸಿದ.

" ನಾಯಕ, ನನಗೆ ನಿನ್ನ ಮೇಲೆ ಸಿಟ್ಟಿಲ್ಲ. " ಮಾತಾಡುವಾಗ

ಲಕ್ಷ್ಮಿಯ ದನಿ ನಡುಗಿತು.

"ಹಾಗಾದರೆ ನೀವೇಕೆ ಬೆಳಗಿನಿಂದ ನನಗೆ ಮೋರೆ ತೋರಿಸಲಿಲ್ಲ; ಒಂದು ಮಾತನ್ನಾಡಲಿಲ್ಲ ? ನೀವು ಕೈಯಾರೆ ಒಂದು ಹಿಡಿಕೂಳು ಬಡಿಸಿದರೆ ಹೊಟ್ಟೆ ತುಂಬಿದಷ್ಟು ಸಂತೋಷವಾಗುವುದು. ನಾನೇನಾದರೂ ತಪ್ಪು ಮಾಡಿದ್ದರೆ ತಿಳಿಸಿರಿ. ಈ ಹಣೆಯನ್ನು ನಿಮ್ಮ ಅಡಿಗಳಿಗೆ ಹಾಕಿ ಒರೆಯುತ್ತೇನೆ !''

ಕುರುಬ ಹುಡುಗ ತನ್ನಲ್ಲಿರಿಸಿದ ಪ್ರೇಮ ವಿಶ್ವಾಸಗಳನ್ನು ನೋಡಿ ಅವಳು ಬೆಳಿಗ್ಗೆ ಕೈಗೊಂಡ ನಿರ್ಧಾರ ಸಡಿಲವಾಯಿತು. ತಾನು ಆತನಿಗೆ ಉಣ ಬಡಿಸದೆ, ಆತನಿಗೆ ಮೆಲ್ಲಲು ಕೈಯಾರೆ ತಾಂಬೂಲ ಕೊಡದೆ ಎಷ್ಟು ನೋಯಿಸಿದೆನೆಂದು ಅವಳು ಅಂತರಂಗದಲ್ಲಿಯೇ ಪರಿತಾಪಪಟ್ಟಳು. ಅವಳು ಮಿದುದನಿಯಲ್ಲಿ, "ನಾಯಕ, ದೇವರಾಣೆಯಾಗಿಯೂ ನನಗೆ ನಿನ್ನ ಮೇಲೆ ಮುನಿಸಿಲ್ಲ; ಆದರೆ ಅತ್ತೆಯ ಮೇಲೆ ಕೋಪ ಬಂತು. ಅವರಿಗೆ ನನ್ನ ಮೇಲೆ ಸಂಶಯ ಬಂದಿದೆ. ಆದುದರಿಂದ ನಿನ್ನ ಈ ದಿನ ಮಾತಾಡಿಸಲಿಲ್ಲ. '' ಎಂದು ನುಡಿದಳು.

" ಪಾಪಾತಿ, ಎತ್ತಿಗೆ ಜ್ವರ ಬಂದಾಗ ಕೋಣನಿಗೆ ಬರೆ ಹಾಕಿದರು ಅಂತಾರಲ್ಲ; ಹಾಗಾಯಿತು ನಿಮ್ಮ ಸೇಡು." ನಾಯಕ ಪಡಿನುಡಿದ : "ಕಲ್ಲಪ್ಪ ಗುಂಡಪ್ಪರ ಜಗಳದಲ್ಲಿ ಮೆಣಸು ನಜ್ಜು ಗುಜ್ಜಾಯಿತಂತೆ !"

" ನಾಯಕ, ನಾನು ಹೇಗೆ ನಿನ್ನ ಮರೆಯಲಿ ? ಇಂದು ಬೆಳಗಿನಿಂದ ಈ ವರೆಗೆ ಒಂದೇ ಒಂದು ನಿಮಿಷ ಬಿಡದೆ ನಿನ್ನನ್ನೇ ಧ್ಯಾನಿಸುತಿದ್ದೆ. ''

" ನಿಜವೇ ಪಾಪಾತಿ ? "

"ನಿಜ ನಾಯಕ. ನಿನ್ನಾಣೆಯಾಗಿಯೂ ದಿಟ ! '' ಲಕ್ಷ್ಮಿ ತನ್ನ ತೋಳುಗಳನ್ನು ಚಾಚಿದಳು.

ಮರುಕ್ಷಣದಲ್ಲಿ ನಾಯಕ ಆಕೆಯ ತೋಳ ತೆಕ್ಕೆಗೆ ಒಳಗಾದ. ಅವನ ತೊಯ್ದ ಮೈಗೆ ಲಕ್ಷ್ಮಿ ಅಂಟಿಕೊಂಡಿದ್ದಳು. ಅವನ ತುಟಿಗಳ ತಾಂಬೂಲರಾಗವನ್ನು ಆಕೆಯ ತುಟಿಗಳು ತವಕದಿಂದ ಸವಿಯುತಿದ್ದುವು.

ಬಾನಿನಲ್ಲಿ ಮೂಡಿ ಬಂದ ಚಂದ್ರ ಅವರ ರಹಸ್ಯಪ್ರಣಯವನ್ನು ನೋಡಿದ. ಅವನು ಚೆಲ್ಲಿದ ನಗುವೇ ಬೆಳದಿಂಗಳಾಗಿ ನೆಲದ ಮೇಲೆ ಪಸರಿಸಿತು.

# ೧೭

ಒಂದು ವ್ಯಾಜ್ಯದ ಸಲುವಾಗಿ ಲಕ್ಷ್ಮಿಯ ಮಾವ ಕೇಳು ಕುಟ್ಟಿ ನಾಯರರು ಕಲ್ಲೀಕೋಟೆಗೆ ಬಂದಿದ್ದರು. ಅವರು ಮಾಡರ್ನ ಹೋಟೆಲಿನ ಒಂದು ಕೋಣೆಯಲ್ಲಿ ತಂಗಿದ್ದರು. ಅವರು ವಕೀಲರನ್ನು ಕಂಡು ಮಾತನಾಡಿ ಮುಗಿಸಿದ ಮೇಲೆ ಹೋಟೆಲಿಗೆ ಬಂದರು; ಊಟವನ್ನು ತೀರಿಸಿ ತಮ್ಮ ಕೋಣೆಗೆ ಬಂದು ವಿಶ್ರಮಿಸಿದರು. ಅವರು ಹಾಸಿಗೆಯ ಮೇಲೆ ಹೊರಳಿದರು. ಸೆಕೆ ಹೆಚ್ಚಾದುದರಿಂದ ಓದಲೆಂದು ತೆಗೆದುಕೊಂಡ 'ಮಾತೃಭೂಮಿ' ಪತ್ರಿಕೆಯನ್ನೇ ಬೀಸಣಿಗೆಯನ್ನಾಗಿ ಮಾಡಿ ಗಾಳಿ ಹಾಕಿಕೊಂಡರು.

ಹೋಟೆಲಿನ ಊಟವೇನೋ ಸೊಗಸಾಗಿತ್ತು. ಆದರೆ ಅದು ಮಾವನ ನಾಲಗೆಗೆ ಸವಿದೋರಲಿಲ್ಲ. ಅವರು ಬಡಿಸಿದ ಪಲ್ಯ, ಪಚ್ಚಡಿ ಮತ್ತು ಕೂಟುಕರಿಗಳನ್ನು ದೂಡಿ ಬರೇ ಮೊಸರನ್ನವನ್ನುಂಡು ಊಟ ಮುಗಿಸಿದ್ದರು. ಬಾಧಿಸಿದ ಚಿಂತೆ ಅವರ ನಾಲಗೆಯ ರುಚಿಯನ್ನು ಕೆಡಿಸಿತ್ತು. ವಕೀಲರು ಆ ದಿನ ಬಂದೇ ತೀರಬೇಕೆಂದು ಪತ್ರ ಬರೆಯದಿದ್ದರೆ, ಅವರು ಇಂದು ಕಲ್ಲೀಕೋಟೆಗೆ ಬರದೆ ಮನೆಯಲ್ಲಿ ಎದ್ದ ಮಹಾಸಮಸ್ಯೆಯನ್ನು ಬಗೆಹರಿಸಲು ತಲೆಗೊಡುತಿದ್ದರು.

ಹಿಂದಣ ಇರುಳು ಅವರು ಸಜ್ಜೆ ಓವರಿಯಲ್ಲಿ ಮಲಗಲು ಹೋದಾಗ ತಮ್ಮ ತರವಾಡಿನ ಮಾನಕಳೆಯುವ, ನೆಂಟರಿಷ್ಟರ ಮುಂದೆ ತಲೆಯೆತ್ತಿ ನಡೆಯದಂತೆ ಮಾಡುವ ಈ ಅನಿಷ್ಟ ಬಂದು ತಮ್ಮ ಹೆಗಲ ಮೇಲೆ ಕೂರುವುದೆಂದು ಎಣಿಸಿರಲಿಲ್ಲ. ಹಿಂದೆ ಕುಂಞಿಕಾವು ಈ ಸಂದೇಹವನ್ನು ಅವರ ಕಿವಿಗಳಿಗೆ ಹಾಕಿದ್ದಳೆಂಬುದು ನಿಜ; ಆದರೆ ಆಕೆಯ ನುಡಿಯನ್ನು ಅವರು ನಂಬಿರಲಿಲ್ಲ. ಆಕೆಗೆ ಕುರುಬ ಹುಡುಗನನ್ನು ಕಂಡರೆ ಆಗದುದರಿಂದ ಬಣ್ಣಕಟ್ಟಿ ಹೇಳುತಿದ್ದಾಳೆಂದು ಅವರು ಅವಳ ಮಾತನ್ನು ಕಡೆಗಣಿಸಿದ್ದರು. ಅಂದು ಆಕೆಯ ಹಿತ್ತೋಕ್ತಿಗಳಿಗೆ ಕಿವಿಗೊಟ್ಟಿದ್ದರೆ ಮನೆಯೊಳಗೆ ಈ ಜ್ವಾಲಾಮುಖಿ ಸಿಡಿದೇಳುತ್ತಿರಲಿಲ್ಲ.

ಆ ದೃಶ್ಯ ಈಗ ನಾಯರರ ಮನಸ್ಸಿನ ಮುಂದೆ ಬಂದು ನಿಂತಿತು. ಅವರು ಹಿಂದಣ ರಾತ್ರಿ ಲಕ್ಷ್ಮಿಯನ್ನು ಕರೆದು, "ಲಕ್ಷ್ಮೀ, ನಾಳೆ ಕಲ್ಲೀಕೋಟೆಗೆ ಹೋಗಬೇಕು. ಬೆಳಿಗ್ಗೆ ಪನಮರದಿಂದ ಮೊದಲನೆಯ ಬಸ್ಸನ್ನು

ಹಿಡಿಯಬೇಕು; ನೀನು ಬೆಳಿಗ್ಗೆ ನಾಲ್ಕು ತಾಸಿಗೆ ಬಚ್ಚಲು ಮನೆಗೆ ಉರಿ ಹಾಕಿ ಒಂದಿಷ್ಟು ಕಾಫಿ ತಿಂಡಿಗಳನ್ನು ಮಾಡಿಬಿಡು. ಐದು ತಾಸಿಗೆ ನನ್ನ ಕರೆದು ಎಚ್ಚರಿಸಿ ಬಿಡು." ಎಂದು ಸೊಸೆಗೆ ಹೇಳಿದ್ದರು.

ಲಕ್ಷ್ಮಿ ಗಡಿಯಾರದಲ್ಲಿ ನಾಲ್ಕು ಗಂಟೆಗೆ ಅಲಾರಮು ಇಟ್ಟುಕೊಂಡು ಮಲಗಿದ್ದಳು. ಆಕೆಯ ಕೋಣೆಯಲ್ಲಿ ಅಲಾರಾಮು ಹೊಡೆಯುವುದು ಅವರಿಗೆ ಕೇಳಿಸಿತ್ತು. ನೀರು ಮನೆಯಲ್ಲಿ ಕಿಚ್ಚನ್ನು ಉರಿಸಲೆಂದು ಹೋದ ಲಕ್ಷ್ಮಿಯ ಹೆಜ್ಜೆಗಳ ಸಪ್ಪಳ ಮತ್ತು ಕದ ತೆರೆಯುವ ಸದ್ದುಗಳು ಸಹ ಅವರಿಗೆ ಕೇಳಸಿದ್ದುವು. ಆ ಮೇಲೆ ಅವರಿಗೆ ನಿದ್ದೆ ಹತ್ತಲಿಲ್ಲ. ಅವರು ಹೊರಗೆ ಹೋಗಿ ಬರುವೆನೆಂದು ಕೈಯಲ್ಲಿ ಲಾಂಥ್ರ ಹಿಡಿದುಕೊಂಡು ಹೊಳೆ ದಂಡೆಗೆ ಹೋಗಿ ಬಂದರು. ಮರಳಿದಾಗ ಪತ್ತಾಯಪುರೆಯಲ್ಲಿ ಲಾಂಥ್ರದ ಬೆಳಕು ಕಾಣಿಸಿತು. ಪಿಸು ಮಾತುಗಳು ಕೇಳಿಸಿದುವು. ನಾಯಕ ಯಾರ ಸಂಗಡ ಮಾತಾಡುತ್ತಿದ್ದಾನೆಂದು ಅವರಿಗೆ ಆಶ್ಚರ್ಯ ವಾಯಿತು. ಅವರು ನೇರಾಗಿ ನೀರುಮನೆಗೆ ಹೋಗದೆ ಪತ್ತಾಯಪುರೆಗೆ ಸರಿದರು. ಪುರೆಯ ಕದಗಳು ತೆರದಿದ್ದುವು. ಅವರು ಮೆಲ್ಲನೆ ತಲೆಯನ್ನು ಒಳಗೆ ಹಾಕಿ ಇಣಿಕಿ ನೋಡಿದರು. ಅಲ್ಲಿ ಕಂಡ ದೃಶ್ಯ ಅವರ ನೆತ್ತರನ್ನು ಹೆಪ್ಪುಗಟ್ಟಿಸಿತ: ಒಂದು ಕ್ಷಣ ಅವರು ಬೆರಗು ಮುನಿಸುಗಳಿಂದ ಮರ ವಟ್ಟು ಹೋದರು.

ಅವರು ಪತ್ತಾಯಪುರೆಯಲ್ಲಿ ಕಂಡ ನೋಟ ಮಾವನ ಚಿತ್ತದ ಮುಂದೆ ಬಂದು ನಿಂತಿತು. ಕಿರಿಯ ಅಲೆಯ ಮೇಲೆ ಬಿಡಿಸಿದ ಹಾಸಿ ಗೆಯ ಮೇಲೆ ನಾಯಕ ಕುಳಿತಿದ. ಆ ಕುರುಬ ಹುಡುಗನ ತೋಳತೆಕ್ಕೆ ಯಲ್ಲಿ ಅವರ ಸೊಸೆ ಲಕ್ಷ್ಮಿ ಇದ್ದಳು. ಅವಳು ತೊಟ್ಟ ಬ್ಲವುಜಿನ ಗುಂಡಿ ಗಳೆಲ್ಲ ಕಿತ್ತುಹೋಗಿದ್ದುವು. ಆಕೆಯ ವೃತ್ತ ಕುಚಕುಮುದಗಳನ್ನು ಕೀಳಲು ನಾಯಕನ ಕಪ್ಪು ಕೈಗಳು ಹವಣಿಸುತ್ತಿದ್ದವು. ಆಕೆ ನಾಯಕನ ಮೊಗದ ಮೇಲೆ ಚುಂಬನದ ಮಳೆಗರೆಯುತ್ತಿದ್ದಳು. ಆ ಮೊಗವನ್ನು ಆಕೆಯ ಕಣ್ಣುಗಳಲ್ಲಿ ಮಿನುಗುತ್ತಿರುವ ಕಾಂತಿಯನ್ನು ಅವರು ಎಂದೂ ಮರೆ ಯುವ ಹಾಗಿರಲಿಲ್ಲ. ಸೊಸೆ ಮೈಯ ಹಸಿವನ್ನು ಹಿಂಗಿಸಿಕೊಳ್ಳುವುದ ಕ್ಕಾಗಿ ಕುಲದ ಕೀರ್ತಿಯನ್ನು ಕೆಸರ ಹೊಂಡದಲ್ಲಿ ಅದ್ದಿದ್ದಳು.

ಮಾವನ ಮೈ ಕೋಪದಿಂದ ಬೆವೆತು ಹೋಯಿತು. ತನಗೆ ಎರಡನ್ನು ಬಗೆದ ಆ ಕುರುಬ ಹೈದನನ್ನು, ಕುಲದ ಮಾನವನ್ನು ಕಳೆದ ಆ ಸೊಸೆಯನ್ನು ಒದೆದು ಅಲ್ಲಿಯೇ ಹೂಳಿಬಿಡುವೆನೆಂದು ಅವರು ಆಲೋಚಿಸಿದರು. ಆ ಜಾರನನ್ನು ಹೊಡೆದು ಬೀಳಿಸುವೆನೆಂದು ಪತ್ತಾಯಪುರೆಯ ಜಗಲಿಯಲ್ಲಿದ್ದ ಹಾರೆಯನ್ನು ಎತ್ತಿಕೊಂಡರು.

ಆದರೆ ಅಂತರಂಗದಲ್ಲಿ ಉದಿಸಿ ಬಂದ ವಿವೇಕ ನಾಯರರ ಕೈ ಹಿಡಿದು ನಿಲ್ಲಿಸಿತು. ಅದು, "ನೀನು ಮಾಡುವುದಾದರೂ ಏನನ್ನು! ನೀನು ಕುರುಬ ಹುಡುಗನನ್ನು ಹೊಡೆದು ಕೆಡುಹುವುದರಿಂದ ತರವಾಡಿಗೆ ಅಂಟುವ ದುಷ್ಕೀರ್ತಿ ಇಲ್ಲವಾಗದು. ಆತನೆಬ್ಬಿಸುವ ಹುಯ್ಲು, ನಿನ್ನ ಸೊಸೆ ಆ ಕುರುಬ ಹುಡುಗನ ಜತೆಯಲ್ಲಿ ಚಕ್ಕಂದ ನಡೆಸಿದಳು ಎಂಬುದನ್ನು ಮನೆಯ ಆಳು ಕಾಳುಗಳಿಗೆಲ್ಲ ಡಂಗುರ ಸಾರುವುದು. ಮನೆಯ ಗುಟ್ಟು ಊರವರ ಸ್ವತ್ತಾಗುವುದು. ಉಮಿರಾಶಿಯೊಳಗೆ ಹುದುಗಿದ ಕಿಚ್ಚು ನಿನ್ನೆತ್ತಿ ಮನೆಯ ಸೂರಿಗೆ ಒಡ್ಡಿ ಹಿಡಿದಂತಾಗುವುದು. ಶಂಕರನಿಗೆ ಆನೆಕಾರನಿಲ್ಲವಾಗುವನು. ನಾಯಕನಷ್ಟು ಒಳ್ಳೆಯ ಆನೆಕಾರ ಬೇರೆಲ್ಲಿಯೂ ಸಿಗಲಾರನು. ದುಡುಕು ಕಾರ್ಯವನ್ನು ಕೆಡಿಸುವುದು." ಎಂದು ಅವರನ್ನು ಎಚ್ಚರಿಸಿತು.

ಮಾವ ಕೈಯಲ್ಲಿ ಹಿಡಿದ ಹಾರೆಯನ್ನು ಮರಳಿ ಗೋಡೆಗೆ ಆನಿಸಿದರು. ಈ ಸಿಕ್ಕನ್ನು ಕೋಪದಿಂದ ಬಿಡಿಸಲಾಗುವುದಿಲ್ಲ ಎಂದು ಅವರು ತಿಳಿದರು. ಈ ತೊಡರಿನಿಂದ ಪಾರಾಗಬೇಕಾದರೆ ಚದುರು ಅಗತ್ಯ ಎಂದು ಅವರು ಮನಗಂಡರು. ತಾವು ಈಗ ನಾಯಕನನ್ನು ಹಿಡಿದು ಹೊಡೆದರೆ ಅವನು ತೊಡಿಯನ್ನು ಬಿಟ್ಟು ಓಡಿ ಹೋಗುವನು; ಶಂಕರನನ್ನು ನೋಡಿಕೊಳ್ಳಲು ಅವನಂತಹ ಜಾಣ ಆನೆಕಾರನು ದೊರೆಯಲಾರನು. ನಾಯಕನಷ್ಟು ಪ್ರೀತಿಯಿಂದ ಬೇರೆ ಯಾರೂ ಆನೆಯನ್ನು ನೋಡಿಕೊಳ್ಳಲಾರರು ಎಂದು ಅವರು ತಮ್ಮ ಚಿತ್ತದಲ್ಲಿಯೇ ಮೆಲುಕು ಹಾಕಿದರು. ಈ ಆಲೋಚನೆ ಅವರ ಮನಸಿನ ಕಾವನ್ನು ನಸು ಆರಿಸಿತು. ಅವರು ಪತ್ತಾಯಪುರೆಯ ಜಗಲಿಯಿಂದ ಕೆಳಗಿಳಿದು ನೀರು ಮನೆಗೆ ಹೋದರು.

ಅವರ ಹೆಜ್ಜೆಗಳ ಸದು ಆ ಪ್ರಣಯಿಗಳಿಗೆ ಕೇಳಿಸಿತು. ಅವರು

ಮರುಕ್ಷಣದಲ್ಲಿ ಲಕ್ಷ್ಮಿ ಪತ್ತಾಯಪುರೆಯಿಂದ ಹೊರಬರುವುದನ್ನು ಕಂಡರು.

ಅವರು ಸ್ನಾನ ಜಪಗಳನ್ನು ಮುಗಿಸಿ ಬಂದಾಗ ಲಕ್ಷ್ಮಿ ಕಾಫಿ ಉಪ್ಪಿಟ್ಟುಗಳನ್ನು ಮಾಡಿ ಬಡಿಸಿಟ್ಟಿದ್ದಳು. ಅವಳು ಅವರ ಮುಂದೆ ತಲೆ ತಗ್ಗಿಸಿ, "ಮಾವ, ಕಾಫಿ ಉಪ್ಪಿಟ್ಟುಗಳು ಆಗಿವೆ. ಬಡಿಸಿದ್ದೇನೆ." ಎಂದು ನುಡಿದಳು.

"ನೀನು ಕುರುಬ ಹುಡುಗನಿಗೆ ಮೈತೆತ್ತ ಜಾರೆ; ನಿನ್ನ ಕೈಯ ನೀರನ್ನು ಮುಟ್ಟಲಾರೆ" ಎಂದು ಹೇಳಿ ಬಿಡಬೇಕೆಂದು ಆಲೋಚಿಸಿ ಮಾವ ಬಾಯ್ದೆರೆದರು. ಆದರೆ ಮನಸ್ಸಿನಲ್ಲಿ ಮೂಡಿ ಬಂದ ಆಲೋಚನೆ ಅವನ ನಾಲಗೆಗೆ ಕಡಿವಾಣವನ್ನು ತೊಡಿಸಿತು. ಈಗ ಸೊಸೆಯನ್ನು ಗದರಿಸಿದರೆ ಲೇಸಿಗಿಂತ ಕೇಡೇ ಹೆಚ್ಚಾಗಬಹುದು. ಕಾಮಕ್ಕೆ ಶರೀರವನ್ನೊಪ್ಪಿಸಿದವರು ವಿವೇಕವನ್ನು ಕಳೆದುಕೊಳ್ಳುತ್ತಾರೆ; ಲಕ್ಷ್ಮಿ ಜತೆಯಲ್ಲಿ ನಾಯಕನನ್ನು ಕಟ್ಟಿಕೊಂಡು ಓಡಿ ಹೋದರೆ ಏನು ಗತಿ? ಜಮೀನ್ದಾರರ ಸೊಸೆ ಕುರುಬನ ಬೆನ್ನು ಹಿಂದೆ ಓಡಿಹೋದಳು ಎಂಬ ಅಪಖ್ಯಾತಿ ತರವಾಡಿಗೆ ಅಂಟಿಕೊಳ್ಳುವುದು; ಈ ಕಹಿಯನ್ನುಣ್ಣಬೇಕು; ಈ ನಂಜನ್ನು ನುಂಗಿಕೊಂಡು ಒದಗಿದ ಆಪತ್ತಿನಿಂದ ಪಾರಾಗಬೇಕು ಎಂದು ನೆನೆದು ಅವರು ಎದೆಯಲ್ಲಿ ಮೊಳೆತು ತಳಿರುತಿದ್ದ ಮುನಿಸಿನ ಕುಡಿಯನ್ನು ಚಿಗುಟಿ ಹಾಕಿದರು.

ಅವರು ಸೊಸೆ ಬಡಿಸಿದ ಉಪ್ಪಿಟ್ಟನ್ನು ಮೆದ್ದು ಕಾಫಿಯನ್ನು ಕುಡಿದರು. ಆದರೆ ಆ ತಿನಸು ಅವರ ನಾಲಗೆಗೆ ರುಚಿಕರವಾಗಿ ತೋರಲಿಲ್ಲ. ಓಕರಿಕೆಬರುವಂತಾಯಿತು. ತಾವು ನಿಷ್ಠೆಯಿಂದ ಮುರುಗನ ಸೇವೆ ಮಾಡಿದರೂ ಆತ ಪ್ರತಿಫಲವಾಗಿ ತನ್ನ ನೆತ್ತಿಯ ಮೇಲೆ ಕಿಚ್ಚಿನ ಕಣಲುಗಳನ್ನು ಮಳೆಗರೆಯುವುದೇ? ಅಲ್ಲ ಆತ ತನ್ನ ಸ್ಥೈರ್ಯವನ್ನು ಪರೀಕ್ಷಿಸಲೆಂದೇ ಈ ವಿಪತ್ತನ್ನು ತಂದೊಡ್ಡಿದ್ದಾನೆ. ತಾವು ಈಗ ತಾಳ್ಮೆಯಿಂದ ಈ ಗಂಟನ್ನು ಬಿಡಿಸಿ ತೊಡಕಿನಿಂದ ಪಾರಾಗಬೇಕು ಎಂದು ಅವರು ಹೇಳಿಕೊಂಡರು.

"ಮಾವ, ಸ್ವಲ್ಪ ಉಪ್ಪಿಟ್ಟು ಬಡಿಸಲೇ?" ಸೊಸೆ ಕೇಳಿದಳು. ಭೀತಿಯಿಂದ ಆಕೆಯ ಸ್ವರ ನಡುಗುತ್ತಿದ್ದುದನ್ನು ಅವರು ಗಮನಿಸದೆ ಇರಲಿಲ್ಲ.

" ಈ ನಸುಕಿನಲ್ಲಿ ತಿಂಡಿ ಸೇರದು." ಎಂದು ಹೇಳಿ ಅವರು ಎಲೆಯ ಮುಂದಿನಿಂದ ಎದ್ದರು.

ಅವರು ಕೈತೊಳೆದು ಮಡಿಯಾದ ತೊಡಿಗೆಗಳನ್ನು ಧರಿಸಿಕೊಂಡರು. ಅವರು ಚಿರಿಕಂಟನನ್ನು ಕರೆದು ತಮ್ಮ ಹಾಸಿಗೆ ಟ್ರಂಕುಗಳನ್ನು ಹೊತ್ತು ಕೊಳ್ಳಲು ಹೇಳಿದರು. ಅವರು ಮನೆಯಿಂದ ಹೊರಡುವ ಮುನ್ನ ಆಂಡ ವನಿಗೆ ಕೈಮುಗಿದು " ಈ ಬಿಕ್ಕಟ್ಟಿನಿಂದೊಮ್ಮೆ ಪಾರುಗಾಣಿಸು. '' ಎಂದು ಪ್ರಾರ್ಥಿಸಿದರು,

ಪನಮರದಲ್ಲಿ ಅವರು ಬಸ್ಸು ಹತ್ತಿ ಕುಳಿತಾಗಲೂ ಅವನಿಗೆ ನೆಮ್ಮದಿ ಇರಲಿಲ್ಲ. ಲಕ್ಷ್ಮಿ ಮತ್ತು ನಾಯಕರ ಪ್ರೇಮ ಚಿಗುರಿದಾಂಗುಡಿ ಬಿಡಲು ಅವಕಾಶ ಕೊಡಕೂಡದು; ಅದಕ್ಕೆ ಉಪಾಯವೇನೆಂದು ಅವರ ಬುದ್ಧಿ ಚಿಂತಿಸತೊಡಗಿತು. ತಮ್ಮ ಕುಟುಂಬವಲ್ಲಿ ಅನೈತಿಕ ಪ್ರಸಂಗ ನಡೆದಿದೆ ಎಂದು ಯಾರಿಗೂ ತಿಳಿಯಕೂಡದು; ನಾಯಕ ಆನೆಕಾರನಾಗಿರುವುದು ತಪ್ಪಕೂಡದು; ಲಕ್ಷ್ಮಿಯನ್ನು ಆನೆಕಾರನಿಂದ ದೂರವಿರಿಸಬೇಕು; ಇದು ಹೇಗೆ ಸಾಧ್ಯ ಎಂದು ಅವರು ಆಲೋಚನೆಯ ಹಗ್ಗವನ್ನು ಹೊಸೆದರು.

ಅವರು ಹಾಸಿಗೆಯ ಇನ್ನೊಂದು ಮಗ್ಗಲಿಗೆ ಹೊರಳಿದರು. ಮರಳಿ ಅವರು ಅಂದು ಮುಂಜಾನೆಯಲ್ಲಿ ನಡೆದ ಘಟನೆಗಳನ್ನೆಲ್ಲಾ ನೆನೆದರು. ಅವರ ಮನಸ್ಸಿನಲ್ಲಿ ಮಾವಿನಕೆರೆ ವಾಸುದೇವ ಯಂಬ್ರಾಂದ್ರಿಯ ನೆನಪು ಸುಳಿಯಿತು. ಮಾವಿನಕೆರೆ ಯಂಬ್ರಾಂದ್ರಿಯ ಮಠ ತಮ್ಮ ಮನೆಯಿಂದ ನಾಲ್ಕು ಮೈಲು ದೂರದಲ್ಲಿದೆ. ಅವರ ತಂದೆ ದೇಗುಲದಲ್ಲಿ ಪೂಜೆಮಾಡಿ ಹೊಟ್ಟೆ ಹೊರೆಯಲೆಂದು ಉಡುಪಿಯ ಕಡೆಯಿಂದ ಬಂದಿದ್ದರು. ಅವರು ಪಾಕದ ನಾಯರರ ಗುಡಿಯಲ್ಲಿ ಶಾಂತಿ ಮಾಡುತ್ತಿದ್ದರು. ಅವರು ಶಾಂತಿ ಮಾಡಿದ ನಲವತ್ತು ವರ್ಷಗಳ ಕಾಲಾವಧಿಯಲ್ಲಿ ನಾಲ್ಕು ಕಾಸು ಸಂಪಾ ದಿಸಿ ಅನುಕೂಲವಂತರಾದರು. ಅವರು ಸಾಯುವಾಗ ತಮ್ಮ ಮಗ ವಾಸುದೇವನ ಪಾಲಿಗೆ ಇಪ್ಪತ್ತು ಪೋದಿ ಗದ್ದೆಬಯಲು ಮತ್ತು ಹತ್ತು ಏಕ್ರೆ ಕಾಫಿ ಮತ್ತು ಕಾಳು ಮೆಣಸು ತೋಟ ಇವುಗಳನ್ನು ಬಿಟ್ಟು ಹೋಗಿದ್ದರು. ಮಗ ವಾಸುದೇವ ಈಗ ಒಡಲು ಹೊರೆಯಲು ಶಾಂತಿ ಮಾಡಬೇಕಾಗಿಲ್ಲವಾದರೂ ತಂದೆ ನಲವತ್ತು ವರ್ಷಗಳಿಂದ ನಡೆಸಿ

ಕೊಂಡು ಬಂದ ಪೂಜೆಯನ್ನು ಮುಂದುವರಿಕೊಂಡು ಹೋಗುತ್ತಿದ್ದ.

ವಾಸುದೇವ ಗಟ್ಟಿಮುಟ್ಟಾದ ಮೈ ಕೈಗಳುಳ್ಳ ಚೆಲುವನಾದ ಹಾರುವ. ರಸಿಕನಾದ ಮಾತುಗಾರ. ತನ್ನ ಗದ್ದಿ ಬಯಲು ಮತ್ತು ತೋಟಗಳನ್ನು ಬೆವರು ಹರಿಸಿ ದುಡಿದು ಉರ್ಜಿತಗೊಳಿಸಿದ್ದ. ಆತನಿಗೆ ಈಗ ಪ್ರಾಯ ಮೂವತ್ತು, ಮೂವತ್ತೈದಕ್ಕಿಂತ ಹೆಚ್ಚು ಆಗಿರದು. ಮಳೆ ಗಾಲದಲ್ಲಿ ದುರ್ಗಾಪೂಜೆಯನ್ನು ಮಾಡಿಸಲೆಂದು ಶಾಸ್ತಾಸೇವೆಯನ್ನು ಈಡೇರಿಸಲೆಂದು ನಾಯರರ ಮನೆಗೆ ಬರುತಿದ್ದ. ತನ್ನ ನಗು ಮಾತು ಗಳಿಂದ ಅವರ ಹೃದಯವನ್ನು ಸೂರೆಗೊಳ್ಳುತಿದ್ದ. ಅನುಕೂಲವಂತನಾದ ಈ ಹಾರುವ ಗುಡಿಯ ಶಾಂತಿಯನ್ನು ಬಿಡದಿರುವುದನ್ನು ಕಂಡು ಒಮ್ಮೆ ನಾಯರರು, "ಯಂಬ್ರಾಂದ್ರಿ, ನೀವು ಈಗ ಅನುಕೂಲವಂತರಾಗಿದ್ದೀರಿ; ಆದರೂ ಗುಡಿಯ ಪೂಜೆಯನ್ನು ಬಿಡುವುದೇ ಇಲ್ಲವಲ್ಲ!" ಎಂದು ಕೇಳಿ ದ್ದರು.

"ನಾನೇಕೆ ಬಿಡಲಿ?" ಯಂಬ್ರಾಂದ್ರಿ ಮಾರ್ನುಡಿದರು: "ನಮ್ಮ ಅಪ್ಪ ಕೈಯಲ್ಲಿ ದುಗ್ಗಾಣಿ ಇಲ್ಲದೆ ಮೈನಾಡಿಗೆ ಬಂದರು. ನಲವತ್ತು ವರ್ಷ ಎಡೆಬಿಡದೆ ಈಶ್ವರನಿಗೆ ಸೇವೆ ಸಲ್ಲಿಸಿದರು. ಆ ಸ್ವಾಮಿಯ ಅನುಗ್ರಹ ದಿಂದ ಕಷ್ಟ ತಾಪತ್ರಯಗಳು ನೀಗಿ ಸುಖವಾಗಿ ಉಂಡು ಕಾಲುಚಾಚು ವಷ್ಟು ಆಸ್ತಿಪಾಸ್ತಿಗಳಾದುವು. ತಂದೆಗೆ ಒಲಿದು ಸೌಭಾಗ್ಯವನ್ನು ಕರು ಣಿಸಿದ ದೇವರ ಪೂಜೆಯನ್ನು ಬಿಡಲಾ?"

ಈ ಯಂಬ್ರಾಂದ್ರಿಯ ಕಣ್ಣುಗಳಿಗೆ ಲಕ್ಷ್ಮಿ ಬಿದ್ದಿದ್ದಳು. ಆಕೆಯ ಮೈಯ ಚೆಲುವು ಮತ್ತು ಅಂಗಾಂಗಗಳ ಮಾಟ ಯಂಬ್ರಾಂದ್ರಿಯ ಕಣ್ಣು ಗಳನ್ನು ಸೆಳೆದಿರಬೇಕು. ಅವರು ಒಮ್ಮೆ ಮನೆಗೆ ಬಂದಾಗ ಆಶೆತುಂಬಿದ ಕಣ್ಣುಗಳಿಂದ ಸೊಸೆಯನ್ನು ನೋಡಿದುದನ್ನು ಮಾವ ಕಾಣದೆ ಇರಲಿಲ್ಲ. ಅವರು "ಈ ಹೆಣ್ಣು ಯಾರು?" ಎಂದು ನಾಯರರನ್ನು ಕೇಳಿದರು.

"ಈಕೆ ನನ್ನ ಹಿರಿಯ ಸೊಸೆ. ಲಕ್ಷ್ಮಿ ಎಂದು ಹೆಸರು." ಮಾವ ಯಂಬ್ರಾಂದ್ರಿಗೆ ಸೊಸೆಯ ಪರಿಚಯ ಮಾಡಿಕೊಟ್ಟರು: "ಈಕೆಯ ಗಂಡ ದಂಡಿಗೆ ಸೇರಿ ಯುದ್ಧಕ್ಕೆ ಹೋಗಿದ್ದಾನೆ."

ಈ ನುಡಿಯನ್ನು ಕೇಳಿದಮೇಲೆ ಯಂಬ್ರಾಂದ್ರಿ ಮಾತಾಡಲಿಲ್ಲ.

ಈ ಹೆಣ್ಣನ್ನು ಆಗಿಸಿ ಪ್ರಯೋಜನವಿಲ್ಲವೆಂದು ತಿಳಿದು ಅವರು ಸುಮ್ಮನಾಗಿರಬೇಕು. ಒಂದು ಸಲ ಅವರು ನಾಯರರೊಡನೆ, "ಈ ವೈವಾಡಿನಲ್ಲಿ ಒಂಟಿ ಬಾಳ್ವೆಯನ್ನು ಬಾಳಿ ನನಗೆ ಬೇಸರ ಬಂದು ಹೋಗಿದೆ. ಒಂದು ಒಳ್ಳೆಯ ಸಂಬಂಧ ದೊರೆತರೆ ಆದೀತೆಂದು ಆಸೆಯಾಗಿದೆ." ಎಂದು ಉಸುರಿಸಿದರು. ಲಕ್ಷ್ಮಿಯನ್ನು ಮನಸ್ಸಿನ ಮುಂದೆ ನಿಲ್ಲಿಸಿಕೊಂಡೇ ಅವರು ಈ ಮಾತನ್ನು ಆಡಿರಬೇಕು.

ಲಕ್ಷ್ಮಿಯ ಗಂಡ ಸತ್ತಾಗ ನಡೆಸಿದ ತಿಥಿಯಂದು ಬ್ರಾಹ್ಮಣಸಂತರ್ಪಣೆಗೂ ಯಂಬ್ರಾಂದ್ರಿ ಬಂದಿದ್ದರು. ಅವರು ಬ್ರಾಹ್ಮಣರಿಗೆ ಅಡುಗೆ ಮಾಡುವುದರಲ್ಲಿ, ಬಡಿಸುವುದರಲ್ಲಿ ನೆರವಾಗಿದ್ದರು. ಅಂದು ದುಡಿದ ಇತರ ಹಾರುವರಿಗೆ ಕೊಟ್ಟಂತೆ ನಾಯರರು ವಾಸುದೇವ ಯಂಬ್ರಾಂದ್ರಿಗೂ ಎರಡು ರೂಪಾಯಿಗಳನ್ನು ಕೊಡಲು ಹೋದರು ಆದರೆ ಅವರು ಆ ಎರಡು ರೂಪಾಯಿಗಳನ್ನು ತೆಗೆದುಕೊಳ್ಳಲಿಲ್ಲ. ಅವರು ನಗುತ್ತಾ, "ನಾಯರ, ನಾನು ದುಡ್ಡಿನಾಸೆಯಿಂದ ನಿಮ್ಮಲ್ಲಿಗೆ ಬರಲಿಲ್ಲ. ನಾನು ಉಂಡು ಉಡುವಷ್ಟು ಸಂಪತ್ತನ್ನು ದೇವರು ಕೊಟ್ಟಿದ್ದಾನೆ. ನಿಮ್ಮಲ್ಲಿರುವ ವಿಶ್ವಾಸದಿಂದ ಕೆಲಸ ಮಾಡಿದೆ. ಈ ವಿಶ್ವಾಸ ಬೆಲೆಯನ್ನು ಹಣದಿಂದ ಅಳೆಲಾಯಗುವುದೇ ?" ಮಾರ್ನುಡಿದಿದ್ದರು.

ಹೌದು. ವಾಸುದೇವ ಯಂಬ್ರಾಂದ್ರಿ ಇತರ ಹಾರುವರ ಹಾಗೆ ಆಸೆ ಬೀನಾರಿಯಲ್ಲ. ಸಮಾರಾಧದೆ ಸಂತರ್ಪಣೆಗಳಲ್ಲಿ ದಕ್ಷಿಣೆಗೆಂದು ಮುಂದೆ ಬಂದು ಕೈಯೊಡ್ಡುವ ಆಸಾಮಿಯೂ ಅಲ್ಲ. ಹಿಂದೊಮ್ಮೆ ಪಾಕದ ಮೂಪಲ್ ನಾಯರರು ಹೇಳಿದ ಮಾತು ಈಗ ನಾಯರರಿಗೆ ನೆನಪಾಯಿತು. ಮೂಪಲ್ ನಾಯರರಿಗೆ ಪಾಕ, ಕುಪ್ಪತ್ತೋಡು ಮತ್ತು ಪುರಕಾಡಿ ಎಂಬ ನಾಲ್ಕು ಗ್ರಾಮಗಳಲ್ಲಿ ದೇವಾಲಯಗಳಿದ್ದುವು. ಅವರು ಒಮ್ಮೆ "ನೋಡು ಗೋವಿಂದ, ನಾವು ಗುಡಿಗಳಲ್ಲಿ ಪೂಜೆಗೆಂದು ನೇಮಿಸುವ ಪೂಜಾರಿಗಳೆಲ್ಲ ಕಳ್ಳ ಕೊರುಮದು. ನಾನು ಪುರಕಾಡಿ, ಕುಪ್ಪತ್ತೋಡು ಮತ್ತು ಪುಯಪಳ್ಳಿ ಅಂಬಲಗಳ ಪೂಜಾರಿಗಳನ್ನು ನೋಡಿದ್ದೇನೆ ಪೂಜೆಗೆಂದು ಕೊಟ್ಟ ಅಕ್ಕಿ, ಬೆಲ್ಲ, ತೆಂಗಿನಕಾಯಿ, ಹಾಲು, ತುಪ್ಪದೀಪ ಉರಿಸಲೆಂದು ಕೊಟ್ಟ ಎಣ್ಣೆ, –ಇವುಗಳನ್ನೆಲ್ಲಾ ಕದ್ದುಬಿಡುತ್ತಾರೆ. ಆದರೆ

ನಮ್ಮ ಪಾಕದ ಅಂಬಲದ ವಾಸುದೇವ ಯಂಬ್ರಾಂದ್ರಿ ಮಾತ್ರ ಅವ
ಹಾಗಲ್ಲ. ದೇವರಿಗೆಂದು ಕೊಟ್ಟ ಯಾವ ವಸ್ತುವನ್ನೇ ಆಗಲಿ ತನ
ಉಪಯೋಗಕ್ಕೆಂದು ಬಳಸನು. ದೇವರ ಸೇವೆಗೆಂದು ಬಂದುದನ
ಪ್ರಸಾದವೆಂದು ಅನ್ಯರಿಗೆ ಕೈ ಎತ್ತಿ ಕೊಟ್ಟಾನು. ಅಲ್ಲದೆ ಸಂತೆ
ಒಯ್ದು ಮಾರಿ ದುಡ್ಡುಗಳಿಸುವ ಗೋಜಿಗೆ ಹೋಗಲಾರ. ಅವನ
ಅಂಬಲದಲ್ಲಿ ಪೂಜೆಮಾಡುವುದನ್ನು ನೀನೊಂದು ಸಲ ನೋಡಬೇಕ
ಅವನು ಗಂಭೀರವಾಗಿ ಮಂತ್ರ ಹೇಳುತ್ತಾ ಅಭಿಷೇಕ ಮಾಡುವುದನ
ನೋಡಿದಾಗ, ಭಕ್ತಿ ಇಲ್ಲದವನಿಗೂ ಸಹ ಭಕ್ತಿ ಹುಟ್ಟೀತು!" ಎಂ
ಹೇಳಿದ್ದರು.

ಪಾಕದ ನಾಯರರು ಆಡಿದ ಮಾತು ಅಕ್ಷರಶಃ ನಿಜವೆಂ
ಲಕ್ಷ್ಮಿಯು ಮಾವನಿಗೆ ಮನವರಿಕೆಯಾಗಿತ್ತು. ಆದುದರಿಂದಲೇ ಅವರಿ
ವಾಸುದೇವ ಯಂಬ್ರಾಂದ್ರಿಯಲ್ಲಿ ಅಪಾರ ಆದರ ವಿಶ್ವಾಸಗಳಿದ್ದುವು.

ಲಕ್ಷ್ಮಿಯು ಗಂಡ ತೀರಿದ ಎರಡು ತಿಂಗಳ ಅನಂತರ ಯಂಬ್ರಾಂ
ನಾಯರರನ್ನು ಕಾಣಲೆಂದು ಬಂದಿದ್ದರು.

"ಯಂಬ್ರಾಂದ್ರಿ, ನೀವು ಈಕಡೆ ಸುಳಿಯುವುದೇ ಅಪರೂಪವಾಗಿ
ಯಲ್ಲ?" ಮಾವ ಕೇಳಿದರು. "ಏನು ಈಕಡೆ ಚಿತ್ತೈಸಿದಿರಿ?"

"ನಾಯರ, ನಿಮ್ಮೊಡನೆ ನಾಲ್ಕು ಮಾತಾಡಲೆಂದೇ ಬಂದೆ
ಯಂಬ್ರಾಂದ್ರಿ ಆಲೋಚನೆ ತುಂಬಿದ ದನಿಯಲ್ಲಿ ಉಸುರಿದರು.

"ಯಂಬ್ರಾಂದ್ರಿ, ನೀವು ಇಲ್ಲಿಯೇ ಉಳಿದು ಬಿಡಿ. ಇರುಳು ನಾ
ಸಾವಕಾಶವಾಗಿ ಮಾತಾಡಬಹುದು." ಎಂದು ಹೇಳಿ ಮಾವ ಸೊ
ಯನ್ನು ಕರೆದು ಬ್ರಾಹ್ಮಣನಿಗೆ ಹಾಲು ಹಣ್ಣುಗಳನ್ನು ತಂದಿತ್ತು ಉಪಚ
ಸಲು ಆಜ್ಞೆ ಮಾಡಿದರು.

ಮಾವನ ಆಜ್ಞೆಯಂತೆ ಲಕ್ಷ್ಮಿ ಒಂದು ಸುಳಿ ಬಾಳೆಲೆಯಲ್ಲಿ ಕಳಿ
ನೇಂದ್ರ ಬಾಳೆಯ ಹಣ್ಣುಗಳೆರಡು, ತುಪ್ಪ ಮತ್ತು ಬೆಳ್ಳಿಯ ಲೋಟದ
ಕಾಯಿಸಿದ ಹಾಲು ಇವನ್ನು ತಂದು ಯಂಬ್ರಾಂದ್ರಿಯ ಮುಂದಿರಿಸಿದಳ
ಯಂಬ್ರಾಂದ್ರಿ ಲಕ್ಷ್ಮಿಯನ್ನು ಕಣ್ಣುಗಳಿಂದ ನೋಡಿಯೇ ಹಸಿವೆಯನ
ಹಿಂಗಿಸಿಕೊಳ್ಳಲು ಹೊರಟರು. ಅವರ ದೃಷ್ಟಿಯಿಂದಲೇ ಮಾವ ಅವ

ತಮ್ಮೊಡನೆ ಮಾತಾಡಲಿರುವ ಸಂಗತಿ ಏನೆಂದು ಮಾ ವಗ್ರಹಿಸಿದರು.

ಆ ದಿನ ಇರುಳು ವಾಸುದೇವ ಯಂಬ್ರಾಂದ್ರಿ ಲಕ್ಷ್ಮಿಯಿತ್ತ ಪಡಿಯನ್ನು ಅಟ್ಟು ಉಂಡರು. ಚಿರಿಕಂಟ ಅವರಿಗೆ ಮನೆಯ ಹಜಾರದಲ್ಲಿ ಹಾಸಿಗೆಯನ್ನು ಹಾಸಿ ಕೊಟ್ಟ. ನಾಯರರು ಯಂಬ್ರಾಂದ್ರಿಯ ಜತೆಯಲ್ಲಿ ತಾಂಬೂಲವನ್ನು ಮೆಲ್ಲುತ್ತಾ ಬಂದ ಕಾರ್ಯವೇನೆಂದು ವಿಚಾರಿಸಿದರು.

ಯಂಬ್ರಾಂದ್ರಿ ಎಲೆಗೆ ಸುಣ್ಣವನ್ನುಜ್ಜುತ್ತಾ, "ನಾಯರ ನೋಡಿ ನಿಮ್ಮಿಂದ ನನಗೊಂದು ದೊಡ್ಡ ಉಪಕಾರವಾಗಬೇಕು." ಎಂದು ಹೇಳಲಿರುವ ವಿಷಯಕ್ಕೆ ಮುನ್ನುಡಿ ಹಾಕಿದರು.

"ಏನದು? ನನ್ನ ಕೈಯಿಂದಾಗುವುದಾದರೆ ನಿಮಗಲ್ಲದೆ ಬೇರೆ ಯಾರಿಗೆ ಮಾಡಲಿ?"

"ಹಣಕಾಸುಗಳ ನೆರವುಬೇಕೆಂದು ನಾನು ನಿಮ್ಮನ್ನು ಕೇಳುವುದಿಲ್ಲ."

"ಆಳು ಕಾಳುಗಳ ನೆರವೇನಾದರೂ ಬೇಕೇ?"

"ಅದೂ ಬೇಡ. ತೋಟದಲ್ಲಿ ದುಡಿಯಲು ಹತ್ತು ಜನ ಆಳುಗಳಿದ್ದಾರೆ."

"ಮತ್ತೇನು ಬೇಕು ಹೇಳಿ."

"ಅದನ್ನು ನಿಮ್ಮ ಮುಂದೆ ಹೇಗೆ ಪ್ರಸ್ತಾವಿಸಬೇಕೆಂಬುದು ನನಗೆ ತಿಳಿಯುವುದಿಲ್ಲ." ಯಂಬ್ರಾಂದ್ರಿಯ ಮೋರೆ ನಸು ಕೆಂಪೇರಿತು.

"ನೀವು ಸಂಕೋಚ ಪಡಬೇಕಾದುದಿಲ್ಲ."

"ನೋಡಿ, ನಿಮಗೊಬ್ಬ ಸೊಸೆ ಇದ್ದಾಳಲ್ಲ."

"ಯಾರು ಲಕ್ಷ್ಮಿಯೇ?"

"ಹೌದು."

"ನೋಡಿ, ನನಗೆ ಈ ಒಂಟಿ ಜೀವನದಿಂದ ಬೇಸರ ಬಂದು ಹೋಗಿದೆ. ಊರಲ್ಲಿ ಮಡದಿ ಮಕ್ಕಳಿದ್ದಾರೆಂಬುದು ನಿಜ. ಆದರೆ ಅವರು ಮನೆ ಬಿಟ್ಟು ದೂರದ ವೈನಾಡಿಗೆ ಬರುವ ಹಾಗಿಲ್ಲ."

"ಸರಿ." ನಾಯರರು ಯಂಬ್ರಾಂದ್ರಿಯ ಬಾಯಿಯಿಂದ ಮುಂದೆ ಯಾವ ಮಾತು ಬರುವುದೆಂದು ಉತ್ಸುಕತೆಯಿಂದ ನಿರೀಕ್ಷಿಸತೊಡಗಿದರು.

"ನೋಡಿ, ನಿಮ್ಮ ಸೊಸೆಯನ್ನು ನನಗೆ............" ಮುಂ
ಯಂಬ್ರಾಂದ್ರಿಯ ಬಾಯಿಯಿಂದ ಮಾತು ಹೊರಡಲಿಲ್ಲ.

"ನಿಮಗೆ ಆಕೆಯನ್ನು ಸಂಬಂಧ ಮಾಡಿಕೊಳ್ಳಲು ಮನಸ್ಸಿದೆಯೇ ?"

"ಹೌದು." ಯಂಬ್ರಾಂದ್ರಿ ತಾಂಬೂಲ ಮೆಲ್ಲುತ್ತಾ ತಲೆಯಲು
ಸಿದರು.

ಮಾವ ಆಲೋಚಿಸಿದರು. ಅವರ ನಾಡಿಗಳಲ್ಲಿಯೂ ಬ್ರಾಹ್ಮಣ
ರಕ್ತವೇ ಹರಿಯುತ್ತಿದ್ದಿತು. ಅವರ ತಾಯಿ ಶ್ರೀದೇವಿ ಅಂಜಿಕುನ್ನು ಗ್ರಾಮ
ಮಾಧವನ್ ಯಂಬ್ರಾಂದ್ರಿಯ ಸಂಬಂಧ. ಈ ಸಂಬಂಧದ ಫಲವಾಗಿಯೆ
ಅವರು ಜನ್ಮ ತಳೆದಿದ್ದರು. ಅವರ ತಂಗಿಯನ್ನು ಕುಪ್ಪತ್ತೋಡು ಗ್ರಾಮ
ಅಚ್ಯುತ ಯಂಬ್ರಾಂದ್ರಿಗೆ ಸಂಬಂಧ ಮಾಡಿಕೊಟ್ಟಿದ್ದರು. ಈ ಸಂಬಂ
ದಲ್ಲಿ ಲಕ್ಷ್ಮಿ, ಚಿರುತೆ, ರಾಮು ಮತ್ತು ಕುಂಞಂಬು ಎಂಬ ನಾಲ್ಕು
ಸಂತಾನಗಳು ಉದಿಸಿದ್ದುವು. ಹೀಗೆ ಆ ತರವಾಡಿನಲ್ಲಿ ಎರಡು ತ
ಮಾರುಗಳಿಂದ ಬ್ರಾಹ್ಮಣ ಸಂಬಂಧದ ಸಂಪ್ರದಾಯ ನಡೆದುಕೊಂಡ
ಬಂದಿತ್ತು. ಅವರ ಮಾವನಂತೂ ತರವಾಡಿನ ಹೆಣ್ಣನ್ನು ಬ್ರಾಹ್ಮಣನಿಗಲ್ಲ
ಅನ್ಯರಿಗೆ ಸಂಬಂಧ ಮಾಡಿಕೊಡಲಾರೆನೆಂಬ ಭೀಷ್ಮ ಪ್ರತಿಜ್ಞೆಯನ್ನೆ
ತೊಟ್ಟಿದ್ದರು. ಆದರೆ ಅವರ ಅಳಿಯನಾದ ತಾವು ಮಾತ್ರ ಕುಲ ಸಂಪ್ರ
ದಾಯವನ್ನು ಮೀರಿ ಸೊಸೆಯನ್ನು ಸ್ವಜಾತಿಯವನಿಗೆ ಮದುವೆ ಮಾ
ಕೊಟ್ಟಿದ್ದರು. ಆ ಮೂಲಕ ಕೈ ಸುಟ್ಟುಕೊಂಡು ಕುಲ ಪರಂಪರೆಯನ್ನು
ಮೀರಿದುದು ಅನುಚಿತವಾಯಿತೆಂದು ಅನುಭವ ಪಡೆದಿದ್ದರು. ಅದು
ರಿಂದ ವಾಸುದೇವ ಯಂಬ್ರಾಂದ್ರಿಗೆ ಸೊಸೆಯನ್ನು ಸಂಬಂಧ ಮಾಡಿಕೊ
ಡುವುದು ಅವರಿಗಿ ಅಪ್ರಿಯವಾಗಿ ತೋರಲಿಲ್ಲ. ಆದರೆ ಲಕ್ಷ್ಮಿ ವಿಧವೆ
ಆಕೆಯನ್ನು ಬ್ರಾಹ್ಮಣನಿಗೆ ಕೊಡುವದೆಂದರೆ ಕಂಪನ್ನು ಮೂಸಿದ ಹು
ವನ್ನು ದೇವರ ನೆತ್ತಿಗೇರಿಸಿದ ಹಾಗೆ ಎಂದು ತೋರಿತು.

"ಆದರೆ ಯಂಬ್ರಾಂದ್ರಿ, ನನ್ನ ಸೊಸೆ ಕನ್ಯೆಯಲ್ಲವಲ್ಲ ?"

"ನಿಜ. ಆಕೆ ಕನ್ಯೆಯಲ್ಲದಿದ್ದರೂ ಚಿಂತೆಯಿಲ್ಲ; ಆಕೆಯನ್ನು
ಸಂಬಂಧ ಮಾಡಿಕೊಳ್ಳಬೇಕೆಂಬ ಮನಸ್ಸಿದೆ. ಈ ಒಂದು ಉಪಕಾರವನ್ನು
ನೀವು ಮಾಡಿಕೊಡಬೇಕು."

" ನೋಡಿ, ಆಕೆಯ ಗಂಡ ಮಡಿದು ಇನ್ನೂ ಮೂರು ತಿಂಗಳು ಕಳೆದಿಲ್ಲ. ಇಷ್ಟು ಬೇಗ ಬೇರೆ ಸಂಬಂಧದ ಆಲೋಚನೆಯನ್ನು ಅವಳ ಮುಂದೆತ್ತಿದರೆ ನೊಂದುಕೊಂಡಾಳು."

" ನಿಜ. ಆತುರವೇನೂ ಇಲ್ಲ. ಬೇಕಾದರೆ ಆರು ತಿಂಗಳು ಸಮಯ ಕಳೆಯಲಿ. ಆದರೆ ನನ್ನ ಕೋರಿಕೆ ಮಾತ್ರ ನಿಮ್ಮ ನೆನಪಿನಲ್ಲಿರಲಿ."

ಎಂದು ವಾಸುದೇವ ಯಂಬ್ರಾಂದ್ರಿ ಹೇಳಿದ್ದರು.

ಈ ಸಂಗತಿ ಹೋಟೆಲಿನ ಹಾಸಿಗೆಯ ಮೇಲೆ ಹೊರಳುತಿದ್ದ ಮಾವನ ಚಿತ್ತದಲ್ಲಿ ತೇಲಿತು. ಈಗ ಲಕ್ಷ್ಮಿಗೆ ಕುರುಬ ಹುಡುಗನ ಸಂಪರ್ಕ ತಪ್ಪಿಸಬೇಕು; ತಮ್ಮ ಆನೆಗೆ ನಾಯಕನೇ ಆನೆಕಾರನಾಗಿ ಉಳಿಯಬೇಕು; ಇದಕ್ಕೆ ಇದೇ ತಕ್ಕ ಉಪಾಯ; ಒಂದು ಕಲ್ಲಿನಿಂದ ಎರಡು ಹಣ್ಣುಗಳನ್ನು ಉರುಳಿಸಿದಂತಾಗುವುದು !

ಈ ಆಲೋಚನೆಯಿಂದ ಅವರ ಎದೆ ಹಗುರವಾಯಿತು. ಅವರ ಮೊಗದಲ್ಲಿ ಸಂತಸದ ಕದಿರು ಕುಣಿದಿತು. ಅವರು ಯಂಬ್ರಾಂದ್ರಿಗೆ ಲಕ್ಷ್ಮಿ ಯನ್ನು ಸಂಬಂಧ ಮಾಡಿಕೊಡುವೆನು. "ಆಕೆಯನ್ನು ಯಂಬ್ರಾಂದ್ರಿಯ ಮಠಕ್ಕೇ ಕಳುಹಿಸಿ ಬಿಡುವೆನು. ಆಗ ನಾಯಕನೊಡನೆ ಆಕೆಗೆ ಇರುವ ಸಂಪರ್ಕ ಕಡಿದು ಹೋಗುವುದು. ಸೊಸೆ ಕುರುಬ ಹುಡುಗನೊಡನೆ ಚಕ್ಕಂದ ನಡೆಸಿದಳು ಎಂಬ ಕಲಂಕ ತರವಾಡಿಗೆ ಅಂಟುವುದಿಲ್ಲ!" ಎಂದು ಅವರು ತಮ್ಮಲ್ಲಿಯೇ ಹೇಳಿಕೊಂಡರು.

ಇನ್ನೊಂದು ಕ್ಷಣದಲ್ಲಿ ಅವರ ಕಣ್ಣೆವೆಗಳು ಭಾರವಾದುವು. ಗಾಢ ನಿದ್ರೆ ಬಂದು ಅವರನ್ನು ಮುಸುಕಿತು.



ನಾಯಕನನ್ನು ತನ್ನ ತೋಳಗಳಲ್ಲಿ ಅಪ್ಪಿಕೊಂಡಿದ್ದ ಲಕ್ಷ್ಮಿಗೆ ಪತ್ತಾಯಪುರೆಯ ಹೊರಜಗಲಿಯಲ್ಲಿ ಹೆಜ್ಜೆ ಗಳ ಸದ್ದು ಕೇಳಿಸಿತು. ತನ್ನ ರಹಸ್ಯ ಪ್ರಣಯವನ್ನು ಶೋಧಿಸಲೆಂದು ಅತ್ತೆ ಬಂದರೇ ಎಂದು ಅವಳು ಬೆಚ್ಚಿ ಬಿದ್ದಳು. ಅವಳು ಇನಿಯನ ತೋಳುಗಳನ್ನು ಬಿಟ್ಟು ಸರಿದಳು. ಅವಳ

ಬಾಗಿಲಿಗೆ ಬಂದು ಇಣಿಕಿ ನೋಡಿದಾಗ ವ್ಯಕ್ತಿಯೊಂದು ಜಗಲಿಯಿಂದ ಅಂಗಳಕ್ಕೆ ಇಳಿದು ಹೋಗುವುದನ್ನು ಕಂಡಳು. ಆತನ ಆಕೃತಿಯನ್ನು ನೋಡಿದಾಗ ತನ್ನ ಮಾವನಿರಬೇಕೆಂದು ಅವಳಿಗೆ ಅನಿಸಿತು.

ಮಾವ ಕಲ್ಲಿಕೋಟೆಗೋ ತಲಚೇರಿಗೋ ಹೊರಟಾಗ, "ಲಕ್ಷ್ಮೀ, ನಿನಗೆ ಏನನ್ನು ತರಲಿ? ಬಟ್ಟೆಗಳನ್ನು ತರಬೇಕೇ? ಅಥವಾ ಬ್ಲವುಸು ಅರಿವೆಗಳನ್ನು ಹರಿಸಿ ತರಲೇ?" ಎಂದು ಕೇಳುವುದು ಅವರ ಒಂದು ಸ್ವಭಾವ. ಆದರೆ ಇಂದು ಅವರು ಮನೆಯಿಂದ ಹೊರಟಾಗ ಏನು ಬೇಕೆಂದು ಲಕ್ಷ್ಮಿಯನ್ನು ಮಾತಾಡಿಸಲಿಲ್ಲ. ಉಪ್ಪಿಟ್ಟು ಕಾಫಿ ಆಗಿದೆ ಎಂದು ಕರೆದಾಗ ಅವರು ಕಣ್ಣು ಕೆಂಪು ಮಾಡಿಕೊಂಡು ಸೊಸೆಯನ್ನು ಸುಟ್ಟು ಬಿಡುವಂತೆ ನೋಡಿದರು. ಫಲಾಹಾರ ಮಾಡುವಾಗ ಅವಳ ಜತೆಯಲ್ಲಿ ಒಂದೇ ಒಂದು ಮಾತಾಡಲಿಲ್ಲ; ಅವಳನ್ನು ಕಣ್ಣೆತ್ತಿಯೂ ನೋಡಲಿಲ್ಲ. ಎರಡೆರಡು ಸಲ ತಿಂಡಿಯನ್ನು ಹಾಕಿಸಿಕೊಂಡು ತಿನ್ನುವವರು ಇಂದು ಒಂದು ಸಲ ಬಡಿಸಿದುದನ್ನೇ ಬಿಟ್ಟಿದ್ದರು. ಉಪ್ಪಿಟ್ಟಿಗೆ ಮೊಸರು ಹಾಕಿಸಿಕೊಂಡು ತಿನ್ನುವುದು ಅವರ ಅಭ್ಯಾಸ. ಆದರೆ ಇಂದು ಮೊಸರು ಬಡಿಸಲು ಹೋದಾಗ ಬೇಡವೆಂದರು.

ಹೀಗೆ ಲಕ್ಷ್ಮಿ ಅಂದು ಮುಂಜಾವು ಮಾವನಲ್ಲಿ ತೋರಿದ ವರ್ತನೆಗಳನ್ನೆಲ್ಲಾ ಒಂದೊಂದಾಗಿ ನೆನಪಿಗೆ ತಂದುಕೊಂಡಳು. ತಾನು ಪತ್ತಾಯ ಪುರೆಯಲ್ಲಿ ನಾಯಕನ ಸಂಗಾತವಿದ್ದುದು ಮಾವನ ದೃಷ್ಟಿಗೆ ಬಿದ್ದು ಹೋಗಿದೆ; ಕಲ್ಲಿಕೋಟೆಗೆ ಹೊರಡುವ ಗಡಿಬಿಡಿಯಲ್ಲಿ ವಿಚಾರಣೆಗೆ ಕೈ ಹಾಕಲು ಇಷ್ಟಪಡದೆ ತುಟಿ ಮುಚ್ಚಿಕೊಂಡು ಹೊರಟು ಹೋಗಿದ್ದಾರೆ; ಅವರು ಕಲ್ಲಿಕೋಟೆಯಿಂದ ಮರಳಿ ಬಂದೊಡನೆ ಮನೆಯಲ್ಲಿ ಬಿರುಗಾಳಿ ಏಳುವುದು. ಈ ನಂಬಿಕೆ ಅವಳಲ್ಲಿ ದೃಢವಾಯಿತು. ಮನಸ್ಸಿನಲ್ಲಿ ಭೀತಿ ಅಂಕುರಿಸಿತು. ತಲೆದೋರಿದ ಸಂದೇಹ ಭೀತಿಗಳು ಅವಳ ಉತ್ಸಾಹವನ್ನು ತೊಡೆದು ಹಾಕಿದುವು. ಅವಳ ಮೋರೆ ಕಳೆಗುಂದಿ ಸುಟ್ಟ ಹಪ್ಪಳದಂತಾಯಿತು.

ತನ್ನನ್ನು ಮಾವ ಬೈದಾರು; ಹೊಡೆದಾರು; ಆದರೆ ಮನೆಯಿಂದ ಹೊರದೂಡಲಿಕ್ಕಿಲ್ಲ. ನಾಯಕನ ಗತಿ ಏನು? ಅವನನ್ನು ಹೊಡೆದು

ಮನೆಯಿಂದ ಹೊರಗಟ್ಟಿದರೆ ಎಲ್ಲಿಗೆ ಹೋಗುವನು? ಆರೇಳು ವರ್ಷಗಳನ್ನು ತಮ್ಮ ಮನೆಯಲ್ಲಿಯೇ ಕಳೆದುದರಿಂದ ಆತನಿಗೆ ತನ್ನ ನೆಂಟರಿಷ್ಟರ ಸಂಬಂಧ ಸಂಪೂರ್ಣವಾಗಿ ಕಡಿದು ಹೋಗಿದೆ. ಈಗ ಅವನೆಲ್ಲಿ ಹೋಗಬೇಕು? ಇದರಲ್ಲಿ ಆ ಕುರುಬ ಹುಡುಗನಿಗಿಂತಲೂ ತನ್ನ ಮೇಲೆ ಅಪರಾಧದ ಹೊಣೆ ಹೆಚ್ಚು. ತಾನು ಎಸೆದ ಬಲೆಗೆ ಸಿಲುಕಿದ ಚಿಗುರೆಯಾತ; ತಾನು ಎದೆಯ ಕೊಡದಲ್ಲಿ ತುಂಬಿದ ಒಲವಿನ ಹಾಲನ್ನು ಎರೆಯದಿದ್ದರೆ, ಅವನಲ್ಲಿ ಪ್ರೀತಿ ಕುಡಿ ಬಿಡುತ್ತಿರಲಿಲ್ಲ. ಆದರೆ ತನಗಿಂತಲೂ ಮಿಗಿಲಾದ ಶಿಕ್ಷೆ ಅವನಿಗೊದಗುವುದು!

ಈ ಚಿಂತೆ ಆಕೆಯ ಚಿತ್ತದಲ್ಲಿ ನುಸುಳಲು ಅವಳ ಅಂತರಂಗದ ಕಳವಳ ಇಮ್ಮಡಿಸಿತು. ಅವಳು ಅಂದು ಯಾರೊಡನೆಯೂ ಹೆಚ್ಚು ಮಾತಾಡಲಿಲ್ಲ. ಅವಳ ಈ ಬೇಸರಿಕೆಯನ್ನು ಕಂಡು ಅತ್ತೆ, "ಲಕ್ಷ್ಮಿ, ಇಂದು ನೀನು ಒಂದು ತರಹವಾಗಿದ್ದೀಯಲ್ಲ?" ಎಂದು ಕೇಳಿದಳು.

"ಏನೋ ವಿಪರೀತ ತಲೆಸಿಡಿತ ಅತ್ತೆ. ಮೈಕೈಗಳೆಲ್ಲ ನೋಯುತ್ತಿವೆ." ಎಂದು ನುಡಿದಳು ಲಕ್ಷ್ಮಿ.

ಅವಳು ಮಧ್ಯಾಹ್ನ ಸರಿಯಾಗಿ ಉಣಲಿಲ್ಲ. ಅವಳು ಊಟದ ಶಾಸ್ತ್ರಮಾಡಿ ಎಲೆಯ ಮುಂದಿನಿಂದ ಎದ್ದು ಬಿಟ್ಟಳು. ಕೈತೊಳೆದುಕೊಂಡು ತನ್ನ ಕೋಣೆಗೆ ಹೋಗಿ ಹಾಸಿಗೆಯ ಮೇಲೆ ಮಲಗಿದಳು. ಕುಂಞಂಬು ಮತ್ತು ರಾಮು ಶಾಲೆಗೆ ಹೋಗಿದುದ್ದರಿಂದ ಚಿರುತೆಗೆ ಜತೆಯಲ್ಲಿ ಆಡಲು ಯಾರೂ ಇರಲಿಲ್ಲ. ಆದುದರಿಂದ ಅವಳಿಗೆ ಬೇಸರಿಕೆ ಬಂದಿತ್ತು. ಅವಳು ಊಟ ಮುಗಿಸಿ ಕೈ ತೊಳೆದುಕೊಂಡೊಡನೆ "ಬಾರೇ ಅಕ್ಕ. ನಾವು ಚೌಕಪರೆ ಆಡೋಣ." ಎಂದು ಲಕ್ಷ್ಮಿಯನ್ನು ಕರೆದಳು.

"ನನಗಿಲ್ಲಿ ಪ್ರಾಣ ಸಂಕಟ; ನಿನಗೆ ಆಟ!" ಲಕ್ಷ್ಮಿ ಹಾಸಿಗೆಯ ಮೇಲೆ ಹೊರಳುತ್ತಾ ತಂಗಿಯನ್ನು ಗದರಿಸಿದಳು.

"ಅಕ್ಕ, ಎಕೆ ನಿನಗಿಂದು ಈ ದೂರ್ವಾಸಕೋಪ?" ಚಿರುತೆ ಲಕ್ಷ್ಮಿಯ ಹಣೆಯ ಮೇಲೆ ಕೈಯಾಡಿಸುತ್ತಾ ಉಸುರಿದಳು. ಲಕ್ಷ್ಮಿ ದಿನವೆಲ್ಲ ಚಿಂತಿಸ ತೊಡಗಿದುದರಿಂದ ಅವಳ ತಲೆಯಾದರೂ ಸಿಡಿಯತೊಡಗಿತ್ತು. ಅವಳು ಆಡಿದ ಮಾತು ಸುಳ್ಳಾಗಿರಲಿಲ್ಲ.

"ಅಕ್ಕ, ನಿನ್ನ ಹಣೆ ಬೆಂಕಿಯ ಹಾಗೆ ಸುಡುತ್ತಿದೆ." ಚಿರುತೆ ನುಡಿದಳು: "ನಾನು ಅತ್ತೆಯ ಹತ್ತಿರ ಸ್ವಲ್ಪ ಅಮೃತಾಂಜನ ಕೇಳಿ ತಂದು ನಿನ್ನ ಹಣೆಗೆ ಸವರಲೇ ?"

ತಂಗಿ ತನ್ನ ವಿಷಯದಲ್ಲಿ ಇರಿಸಿದ ಪ್ರೀತಿಯನ್ನು ಲಕ್ಷ್ಮಿ ಕಂಡಳು. ಅವಳು ತಂಗಿಯನ್ನು ಅಕಾರಣವಾಗಿ ಗದರಿಸಿದೆನಲ್ಲ ಎಂದು ಮರುಗಿದಳು. ಅವಳು, "ಚಿರುತೆ, ನೀನು ಹೋಗಿ ಆಡಿಕೋ. ಅಷ್ಟೇನೂ ತಲೆ ನೋವಿಲ್ಲ." ಎಂದು ಪಡಿನುಡಿದಳು.

"ಅಕ್ಕ, ಯಾರ ಜತೆಯಲ್ಲಿ ಆಡಲಿ ?" ಚಿರುತೆ ಬೇಸರದ ದನಿ ಎತ್ತಿದಳು: "ರಾಮು ಮತ್ತು ಕುಂಞಂಬು ಮನೆಯಲ್ಲಿ ಇಲ್ಲ; ಅದಕ್ಕೆಂದೇ ನಿನ್ನ ಕರೆದೆ."

"ಹಾಗಾದರೆ ಹೋಗು. ಚೌಕಪರೆಯ ಮಣೆ, ಕಾಯಿ ಮತ್ತು ಕವಡೆಗಳನ್ನು ತಾ. ನಾವು ಇಲ್ಲೇ ಆಡೋಣ."

ಅಕ್ಕ ಚೌಕಪರೆ ಆಡಲು ಒಪ್ಪಿದುದನ್ನು ಕಂಡು ಚಿರುತೆ ಹಿಗ್ಗಿದಳು. ಅವಳು ಓಡಿ ಹೋಗಿ ಚೌಕಪರೆಯ ಮಣೆ, ಕಾಯಿ ಮತ್ತು ಕವಡೆಗಳನ್ನು ತಂದಳು. ಅವಳು ಮಣೆಯ ಮೇಲೆ ಕಾಯಿಗಳನ್ನಿರಿಸಿ ಕವಡೆಗಳನ್ನು ಉರುಸಿದಳು. ಲಕ್ಷ್ಮಿ ತಂಗಿಯ ಬೇಸರ ಕಳೆಯಲೆಂದು ಆಡ ಹೊರಟಿದ್ದಳೇ ಹೊರತು ಅವಳಿಗೆ ಆಟದಲ್ಲಿ ಉತ್ಸಾಹವಿರಲಿಲ್ಲ. ಅವಳು ಆಲೋಚಿಸದೆ ಕಾಯಿಗಳನ್ನು ತಪ್ಪುತಪ್ಪಾಗಿ ನಡೆಸತೊಡಗಿದಳು. ಚಿರುತೆ ಅಕ್ಕನ ಕಾಯಿಗಳನ್ನು ಒಂದರ ನಂತರ ಇನ್ನೊಂದರಂತೆ ಕಡಿದುರುಳಿಸಿ ಮುಂದೆ ಸಾಗಿದಳು. ಯಾವಾಗಲೂ ಆಟದಲ್ಲಿ ತನ್ನನ್ನು ಸೋಲಿಸುತಿದ್ದ ಅಕ್ಕನ ಕಾಯಿಗಳು ಕಡಿಯಲು ದೊರೆತುದದರಿಂದ ಚಿರುತೆಗೆ ಸಂತೋಷವಾಯಿತು. ಅವಳು ಹೆಮ್ಮೆಯಿಂದ ಕವಡೆಗಳನ್ನು ಉರುಳಿಸುತ್ತಾ, "ಅಕ್ಕ, ನೀನು ಆಟದಲ್ಲಿ ಎಂದೂ ಸೋಲಲಾರೆ ಎಂದು ಜಂಭ ಪಡುತಿದ್ದೆಯಲ್ಲ; ಇಂದು ನಾನು ನಿನ್ನ ಸೋಲಿಸಿಯೇ ತೀರುವೆನು." ಎಂದು ಉದ್ಗಾರವೆತ್ತಿದಳು.

"ಇಲ್ಲ. ನೀನು ನನ್ನ ಸೋಲಿಸಲಾರೆ." ಲಕ್ಷ್ಮಿ ಓಡಿ ಹೋಗುತಿದ್ದ ಮನಸ್ಸನ್ನು ಸೆಳೆ ತಂದು ಆಟದಲ್ಲಿ ನೆಲೆಗೊಳಿಸಿದಳು: "ಈಗ ನೀನು ನನ್ನ

ಕಾಯಿಗಳನ್ನೆಲ್ಲಾ ಕಡಿದುರುಳಿಸಿದ್ದೀಯೆ. ಆದರೇನು? ಕೊನೆಯಲ್ಲಿ ನಾನೇ ಗೆಲ್ಲುವೆನು. ''

" ಅಕ್ಕ, ಪಂಥ ಕಟ್ಟೋಣ. ಈ ಸಲ ನಾನು ನಿನ್ನ ಸೋಲಿಸಿಯೇ ಬಿಡುವೆನು. "

ಲಕ್ಷ್ಮಿಯ ಕೈಗಳು ಚುರುಕಾದುವು. ಆಕೆಯ ಕಾಯಿಗಳು ಜೂಜಿನ ಕುದುರೆಗಳಂತೆ ಮನೆಯಿಂದ ಮನೆಗೆ ನೆಗೆದೋಡಿದುವು. ಚಿರುತೆ, "ಅಕ್ಕ ನಿನ್ನ ಕಾಯಿಗಳು ಓಟದಲ್ಲಿ ಜೂಜಿನ ಕುದುರೆಗಳನ್ನು ಮೀರಿಸುತ್ತವೆ! '' ಎಂದು ಉಲಿದಳು.

"ನೋಡು, ಚಿರುತೆ, ಇನ್ನೊಂದು ಕ್ಷಣದಲ್ಲಿ ನಿನ್ನ ಕಾಯಿಗಳನ್ನೆಲ್ಲಾ ತರಿದು ಹಿಂದಕ್ಕೆ ಅಟ್ಟುವೆನು. "

ಲಕ್ಷ್ಮಿ ತಾನು ನುಡಿದಂತೆಯೇ ಆಡಿದಳು. ಚಿರುತೆಯ ಎರಡು ಕಾಯಿಗಳು ಪೆಟ್ಟು ತಿಂದು ಹೊರಬಂದುವು. ಚಿರುತೆಯ ಮೊಗದಲ್ಲಿ ಕಳೆಯಾಡುತಿದ್ದ ಗೆಲುವು ಮರೆಯಾಯಿತು. ಅವಳು, " ಅಕ್ಕ, ನೀನು ನನ್ನ ಸೋಲಿಸಬೇಕೆಂದು ಪಣತೊಟ್ಟ ಹಾಗಿದೆ! " ಎಂದು ಕುಗ್ಗಿದ ಸ್ವರದಲ್ಲಿ ಅಂದಳು.

ಆದರೆ ಲಕ್ಷ್ಮಿಯ ಮನಸ್ಸು ಆಟದಲ್ಲಿ ಸ್ಥಿರವಾಗಿ ನಿಲ್ಲಲಿಲ್ಲ. ಅದು ತನಗೆ ತೊಡಿಸಿದ ಕುಣಿಕೆಯನ್ನು ಕಳಚಿ ಹಾಕಿ ಮತ್ತೆ ಚಲಿಸತೊಡಗಿತು. ಅದು ನಾಯಕನನ್ನು ಅನುಸರಿಸಿಕೊಂಡು ಹೋಯಿತು. ಬೆಳಿಗ್ಗೆ ಆನೆಯನ್ನು ಅಟ್ಟಿಕೊಂಡು ಹೋದ ನಾಯಕ ಇನ್ನೂ ಮನೆಗೆ ಮರಳಿ ಬಂದಿರಲಿಲ್ಲ. ತನ್ನ ಹಾಗೆಯೇ ನಾಯಕನಲ್ಲೂ ಪಾಪ ತಮ್ಮ ರಹಸ್ಯ ಪ್ರಣಯವನ್ನು ಕಂಡನೆಂಬ ಸಂದೇಹ ತಲೆದೋರಿರಬಹುದೇ? ಅವನೆಲ್ಲಾದರೂ ಪಾಪನಿಗೆ ಅಂಜಿ ಮನೆಬಿಟ್ಟು ಓಡಿಹೋದರೆ ತನ್ನ ಗತಿ ಏನು? ಆತನಿಲ್ಲದೆ ದಿನಗಳನ್ನು ದೂಡುವುದು ಹೇಗೆ? ಹೀಗೆ ಆಕೆಯ ಮನಸ್ಸು ಒಂದರ ಅನಂತರ ಇನ್ನೊಂದರಂತೆ ಚಿಂತೆಯ ಬಲೆಗಳ ಎಡೆಯಲ್ಲಿ ನುಸುಳಿ ಓಡಾಡಿತು.

" ಅಕ್ಕ, ಅಕ್ಕ! " ಚಿರುತೆ ಗೆಲುವಿನ ದನಿಯಲ್ಲಿ ಕೂಗಿದಳು. ಆ ಕೂಗು ಲಕ್ಷ್ಮಿಯನ್ನು ಧ್ಯಾನದಿಂದ ಎಚ್ಚರಿಸಿತು.

" ಏನು ಚಿರುತೆ ? "

" ನೋಡು, ನಿನ್ನ ಮೂರುಕಾಯಿಗಳು ಉರುಳಿ ಹೋದುವು ! " ಚಿರುತೆಯ ಕಣ್ಣುಗಳಿಂದ ಹೊಳಪಿನ ಕಿಡಿಗಳು ಸಿಡಿದುವು: " ಆಟದಲ್ಲಿ ನೀನೇ ಗೆಲ್ಲುವುದೆಂದು ಜಂಭ ಕೊಚ್ಚುತಿದ್ದೆಯಲ್ಲ ! ಈಗ ನಿನ್ನ ಮೂರು ಕಾಯಿಗಳು ಹೊರಬಂದುವು. ಇನ್ನುಳಿದುದು ಒಂದೇ ಕಾಯಿ ! "

" ಚಿರುತೆ, ಆಟದಲ್ಲಿ ಒಂದು ಸಲವಾದರೂ ಗೆಲ್ಲುವುದಿಲ್ಲ ಎಂದು ನೀನು ಬೇಸರ ಪಡುತಿದ್ದೆಯಲ್ಲ; ನೀನು ಗೆಲ್ಲಬೇಕೆಂದೇ ನಾನು ಕಾಯಿಗಳನ್ನು ಹಾಗೆ ನಡೆಸಿದೆ. "

" ಕವುಚಿ ಬಿದ್ದರೂ ಮೂಗು ಮೇಲೆ ಎಂಬ ಹಟ ನಿನ್ನದು ! "

ಆಟ ಮುಗಿಯಿತು. ಈ ಸಲ ಆಟದಲ್ಲಿ ಲಕ್ಷ್ಮಿಯೇ ಸೋತು ಹೋದಳು. ಚಿರುತೆ, " ಅಕ್ಕ ನೀನು ಸೋತೆ; ನಾನು ಗೆದ್ದೆ ! ಜಂಭದ ಕೋಳಿಯ ರೆಕ್ಕೆ ಮುರಿದೆ " ಎಂದು ಕೈ ತಟ್ಟುತ್ತಾ ದೊಡ್ಡ ದನಿಯಲ್ಲಿ ಹೇಳಿದಳು.

" ಆಗಲಿ. ಎಂದೂ ಆಟದಲ್ಲಿ ಗೆಲ್ಲದ ನೀನು ಇಂದಾದರೂ ಗೆದ್ದೆಯಲ್ಲ." ಎಂದು ನುಡಿದು ಲಕ್ಷ್ಮಿ ಸುಮ್ಮನಾದಳು.

" ಅಕ್ಕ, ಇನ್ನೊಂದು ಆಟವಾಡೋಣವೇ ? "

" ಬೇಡ. ಇಷ್ಟು ಆಡಿದುದು ಸಾಕು. "

" ಅಕ್ಕ, ನಾನು ಸೋಲಿಸಿದೆನೆಂದು ನಿನಗೆ ನಾಚಿಕೆಯೇನೊ ? "

" ಅಲ್ಲ ಚಿರುತೆ, ನನ್ನ ತಲೆ ಸಿಡಿತ ಹೆಚ್ಚಾಗಿದೆ. " ಎಂದು ಹೇಳಿ ಲಕ್ಷ್ಮಿ ಹಾಸಿಯ ಮೇಲೆ ಹೊರಳಿದಳು; ಹೊದಿಕೆಯನ್ನು ಮೈ ಮೇಲೆ ಎಳೆದುಕೊಂಡಳು. ಚಿರುತೆ ಮಣೆ ಮತ್ತು ಕಾಯಿಗಳನ್ನೆತ್ತಿ ಬದಿಗಿರಿಸಿ ಹೊರತೆರಳಿದಳು.

ಅವಳು ಹೊರಗೆ ಹೋಗಿ ಹತ್ತು ನಿಮಿಷ ಕಳೆದಿರಲಿಲ್ಲ. ಅಷ್ಟರಲ್ಲಿ ಮರಳಿ ಅಕ್ಕನ ಕೋಣೆಯೊಳಗೆ ನುಗ್ಗಿದಳು, " ಅಕ್ಕ ! " ಎಂದು ಲಕ್ಷ್ಮಿಯನ್ನು ಕೂಗಿದಳು.

" ಏನು ? ಚಿರುತೆ" ಮೋರೆಯ ಮೇಲಿನ ಮುಸುಕನ್ನು ತೆಗೆದಳು.

" ನೋಡು, ನಾಯಕ ಬಂದಿದ್ದಾನೆ. " ಚಿರುತೆ ಉಸುರಿದಳು :

"ನೀನು ಆತನಿಗೆ ಊಟ ಬಡಿಸಬೇಕಂತೆ."

"ದೇವತ್ತೆ ಇಲ್ಲವೇ"

"ಅವರು ಉಪ್ಪಿನಕಾಯಿಗೆಂದು ಮೆಣಸನ್ನು ಒರಳಲ್ಲಿ ಹಾಕಿ ಮಿದಿಯುತಿದ್ದಾರೆ. ಅವರೇ ನನ್ನ ಕರೆದು ಹೇಳಿದರು.

ಲಕ್ಷ್ಮಿ ಮರುಮಾತಾಡಲಿಲ್ಲ. ಅವಳು ಹಾಸಿಗೆಯಿಂದ ಎದ್ದು ಚಾವಡಿಗೆ ಬಂದಳು. ನಾಯಕ ಆಗ ತಾನೇ ಬಂದಿದ್ದ. ಅವನಿನ್ನೂ ಶಂಕರನ ಬೆನ್ನ ಮೇಲಿಂದ ಕೆಳಗೆ ಇಳಿದಿರಲಿಲ್ಲ. ಶಂಕರನ ಸೊಂಡಿಲಲ್ಲಿ ಕೆಂಪು ಮತ್ತು ಹಳದಿ ಚಂಡು ಹೂಗಳನ್ನು ಪೋದು ಮಾಡಿದ ಸರವೊಂದಿತ್ತು. ನಾಯಕ ನಗುತ್ತಾ, "ಆನೆ ಹೂ ಮಾಲೆಯನ್ನು ತಂದಿದೆ; ಯಾರ ಕೊರಳಿಗೆ ಸೂಡಬೇಕು?" ಎಂದು ಕೇಳಿದ.

"ನನ್ನ ಕೊರಳಿಗೆ!" ಚಿರುತೆ ಓಡಿ ಬಂದಳು.

"ಆನೆ ಸುಮ್ಮನೆ ಹಾರ ಸೂಡಲಾರದು. ಬೆಲ್ಲ ತೆಂಗಿನಕಾಯಿಗಳನ್ನು ಕೊಟ್ಟು ಸನ್ಮಾನ ಮಾಡಬೇಕು."

ಚಿರುತೆ ಕಾಯಿ ಬೆಲ್ಲಗಳನ್ನು ತರಲೆಂದು ಅಡುಗೆ ಮನೆಯ ಕಡೆಗೆ ಓಡಿದಳು. ಲಕ್ಷ್ಮಿ ನಾಯಕನ ಮೋರೆಯನ್ನು ಸೂಕ್ಷ್ಮವಾಗಿ ಪರೀಕ್ಷಿಸಿದಳು. ಅಲ್ಲಿ ಚಿಂತೆ ಕಳವಳಗಳ ಕರಿನೆರಳು ಗೋಚರಿಸಲಿಲ್ಲ. ಮಾವ ತಮ್ಮ ಬೇಟದ ಸಂಗತಿಯನ್ನರಿತುದು ನಾಯಕನಿಗೆ ತಿಳಿಯದು; ತಾನು ಅದನ್ನು ಆತನಿಗೆ ಹೇಳಿ ಬೇಸರ ಪಡಿಸಬೇಕಲ್ಲ ಎಂದು ಅವಳು ತನ್ನಲ್ಲಿಯೇ ಪರಿತಪಿಸಿದಳು.

"ಪುಟ್ಟ ಪಾಪಾತಿ," ನಾಯಕ ಆನೆಯ ಮೇಲಿಂದಿಳಿಯುತ್ತಾ ಹೇಳಿದ: "ಈ ದಿನ ನಿಮ್ಮ ಮೋರೆ ಬೆಂಕಿಗೆ ಒಡ್ಡಿದ ಬಾಳೆಯೆಲೆಯಾಗಿದೆಯಲ್ಲ!"

"ಏನೋ ಹಾಳು ತಲೆನೋವೊಂದು ನನ್ನ ಕಾಡುತ್ತಿದೆ." ಲಕ್ಷ್ಮಿ ನಿಜವನ್ನು ಹೇಳದೆ ಮರೆಮಾಚಿದಳು.

ಚಿರುತೆ ಎರಡು ಕಾಯಿ ಹೋಳು ಮತ್ತು ನಾಲ್ಕು ಅಚ್ಚು ಬೆಲ್ಲಗಳನ್ನು ತಂದಳು. ಆನೆ ಚಾವಡಿಯ ಜಗಲಿಯಂಚಿಗೆ ಸರಿದು ಬಂತು. ಅದು ಬಾಯಿಯನ್ನು ಅಗಲಿಸಿ ತನಗೆ ತಿಂಡಿಯನ್ನು ಕೊಡು ಎಂದು

ಚಿರುತೆಯನ್ನು ಬೇಡಿತು. ಚಿರುತೆ ತಾನು ತಂದ ಕಾಯಿ ಬೆಲ್ಲಗಳನ್ನು ಶಂಕರನ ಬಾಯೊಳಗೆ ಇರಿಸಿದಳು.

" ಶಂಕರ, ಮರಿ ಪಾಪಾತಿಯ ಕೊರಳಿಗೆ ಹಾರವನ್ನು ಸೂಡು. " ನಾಯಕ ಆನೆಗೆ ಆಜ್ಞೆಮಾಡಿದ.

ಶಂಕರ ಸೊಂಡಿಲನ್ನು ಮೇಲೆತ್ತಿದ. ಅದು ತನ್ನ ಪುಟ್ಟ ಕಣ್ಣುಗಳಿಂದ ಜಗಲಿಯ ಮೇಲೆ ನಿಂತ ಲಕ್ಷ್ಮಿ ಮತ್ತು ಚಿರುತೆಯರನ್ನು ನಿಟ್ಟಿಸಿ ನೋಡಿತು.

" ಮರಿಪಾಪಾತಿಯ ಕೊರಳಿಗೆ " ನಾಯಕ ಚಿರುತೆಯ ಕಡೆ ಬೆರಳು ತೋರಿಸಿದ.

ಆದರೆ ಶಂಕರ ಚಿರುತೆಯ ಕೊರಳಿಗೆ ಚೆಂಡು ಹೂಗಳ ಮಾಲೆಯನ್ನು ತೊಡಿಸಲಿಲ್ಲ. ಆನೆ ಸೊಂಡಿಲನ್ನೆತ್ತಿ ಲಕ್ಷ್ಮಿಯ ಕೊರಳಿಗೆ ಹಾರವನ್ನು ಸೂಡಿತು !

" ಥೂ, ಶಂಕರ ! ನೀನು ಬಲು ತುಂಟ ! " ಎಂದು ಹೇಳಿ ಲಕ್ಷ್ಮಿ ತನ್ನ ಕೊರಳಲ್ಲಿ ತೂಗಾಡುತಿದ್ದ ಹಾರವನ್ನೆತ್ತಿ ತಂಗಿಯ ಕೊರಳಿಗೆ ತೊಡಿಸಿದಳು.

ಲಕ್ಷ್ಮಿ ಹಸಿದು ಬಂದ ನಾಯಕನಿಗೆ ಊಟ ಬಡಿಸಿದಳು. ಅವನು ಲಕ್ಷ್ಮಿಯ ಖಿನ್ನವಾದ ಮೊಗವನ್ನು ನೋಡುತ್ತಾ, " ಪಾಪಾತಿ, ನೀವು ತುಂಬಾ ಬೇಸರದಿಂದಿರುವಿರಲ್ಲ; ಮೊಗದಲ್ಲಿ ಗೆಲುವಿಲ್ಲ; ನಲಿವಿಲ್ಲ ! " ಎಂದು ಉದ್ಗಾರವೆತ್ತಿದ.

ಲಕ್ಷ್ಮಿ ಮಾರ್ನುಡಿಯಲಿಲ್ಲ. ಅವಳ ಎದೆಯಿಂದ ಪೇರುಸಿರೊಂದು ಹೊಮ್ಮಿತು. ಎದೆಯೊಳಗೆ ತುಂಬಿದ ಭೀತಿ ವ್ಯಥೆಗಳೆಲ್ಲ ಆ ನಿಡುಸುಯ್ಲಿನ ರೂಪತಾಳಿ ಹೊರಬಂದುವು. ಅವಳು ಸಾರು ತುಂಬಿದ ಕಲ್ಮಡಿಕೆಯನ್ನು ಕೈಯಲ್ಲಿ ಹಿಡಿದುಕೊಂಡು ನಿಂತಳು.

" ನನ್ನ ಎಳೆ ಜಿಂಕೆಗೇನಾಯಿತು ? " ನಾಯಕ ಬಾಯೊಳಗೆ ತುಂಬಿದ ತುತ್ತನ್ನು ನುಂಗುತ್ತಾ ಕೇಳಿದ.

" ನಾಯಕ, ಆಗ ಬಾರದುದೆಲ್ಲ ಆಗಿ ಹೋಯಿತು ! "

" ಏನು ? " ನಾಯಕ ಕೈಯಲ್ಲಿ ಹಿಡಿದ ತುತ್ತು ಕೈಯಲ್ಲಿಯೇ

ಉಳಿಯಿತು.

"ನಾವು ಸರ್ಪನ ಹೆಡೆಯ ನೆರಳಲ್ಲಿನ ಕಪ್ಪೆಗಳಾಗಿದ್ದೆವು; ನಮ್ಮ ಚಿನ್ನಾಟ ಸರ್ಪಿಗೆ ತಿಳಿದುಹೋಯಿತು!"

"ಅಂದರೆ?"

"ಇನ್ನೂ ಬಿಡಿಸಿ ಹೇಳಬೇಕೇ?" ಲಕ್ಷ್ಮಿ ಕಂಪಿತ ಸ್ವರದಲ್ಲಿ ಉಲಿದಳು: "ನೋಡು, ನಮ್ಮ ಒಲುವು ಪಾಪನಿಗೆ ತಿಳಿದು ಹೋಗಿದೆ!"

"ಹುಸಿ!" ನಾಯಕ ಆಕೆಯ ನುಡಿಯನ್ನು ನಂಬಲು ಬಯಸ ಲಿಲ್ಲ.

"ನಾಯಕ, ನಿನ್ನ ಆಣೆಯಾಗಿಯೂ ನಿಜ!"

"ಪೊನ್ನು ಪಾಪಾತಿ, ಈಗ ಗತಿಯೇನು! ನಾನು ಕುರುಬ ಹುಡುಗ. ಯಾರೂ ದಿಕ್ಕಿಲ್ಲ, ಪಾಪ ನನ್ನ ಹಿಡಿದುಕೊಂಡು ಬಿಡುವರು. ಇಲ್ಲವೇ ಪೋಲಿಸರ ವಶಕ್ಕೆ ಕೊಟ್ಟು ಬಿಡುವರು. ನಾನು ಎಲ್ಲಾದರೂ ದೂರ ಬಹುದೂರ ಕೊಡಗಿಗೋ ಕೆನ್ನಾಡಿಗೋ ಹೋಗಿಬಿಡುವೆನು."

"ನಾಯಕ, ನೀನು ಗಂಡಸು ಎಲ್ಲಿಗೆ ಬೇಕಾದರೂ ಹೋಗ ಬಲ್ಲೆ. ಆದರೆ ನನಗೇನು ದಿಕ್ಕು?"

ನಾಯಕನ ಬುದ್ಧಿ ಪಾಪನ ಮುನಿಸಿನಿಂದ ತನ್ನ ಮೈಯನ್ನು ಕಾಪಾಡಿ ಕೊಳ್ಳುವುದು ಹೇಗೆ ಎಂದು ಆಲೋಚಿಸಿತೇ ಹೊರತು ತನ್ನ ಇನಿಯಳ ಸ್ಥಿತಿ ಏನಾಗಬಹುದು ಎಂದು ಆಲೋಚಿಸಲಿಲ್ಲ. ತನ್ನ ಸ್ವಾರ್ಥ ಬುದ್ಧಿ ಯನ್ನು ನೆನೆದು ಅವನಿಗೇ ನಾಚಿಕೆಯಾಯಿತು. ಅವನು ಕೆಂಪಡರಿದ ಮೋರೆಯೊಡನೆ, "ಪುಟ್ಟ ಪಾಪಾತಿ, ಪಾಪ ನಿಮಗೆ ಕೇಡು ಮಾಡ ಲಾರರು!" ಎಂದು ಉದ್ಗಾರವೆತ್ತಿದ.

"ನಾಯಕ, ನೀನಿಲ್ಲದೆ ನಾನು ಬಾಳಲಾರೆ; ನೀನಿಲ್ಲದ ಬಾಳು ಹಾಳು! ನೀನು ಪಾಪನ ತೊಡಿಯನ್ನು ತೊರೆದು ಹೋಗುವಿಯಾದರೆ, ನಾನು ಈ ಒಡಲನ್ನು ಹೊಳೆಗೆ ಚೆಲ್ಲಿ ಬಿಡುವೆನು. ಈ ನನ್ನ ಮಾತು ನಿಜ; ಬೆಳ್ಳೂರು ಕಾವು ಭಾಗವತಿಯ ಆಣೆಯಾಗಿಯೂ ನಿಜ!"

"ಪಾಪನ ಮುನಿಸಿಂದ ಪಾರಾಗುವುದು ಹೇಗೆ?"

“ ನಾಯಕ, ನಾವು ಒಬ್ಬರನ್ನೊಬ್ಬರು ಪ್ರೀತಿಸುತಿದ್ದೇವೆ; ಒಬ್ಬರಿಗೊಬ್ಬರು ಮನತೆತ್ತಿದ್ದೇವೆ. ” ನೀರು ತುಂಬಿದ ಕಣ್ಣುಗಳೊಡನೆ ಲಕ್ಷ್ಮಿ ಉಸುರಿದಳು : “ ನಾವು ಒಟ್ಟಾಗಿಯೇ ಒದಗುವ ಕಷ್ಟಗಳನ್ನು ಎದುರಿಸೋಣ. ಮಾವನೊಡ್ಡುವ ಅಗ್ನಿ ಪರೀಕ್ಷೆಗೆ ಮೈಯೊಪ್ಪಿಸೋಣ; ಜತೆಯಾಗಿಯೇ ಸಾವನ್ನು ಅಪ್ಪೋಣ ! ”

‘‘ ನಿಜವೇ ಪಾಪಾತಿ ? ” ನಾಯಕ ಸಂದೇಹ ತುಂಬಿದ ದನಿಯಲ್ಲಿ ನುಡಿದ : ‘‘ ನೀವು ದೊಡ್ಡವರು. ನೀವು ಈ ಕುರುಬ ಮುಕ್ಕನ ಕೈ ಬಿಟ್ಟರೆ ನನಗೆ ಯಾರೂ ದಿಕ್ಕಿಲ್ಲ. ’’

‘‘ ನಿಜ ನಾಯಕ. ನಾನು ಎಂದೆಂದಿಗೂ ನಿನ್ನ ತೊರೆಯಲಾರೆ. ” ಲಕ್ಷ್ಮಿ ಪ್ರಮಾಣ ಮಾಡಿದಳು : ‘‘ ಬೆಳ್ಳೂರು ಕಾವು ಭಾಗವತಿ ಯಾಣೆಯಾಗಿ ನಾನು ನಿನ್ನ ಬಿಡುವುದಿಲ್ಲ. ”

ಮನದನ್ನೆಯ ಪ್ರತಿಜ್ಞೆಯನ್ನು ಕೇಳಿ ನಾಯಕನ ಮೋರೆ ಗೆಲುವನ್ನು ತಳೆದಿತು. ಅವನು, ‘‘ ಪಾಪಾತಿ, ನನಗೆ ಆಸರೆಯಾಗಿ ನಿಮ್ಮ ಕೈಯೊಂದು ದೊರೆತರೆ ಸಾಕು; ಯಾವ ರಣಲ ರಾಶಿಯೊಳಗೆ ಬೇಕಾದರೂ ಹಾಯಬಲ್ಲೆ ! ’’ ಎಂದು ಉದ್ಗಾರವೆತ್ತಿದ.

ಆತನಿತ್ತ ಭರವಸೆ ಲಕ್ಷ್ಮಿಯ ಅಂತರಂಗದಲ್ಲಿ ಹೊಸ ಧೈರ್ಯವನ್ನು ತುಂಬಿಸಿತು.



ಮಾವ ಕಲ್ಲೀಕೋಟೆಯಿಂದ ಮನೆಗೆ ಮರಳಬೇಕಾದರೆ ಮೂರು ದಿನಗಳು ಹಿಡಿದುವು. ಲಕ್ಷ್ಮಿ ತನಗೆ ಬೇಕಾದ ಅರಿವೆ ಹಚ್ಚಡಗಳನ್ನು ತಿಳಿಸದಿದ್ದರೂ ಅವರು ಮನೆ ಮಂದಿಗೆಲ್ಲ ಬೇಕಾದ ವಸ್ತ್ರಗಳನ್ನು ಹರಿಸಿ ಮೂಟೆ ಕಟ್ಟಿಸದೆ ಇರಲಿಲ್ಲ. ಅವರು ಚಿರುತೆಯ ಕಿವಿಗಳಿಗೆ ದೊಡ್ಡ ಓಲೆಗಳೆರಡನ್ನು ಮಾಡಿಸಿ ತಂದಿದರು.

ಅವರು ಮನೆಗೆ ಮರಳಿ ಬಂದಾಗ ಅವರ ಮೊಗದಲ್ಲಿ ಸಿಡುಕು ಮುನಿ

ಸುಗಳು ಹೊಗೆಯಾಡುತ್ತಿರಲಿಲ್ಲ. ಅವರ ಪ್ರಸನ್ನ ಮುಖವನ್ನು ನೋಡಿ ಲಕ್ಷ್ಮಿಗೆ ಮಾವ ತನ್ನ ಗೋಪ್ಯಪ್ರಣಯವನ್ನು ಅರಿತಿರಲಾರರು ಎಂಬ ಧೈರ್ಯ ಹುಟ್ಟಿತು.

ಆದರೆ ಮಾವ ಕಲ್ಲೀಕೋಟೆಯಲ್ಲಿ ಬಸ್ಸು ಹತ್ತುವಾಗಲೇ ತಮ್ಮ ಮುಂದಿನ ಹಂಚಿಕೆ ಏನು ಎಂದು ನಿಶ್ಚಯಿಸಿಕೊಂಡಿದ್ದರು. ಅವರು ಯಾವ ಗೊಂದಲಕ್ಕೂ ಅವಕಾಶ ಕೊಡದಂತೆ, ಕಡಲೆ ತಿಂದು ಕೈ ತೊಳೆದ ಹಾಗೆ ಕಾರ್ಯವನ್ನು ಸುಸೂತ್ರವಾಗಿ ಈಡೇರಿಸಿಬಿಡಬೇಕೆಂದು ನಿರ್ಧರಿಸಿದ್ದರು. ಲಕ್ಷ್ಮಿಯನ್ನು ಯಂಬ್ರಾಂದ್ರಿಗೆ ಸಂಬಂಧ ಮಾಡಿಕೊಡುವಾಗ ಕುರುಬ ಹುಡುಗ ಮನೆಯಲ್ಲಿರಕೂಡದು; ಅವನಿಗೆ ಅರಿಯದೆಯೇ ಸಂಬಂಧ ನಡೆದು ಹೋಗಬೇಕು ಎಂಬುದು ಅವರ ಆಲೋಚನೆಯಾಗಿತ್ತು. ಆತ ಮನೆಯಲ್ಲಿದ್ದರೆ ಅಪ್ರಿಯ ಪ್ರಸಂಗವೇನಾದರೂ ತಲೆದೋರಬಹುದು ಎಂಬ ಶಂಕೆ ಅವರಿಗಿತ್ತು. ನಾಯಕನನ್ನು ಕೆಲದಿನಗಳ ಮಟ್ಟಿಗೆ ಮನೆಯಿಂದ ದೂರವಿರಿಸುವುದು ಹೇಗೆ ಎಂದು ಅವರು ಚಿಂತಿಸುತ್ತಿದ್ದರು.

ಆದರೆ ಅವರಿಗೆ ದೈವ ಅನುಕೂಲವಾಗಿತ್ತು. ಅವರು ಬಟ್ಟೆ ಧರಿಸಲೆಂದು ವಾಗ್ಲೀ ಸೇಟರ ಮಾಳಿಗೆಗೆ ನುಗ್ಗಿದಾಗ ಅವರಿಗೆ ಮುಟ್ಟಿಲಿನ ದಾಸಯ್ಯ ಗವುಂಡರು ದೊರೆತರು. ಅವರು ನಾಯರರನ್ನು ಕಂಡೊಡನೆ "ಕೇಳುಕುಟ್ಟಿ ನಾಯರರೇ, ನಿಮ್ಮನ್ನೊಮ್ಮೆ ಕಾಣಬೇಕೆಂದು ಬಹುದಿನಗಳಿಂದ ಆಲೋಚಿಸುತಿದ್ದೆ. ನಿಮ್ಮಲ್ಲಿಗೆ ಬರಬೇಕೆಂದು ನಿಶ್ಚಯಿಸಿದ್ದೆ. ಆದರೆ ಒಂದು ವ್ಯಾಜ್ಯದ ನಿಮಿತ್ತದಿಂದ ನಾನು ಆ ಆಲೋಚನೆಯನ್ನು ಬಿಟ್ಟು ಇಲ್ಲಿಗೆ ಓಡಿಬರಬೇಕಾಯಿತು. ಈಗ ದೇವರು ಸಿಕ್ಕಿದ ಹಾಗೆ ಸಿಕ್ಕಿದಿರಿ!" ಎಂದು ಹೇಳಿದರು.

"ನಮಸ್ಕಾರ ಗವುಂಡರೇ, ನನ್ನಿಂದ ಏನು ಆಗಬೇಕಿತ್ತು." ನಾಯರರು ಪ್ರತಿಪ್ರಶ್ನೆ ಮಾಡಿದರು.

"ದೊಡ್ಡ ಕೆಲಸವೇನೂ ಅಲ್ಲ; ನಿಮ್ಮಿಂದ ಒಂದು ಸಣ್ಣ ಉಪಕಾರವಾಗಬೇಕಿತ್ತು."

"ಹೇಳೋಣವಾಗಲಿ. ನನ್ನ ಕೈಯಿಂದ ಆಗುವಂತಿದ್ದರೆ ಸಂತೋಷದಿಂದ ಮಾಡುವೆನು."

"ನೀವು ಮನಸ್ಸು ಮಾಡಿದರೆ ಅದು ಆಗುವ ಕಾರ್ಯವೇ."

"ಏನದು?"

"ನೀವು ಕೊನೆಗೆ ಒಲ್ಲೆ ಎಂದು ಹೇಳಬಾರದು.

"ಆಗಲಿ ಹೇಳಿರಿ."

"ಒಂದು ಇಪ್ಪತ್ತು ದಿನಗಳ ಮಟ್ಟಿಗೆ ನೀವು ಆನೆಯನ್ನು ನನಗೆ ಬಾಡಿಗೆಗೆ ಕೊಡಬೇಕು."

"ಆನೆಯನ್ನೇ?"

"ಹೌದು. ಹೊಸದೊಂದು ಮನೆ ಮತ್ತು ಪತ್ತಾಯಗಳನ್ನು ಕಟ್ಟಿಸಬೇಕೆಂದು ಕಳೆದ ವರ್ಷವೇ ನಾನು ಮರಗಳನ್ನು ಕಡಿಸಿ ಹಾಕಿದ್ದೇನೆ. ಅವು ನಮ್ಮ ಮನೆಯಿಂದ ನಾಲ್ಕು ಮೈಲುಗಳ ದೂರದಲ್ಲಿವೆ. ಅಲ್ಲಿಗೆ ಹೋಗಿ ಮರಸಿಗಿಯಲು ಯಾವ ಈರಾಯಿಗಳೂ ಒಪ್ಪುವುದಿಲ್ಲ. ನೀವು ಹದಿನೈದು ಇಪ್ಪತ್ತು ದಿನಗಳಮಟ್ಟಿಗಾದರೂ ನಿಮ್ಮ ಆನೆಯನ್ನು ಕೊಟ್ಟಿದ್ದರೆ ಹಿರಿಯ ಉಪಕಾರವಾಗುತ್ತಿತ್ತು."

ದಾಸಯ್ಯ ಗವುಂಡರು ನಾಯರರಿಂದ ತಮಗೆ ಆಗಬೇಕಾದ ಕಾರ್ಯವೇನೆಂದು ವಿವರಿಸಿದರು.

"ಗವುಂಡರೇ,— ನಾನು ಬಾಡಿಗೆಗೆ ಕೊಡಲೆಂದು ಆನೆಯನ್ನು ಸಾಕುತ್ತಲಿಲ್ಲ." ನಾಯರರು ಮಾರ್ನುಡಿದರು: "ಕಳೆದಸಲ ಆ ಕಲ್ಲಾಯಿ ಮರದ ವ್ಯಾಪಾರಿಗೆ ಆನೆಯನ್ನು ಕೊಟ್ಟು ಅದು ಬಡವಾಯಿತು. ಆನೆಕಾರ ಬದುಕಿದುದೇ ಹೆಚ್ಚು!"

"ನಿಮಗೆ ಇಷ್ಟವಿಲ್ಲವೆಂದು ಅರಿತಿದ್ದರೆ ನಾನು ಬಾಯಿ ಬಿಡುತ್ತಿರಲಿಲ್ಲ." ನೊಂದದನಿಯಲ್ಲಿ ದಾಸಯ್ಯ ಗವುಂಡರು ಉಸುರಿಸಿದರು.

"ನಾನು ನಿಮಗೆ ಆನೆಯನ್ನು ಕೊಡಲೊಲ್ಲೆ ಎಂದು ಹೇಳಲಿಲ್ಲ. ಆದರೆ ಆನೆಯ ರಕ್ಷಣೆಯ ವಿಷಯ ಎಚ್ಚರಿಕೆ ವಹಿಸಬೇಕೆಂದು ಮಾತ್ರ ಹೇಳಿದೆ."

"ಆನೆಯನ್ನು ನೋಡಿಕೊಳ್ಳುವ ವಿಷಯ ನೀವು ಏನು ಹೇಳುವಿರೋ ಅದನ್ನು ಚಾಚೂ ತಪ್ಪದೆ ಅನುಸರಿಸುವೆನು." ಅರಳಿದ ಮೋರೆಯೊಡನೆ ಗವುಂಡರು ನುಡಿದರು.

" ನೋಡಿ, ಆನೆ ಬಡವಾಗಕೂಡದು; ಆನೆಕಾರನನ್ನು ಚೆನ್ನಾಗಿ ನೋಡಿಕೊಳ್ಳಬೇಕು. ಬಾಡಿಗೆ ಇಷ್ಟೇ ಬೇಕೆಂದು ನಾನು ಹೇಳುವುದಿಲ್ಲ."

" ಆಗಲಿ. ನಾವೇನಾದರೂ ಕಲ್ಲಾಯಿ ಮಾಪಳ್ಳಿ ವ್ಯಾಪಾರಿಗಳ ಹಾಗಲ್ಲ." ದಾಸಯ್ಯ ಗವುಂಡರು ನುಡಿದರು: " ನಿಮ್ಮ ಮಾತನ್ನು ಅಕ್ಷರಶಃ ಒಪ್ಪಿದೆ. ಆನೆಯನ್ನು ಯಾವಾಗ ಕಳುಹಿಸಿ ಕೊಡುವಿರಿ ?"

" ನಾಳೆಯಲ್ಲ ನಾಡದು ಕಳುಹಿಸುವೆನು.'' ಎಂದು ನಾಯರರು ಮಾತುಕೊಟ್ಟರು.

" ಸಂತೋಷ. ನಾನು ನಾಳೆ ಸಂಜೆ ಮನೆ ಸೇರುವೆನು."

ನಾಯರರು ತಮ್ಮ ಮನಸ್ಸಿನೊಳಗೇ ಹಿಗ್ಗಿದರು. ಅವರು ತಮ್ಮ ಮನಸ್ಸಿನಲ್ಲಿಯೇ, " ನನಗೆ ದೈವಸಹಾಯವಿದೆ. ಕೆಲವು ದಿನಗಳ ಮಟ್ಟಿಗೆ ನಾಯಕನನ್ನು ಮನೆಯಿಂದ ದೂರವಿರಿಸಲು ದಾಸಯ್ಯ ಗವುಂಡ ನೆರೆವಾದ.'' ಎಂದು ತಮ್ಮೊಳಗೇ ಹೇಳಿಕೊಂಡರು.

ನಾಯರರು ಊರಿಗೆ ಮರಳಿ ಬಂದ ಮೇಲೆ ಸೊಸೆಯನ್ನಾಗಲಿ,— ಕುರುಬ ಹುಡುಗನನ್ನಾಗಲೀ ದಂಡಿಸುವ ಗೋಜಿಗೆ ಹೋಗಲಿಲ್ಲ. ಅವರು ಆ ವಿಷಯವನ್ನೆತ್ತದೆ ತಮ್ಮ ತುಟಿಗಳನ್ನು ಬಿಗಿಹಿಡಿದರು. ಸಂಶಯ ಕೀಟಕ್ಕೆ ಮನದಲ್ಲಿ ಇಂಬುಗೊಟ್ಟು ತಾವು ಹೈರಣಗೊಂಡೆವೆಂದು ಆ ನಲ್ಲ ನಲ್ಲೆಯರು ಆಲೋಚಿಸಿದರು.

ಮರುದಿನ ಪಾಪ ನಾಯಕನನ್ನು ಕರೆದು, '' ನಾಯಕ, ನೀನು ಕೆಲವು ದಿನಗಳ ಮಟ್ಟಿಗೆ ಆನೆಯನ್ನು ಅಟ್ಟಿಕೊಂಡು ಬೇರೊಂದು ಎಡೆಗೆ ಕೆಲಸಕ್ಕೆ ಹೋಗಬೇಕು." ಎಂದು ತಿಳಿಸಿದರು.

'' ಎಲ್ಲಿಗೆ ಪಾಪನೇ ?" ನಾಯಕ ಯಜಮಾನನಿಗೆ ಮಣಿದು ಕೇಳಿದ. ಏಕೋ, ಅವನ ಎದೆಯಲ್ಲಿ ಭೀತಿಯ ಅಲೆಯೊಂದು ಎದ್ದಿತು. ಪಾಪ ತನ್ನನ್ನು ನಚ್ಚಿನ ಪಾಪಾತಿಯಿಂದ ದೂರವಿರಿಸಲು ಹೊರಟಿದ್ದಾನೆ ಎಂದು ಅವನ ಅಂತರಂಗ ನುಡಿದಿತು.

'' ನೋಡು, ಮುಟ್ಟಿಲು ದಾಸಯ್ಯ ಗವುಂಡನಿಗೆ ಅಡವಿಯಿಂದ ಮರ ಎಳೆಸಲು ಹದಿನೈದು ಇಪ್ಪತ್ತು ದಿನಗಳ ಮಟ್ಟಿಗೆ ಆನೆ ಬೇಕಂತೆ; ನಾನು ಶಂಕರನನ್ನು ಕಳುಹಿಕೊಡಲು ಒಪ್ಪಿಕೊಂಡು ಬಂದಿದ್ದೇನೆ."

"ಪಾಪನೇ,–ಆನೆಯನ್ನು ಅಲ್ಲಿಗೆ ಅಟ್ಟಿಕೊಂಡು ಹೋಗಲೇಬೇಕೇ?

" ಹೌದು. ದಾಸಯ್ಯ ಗವುಂಡ ಉಪಕಾರಕ್ಕೆ ಆಗುವ ಮನುಷ್ಯ. ನಾನು ಮಾತು ಬೇರೆ ಕೊಟ್ಟಿದ್ದೇನೆ. " ಪಾಪ ಹೇಳಿದರು: " ನೀನೇನೂ ದಿಗಿಲುಗೊಳ್ಳಬೇಕಾಗಿಲ್ಲ. ಅವನು ನಿನ್ನನ್ನು ಆ ಮೂಸೆ ಚೆಟ್ಟಿಯನ ಹಾಗೆ ನಡೆಸಿಕೊಳ್ಳಲಾರ. ಆನೆಯನ್ನೂ, ಆನೆಕಾರನನ್ನೂ ಬಹು ಎಚ್ಚರಿಕೆಯಿಂದ ನೋಡಿಕೊಳ್ಳಬೇಕೆಂದು ಹೇಳಿದ್ದೇನೆ. "

" ಆಗಲಿ ಪಾಪನೇ. " ನಾಯಕ ಮರಳಿ ತಲೆಬಾಗಿದ.

" ನೋಡು, ನಾಳೆ ಮುಂಜಾನೆ ನಾನು ನಿನಗೆ ಕಾಗದ ಬರೆದು ಕೊಡುವೆನು. ನೀನು ಬೆಳಿಗ್ಗೆ ಹೊರಟರೆ ಸಂಜೆ ಹೊತ್ತು ಗವುಂಡರ ಮನೆಯನ್ನು ಸೇರಬಹುದು. " ಎಂದು ಹೇಳಿ ಪಾಪ ನಾಯಕನನ್ನು ಅವನ ಕೆಲಸಕ್ಕೆ ಕಳುಹಿದರು.

ಅಂದು ನಾಯಕನಿಗೆ ತನ್ನ ಪಾಪಾತಿಯನ್ನು ಕಂಡು ಮಾತಾಡಲು ಅವಕಾಶವೇ ಸಿಗಲಿಲ್ಲ. ದೇವತ್ತಿಯೇ ಅವನಿಗೆ ಊಟವನ್ನು ಬಡಿಸಿದಳು. ಚಿರುತೆ ತಾಂಬೂಲವನ್ನು ತಂದು ಕೊಟ್ಟಳು. ಪಾಪಾತಿಯ ಮೋರೆಯನ್ನು ಕಾಣದೆ ಅವನಿಗೆ ಬೇಸರವಾಯಿತು. ಅವನು ಆನೆಯ ಆರೋಗಣೆಗೆಂದು ಮಿದಿದ ನೆಲ್ಲನ್ನು ಒಲೆಯ ಮೇಲೆ ಬೇಯಲು ಇರಿಸಿ ಪಾಪಾತಿಯನ್ನು ಮಾತಾಡಿಸಲೆಂದು ಹುಡುಕಿದ. ಚಿರುತೆ ಅವನಿಗೆ, "ಅಕ್ಕ ಹಾಲು ಕರೆಯಲೆಂದು ಹಟ್ಟಿಗೆ ಹೋಗಿರುವಳು. ದೇವತ್ತಿಗೆ ಕೈನೋವಂತೆ. ಆದ್ದರಿಂದ ಅಕ್ಕನನ್ನು ಕಳುಹಿಸಿರುವರು. " ಎಂದು ತಿಳಿಸಿದಳು.

ನಾಯಕ ಹಟ್ಟಿಯಲ್ಲಿ ಪಾಪಾತಿಯನ್ನು ಸಂಧಿಸಿ ಏಕಾಂತದಲ್ಲಿ ಮಾತಾಡಬಹುದೆಂದು ಎಣಿಸಿ ಅಲ್ಲಿಗೆ ಹೋದ. ಅಲ್ಲಿ ಚಿರುತೆ ಹೇಳಿದಂತೆ ಲಕ್ಷ್ಮಿ ಹಸುವೊಂದನ್ನು ಹಾಲು ಕರೆಯಲಿದ್ದಳು. ಹೆಜ್ಜೆಗಳ ಸದ್ದು ಕಿವಿಗಳಿಗೆ ಬೀಳಲು ಅವಳು ಮೋರೆಯನ್ನು ತಿರುಗಿಸಿ ನೋಡಿದಳು. ನಾಯಕ ತನ್ನನ್ನು ಅರಸಿಕೊಂಡು ಬರುವುದು ಅವಳಿಗೆ ಕಾಣಿಸಿತು. ಇನಿಯನ ಮುಖ ದರ್ಶನದಿಂದ ಅವಳ ಎದೆಗಡಲು ಉಕ್ಕಿ ಬಂತು. ಸಂತಸದ ಕದಿರುಗಳು ಆ ಚೆಲುವೊಗದಲ್ಲಿ ಕಳೆಯಾಡಿದುವು. ಅವಳು, "ನಾಯಕ, ಏನು ಈ ಕಡೆ ದಯಮಾಡಿಸಿದೆ? " ಎಂದು ಕೇಳಿದಳು.

" ಪಾಪಾತಿ, ಬೆಳಗಿನಿಂದ ನಿಮ್ಮನ್ನು ಕಾಣದೆ ನನಗೆ ಮರುಳು ಹಿಡಿದಂತೆ ಆಗಿದೆ. ನೀವು ನನ್ನ ಒಡಲು ಮತ್ತು ಜೀವಗಳನ್ನು ನಿಮ್ಮ ವಶಕ್ಕೆ ತೆಗೆದುಕೊಂಡು ಬಿಟ್ಟಿರಿ! ಇನ್ನು ಹದಿನೈದು ಇಪತ್ತು ದಿನ ನಿಮ್ಮನ್ನು ಕಾಣದೆ ಹೇಗೆ ಇರಲಿ ಎಂಬ ಚಿಂತೆ ನನಗೆ ಹಿಡಿದಿದೆ!"

" ಹದಿನೈದು ಇಪ್ಪತ್ತು ದಿನ!" ಲಕ್ಷ್ಮಿಯ ಕೊರಳ ಉಲಿತದಲ್ಲಿ ವಿಸ್ಮಯ ತುಂಬಿತು.

" ಹೌದು. ಪನಮರ ಹೊಳೆಯಾಚೆ ಮುಟ್ಟೆಲು ದಾಸಯ್ಯ ಗವುಂಡನಿಗೆ ಶಂಕರನಿಂದ ಮರ ಎಳೆಯಿಸಬೇಕಂತೆ. ನಾಳೆ ಮುಂಜಾನೆ ಆನೆಯನ್ನು ಅಟ್ಟಿಕೊಂಡು ಹೋಗಲು ಪಾಪನ ಅಪ್ಪಣೆ ಆಗಿದೆ."

ಇನ್ನು ಹದಿನೈದು ಇಪ್ಪತ್ತು ದಿನಗಳತನಕ ಮನದನ್ನನ ದರ್ಶನ ದೊರೆಯಲಾರದು ಎಂದು ಅರಿತಾಗ ಲಕ್ಷ್ಮಿಯ ಮುಖ ಖಿನ್ನವಾಯಿತು. ಆದರೂ ಅವಳು ಧೈರ್ಯತಂದುಕೊಂಡು, " ನಾಯಕ, ಕೇವಲ ಇಪ್ಪತ್ತು ದಿವಸ ತಾನೇ; ಬೇಗ ಕೆಲಸ ಮುಗಿಸಿ ಬಂದುಬಿಡು." ಎಂದು ಹೇಳಿದಳು.

" ಪಾಪಾತಿ, ನಿಮ್ಮನ್ನು ಕಾಣದ ಒಂದೊಂದು ದಿನವೂ ನನ್ನ ಪಾಲಿಗೆ ಒಂದೊಂದು ವರ್ಷ!" ನಾಯಕ ನಿಡುಸುಯ್ಲೊಂದನ್ನು ಹೊರ ಚೆಲ್ಲಿದ: " ನನ್ನ ಮೈ ಅಲ್ಲಿ ದುಡಿಯುತ್ತಾ ಇದ್ದರೂ ನನ್ನ ಜೀವ ಮಾತ್ರ ನಿಮ್ಮ ಹತ್ತಿರವೇ ಇರುವುದು!"

" ನಾಯಕ, ನನ್ನ ಸ್ಥಿತಿಯೂ ಅಷ್ಟೆ. ಒಂದು ಕ್ಷಣವಾದರು ನಿನ್ನ ಧ್ಯಾನವನ್ನು ಮಾಡದೆ ಇರಲು ನನ್ನಿಂದ ಆಗಲೊಲ್ಲದು."

" ಪಾಪಾತಿ, ಆದರೂ ನನಗೊಂದು ಸಂದೇಹ."

" ಏನು ನಾಯಕ?"

" ನಾನು ಮುಟ್ಟೆಲಿನಿಂದ ಮರಳಿ ಬರುವಾಗ ನೀವು ಇಲ್ಲಿ ಇರು ವಿರೋ ಇಲ್ಲೋ ಎಂದು."

" ನಾಯಕ, ಅದು ಮರುಳು ಶಂಕೆ."

" ಅಲ್ಲ. ಇಂದು ಒಂದು ಕನಸು ಕಂಡೆ. ಬೆಳಗಿನ ಜಾವದಲ್ಲಿ ಕಂಡ ಕನಸು ಎಂದೂ ಸುಳ್ಳಾಗದು."

" ಏನು ಆ ಕನಸು?"

"ನೋಡಿ, ಒಂದು ಸಂಜೆಯ ಹೊತ್ತು ನಾನು ನಿಮ್ಮ ಕೈಹಿಡಿದು ಕೊಂಡು ಒಂದು ಎತ್ತರದ ಗುಡ್ಡವನ್ನೇರಿ ನಿಂತಿದ್ದೆ. ದೂರದ ಅಡವಿಯ ಮರೆಯಲ್ಲಿ ಅಡಗಿಕೊಳ್ಳಲು ಹೊಂಬಣ್ಣದ ಸೂರ್ಯ ಓಡಿಹೋಗುತ್ತಿದ್ದ. ನೀವು ನನ್ನ ತಬ್ಬಿಕೊಂಡು, 'ನಾಯಕ, ನನ್ನ ಮೋರೆ ಚಂದವೋ, ಸಂಜೆ ಸೂರ್ಯನ ಬಿಂಬ ಚಂದವೋ?' ಎಂದು ಕೇಳುತ್ತಿದ್ದಿರಿ. ಅಷ್ಟರಲ್ಲಿ...."

"ಅಷ್ಟರಲ್ಲಿ ಏನಾಯಿತು?" ನಾಯಕ ಹೇಳಿದ ಕನಸಿನ ಕತೆ ಲಕ್ಷ್ಮಿಯ ಕುತೂಹಲವನ್ನು ಕೆರಳಿಸಿತು. ನಾಯಕನಾಡಿದ ಮಾತುಗಳನ್ನು ಕೇಳಿ ಅವಳ ಕೆನ್ನೆ ಕೆಂಪೇರಿದುವು.

"ಎಲ್ಲಿಂದಲೋ ಒಬ್ಬರು ತಂಬ್ರಾಕಳು ಸರಸರನೆ ಗುಡ್ಡವನ್ನೇರಿ ಬಂದರು. ಅವರು ನನ್ನ ಸುಟ್ಟು ಬಿಡುವಂತೆ ದುರುಗುಟ್ಟಿ ನೋಡುತ್ತಾ, ನಿಮ್ಮ ಕೈಹಿಡಿದರು. ಅವರು ನನ್ನನ್ನು ಹೊಡೆದು ಗುಡ್ಡದ ಕೆಳಗೆ ದೂಡಿ, ನಿಮ್ಮನ್ನು ಹಿಡಿದೆಳೆದುಕೊಂಡು ಸರಸರನೆ ಹೊರಟು ಹೋದರು."

"ಕನಸು ನಿಜವಾಗುವುದಿಲ್ಲ. ನೀನು ಅದನ್ನು ಮರೆತು ಬಿಡು. ನಿನ್ನ ಎದೆಯಲ್ಲಿ ಒಸರಿದ ಕನಸಿನ ಕಹಿಯನ್ನು ಅಳಿಸಿಬಿಡುತ್ತೇನೆ."

ಲಕ್ಷ್ಮಿ ಹಾಲು ಕರೆದು ಮುಗಿಸಿದ್ದಳು. ಅವಳು ಹಾಲು ತುಂಬಿದ ತಂಬಿಗೆಯನ್ನು ಹಟ್ಟಿಯ ಗೋಡೆಯ ಮೇಲಿರಿಸಿ, ತನ್ನ ತೋಳುಗಳಿಂದ ನಾಯಕನನ್ನು ಸೆಳೆದು ಎದೆಗಪ್ಪಿಕೊಂಡಳು. ಅವಳು ತನ್ನ ತುಟಿಗಳನ್ನು ನಾಯಕನ ತುಟಿಗಳ ಮೇಲಿರಿಸಿ, "ನೋಡು, ನನ್ನ ತುಟಿಜೇನು ನಿನ್ನ ಕನಸಿನ ಕಹಿಯನ್ನು ಮರಸೀತು!" ಎಂದು ಹೇಳಿ ಚುಂಬಿಸಿದಳು.

ನಾಯಕನ ಪಾಲಿಗೆ ಅದು ಹೃದಯವನ್ನು ಕೊನರಿಸಬಲ್ಲ ಸಂಜೀವಿನಿಯಾಯಿತು.

# ೨೦

ಮರುದಿನ ಪಾಪನ ಆದೇಶದಂತೆ ನಾಯಕ ತನ್ನ ಸರಕು ಸರಂಜಾಮುಗಳನ್ನು ಕಟ್ಟಿಕೊಂಡು ಆನೆಯೊಡನೆ ಮುಟ್ಟಿಲು ದಾಸಯ್ಯ ಗವುಂಡನಲ್ಲಿಗೆ ತೆರಳಿದ. ಆತನ ನಿರ್ಗಮನದಿಂದ ಲಕ್ಷ್ಮಿಯ ಮನಸ್ಸು ಬರಿದಾಯಿತು. ನಾಯಕ ಹೋಗುವಾಗ ಆಕೆಯ ಉಲ್ಲಾಸ ಉತ್ಸಾಹಗಳೆಲ್ಲಾ ಸೆಳೆದು ಕೊಂಡು ಹೋದಂತೆ ಅವಳಿಗೆ ಅನಿಸಿತು. ಜಡತೆ ಅವಳನ್ನು ಮುಸುಕಿತು. ಬರಿ ನೆರಳಿನಂತೆ ಅವಳು ಮನೆಯ ಒಳಹೊರಗೆ ಓಡಾಡಿದಳು.

ಅಂದು ಮಧ್ಯಾಹ್ನ ಊಟ ಮುಗಿಸಿದ ಮೇಲೆ ಮಾವ ಲಕ್ಷ್ಮಿಯನ್ನು ತಮ್ಮ ಕೋಣೆಗೆ ಕರೆಯಿಸಿಕೊಂಡರು. ಅತಿ ಪ್ರಾಮುಖ್ಯ ವಿಷಯಗಳೇನಾದರೂ ಇದ್ದರೆ ಮನೆಯವರನ್ನು ತಮ್ಮ ಓವರಿಗೆ ಕರೆಸಿಕೊಂಡು ಮಾತಾಡುವುದು ಅವರ ಪದ್ಧತಿ. ಮಾವ ಯಾವ ಸಂಗತಿಯನ್ನು ಪ್ರಸ್ತಾಪಿಸಲಿದ್ದಾರೆ ಎಂದು ಅವಳು ಕೌತುಕಗೊಂಡಳು. ನಾಯಕನಿಗೆ ತಾನು ಜೀವ ಒಪ್ಪಿಸಿದುದು ಮಾವನಿಗೆ ತಿಳಿಯಿತೇ ಎಂದು ಅವಳಿಗೆ ದಿಗಿಲಾಯಿತು. ಅವಳ ಕಾಲುಗಳು ನಡುಗಿದುವು; ಮೋರೆ ಬಿಳಿಚಿಕೊಂಡಿತು. ಅವಳು ವಿಹ್ವಲತೆ ತುಂಬಿದ ಹೃದಯದೊಡನೆ ಮಾವನ ಕೋಣೆಯೊಳಗೆ ನುಗ್ಗಿದಳು.

ಮಾವ ಮಂಚದ ಮೇಲೆ ಮೈ ಚಾಚಿದ್ದರು. ಅತ್ತೆ ಎಲೆಗೆ ಸುಣ್ಣ ಹಚ್ಚಿ ಮಾವನ ಕೈಗೆ ಕೊಡುತಿದ್ದಳು. ಲಕ್ಷ್ಮಿ ಸದ್ದಿಲ್ಲದೆ ಬಂದು ಮಾವನ ಮುಂದೆ ತಲೆತಗ್ಗಿಸಿ ನಿಂತಳು. ಮಾವ ಒಂದು ಕ್ಷಣ ರೆಪ್ಪೆ ಮುಚ್ಚದೆ ಸೊಸೆಯ ಮೋರೆಯನ್ನೇ ನೋಡಿದರು. ಅವರ ಕಣ್ಣ ನೋಟದ ಕೊರಲಗು ಲಕ್ಷ್ಮಿಯ ಎದೆಯನ್ನು ಸೀಳಿ ವಿದೀರ್ಣಗೊಳಿಸಿತು.

"ಲಕ್ಷ್ಮೀ!" ಮಾವ ಸೊಸೆಯನ್ನು ಸಂಬೋಧಿಸಿದರು. ಆ ದನಿ ತುಂಬಾ ಕರ್ಕಶವಾಗಿತ್ತು.

ಲಕ್ಷ್ಮಿ ಪಡಿನುಡಿಯಲಿಲ್ಲ.

"ಲಕ್ಷ್ಮೀ, ನೋಡು. ನಿನಗೊಂದು ಸಂಬಂಧವನ್ನು ನಿಶ್ಚಯಿಸಿಕೊಂಡು ಬಂದಿದ್ದೇನೆ."

ಮಾವನ ತುಟಿಗಳಿಂದ ಸಂಬಂಧದ ಮಾತು ಬರುವುದು ಎಂದು

ಲಕ್ಷ್ಮಿ ನಿರೀಕ್ಷೆ ಮಾಡಿರಲಿಲ್ಲ. ಅವಳಿಗೆ ತನ್ನ ಪಾದಗಳ ಅಡಿಯಿಂದ ನೆಲವು ಕುಸಿದು ಹೋಗುವಂತೆ ತೋರಿತು. ತಾನು ಜಾರಿ ಬೀಳಬಾರ ದೆಂದು ಅವಳು ನೆಲವನ್ನು ಪಾದಗಳಿಂದ ಒತ್ತಿದಳು; ಮುಷ್ಟಿಗಳನ್ನು ಬಿಗಿ ಹಿಡಿದಳು.

"ನೋಡು, ಈ ಸಲ ನಯನಾಜೂಕುಗಳಿಲ್ಲದ ಯಾವನೋ ಒಬ್ಬ ಧಾಂಡಿಗನಿಗೆ ಕೊಟ್ಟು ಸಂಬಂಧ ಮಾಡುವುದಿಲ್ಲ.'' ಈಗ ಮಾವನ ದನಿ ಸ್ವಲ್ಪ ಮಿದುವಾಗಿತು: "ಒಳ್ಳೆಯವನನ್ನೇ ಆರಿಸಿದ್ದೇನೆ. ಕಳೆದ ಸಲ ನಾನು ತರವಾಡಿನ ಕ್ರಮವನ್ನು ಮೀರಿ ತಪ್ಪು ಮಾಡಿದೆ!''

"ಯಾರಾತ?'' ಮಾವನ ಕೈಗೆ ಮಡಚಿದ ತಾಂಬೂಲವನ್ನು ಕೊಡುತ್ತಾ, ಅತ್ತೆ ಕೇಳಿದಳು.

"ಆತ ದೂರದವನೇನೂ ಅಲ್ಲ; ನಮಗೆಲ್ಲ ಪರಿಚಿತ. ಲಕ್ಷ್ಮಿಯೂ ಆತನನ್ನು ಬಲ್ಲಳು. ನಮ್ಮ ನೆರೆ ಗ್ರಾಮದ ಮಾವಿನಕೆರೆ ವಾಸುದೇವ ಯಂಬ್ರಾಂದ್ರಿಯೇ ಆತ!''

''ಮಾವ, ಬೇಡ! ನನಗೆ ಯಾವ ಸಂಬಂಧವೂ ಬೇಡ! ಈಗ ಇದ್ದಂತೆಯೇ ಇದ್ದು ಬಿಡುತ್ತೇನೆ."

ಲಕ್ಷ್ಮಿ ತನ್ನನ್ನು ಬಿಟ್ಟು ಓಡುತ್ತಿರುವ ಧೈರ್ಯವನ್ನು ಬಿಗಿ ಹಿಡಿದು ಹೇಳಿದಳು. ಅವಳ ಕಣ್ಣುಗಳಲ್ಲಿ ನೀರು ತುಂಬಿತು. ಕೊರಳು ಬಿಗಿದು ಬಂತು.

"ನೀನು ಹೇಳುವುದಾದರೂ ಏನನ್ನು!" ಮಾವನ ಕಣ್ಣುಗಳು ಉರಿಯುವ ಕೆಂಡಗಳಾದುವು. ಅವರ ಕಣ್ಣುಕಿಚ್ಚಿನಿಂದ ಲಕ್ಷ್ಮಿಯ ಎದೆ ಸುಟ್ಟು ತಲ್ಲಣಗೊಂಡಿತು.

"ನಿಮ್ಮ ಕಾಲಿಗೆ ಬೀಳುತ್ತೇನೆ; ನನಗೆ ಸಂಬಂಧ ಬೇಡ."

"ಹೌದು. ನಿನಗೆ ಈ ಯಂಬ್ರಾಂದ್ರಿಯೊಡನೆ ಸಂಬಂಧ ಬೇಡ! ರಂಡೆ! ಆ ಕುರುಬ ಹುಡುಗ ನಾಯಕನಿಗೆ ಸಂಬಂಧ ಮಾಡಿ ಕೊಟ್ಟಿದ್ದರೆ ನೀನು ಹಿರಿ ಹಿಗ್ಗಿ ನಲಿಯುತ್ತಿದ್ದೆಯಲ್ಲವೇ?''

ಮಾವನ ತುಟಿಗಳಿಂದ ಹೊಮ್ಮಿದ ಮಾತುಗಳನ್ನು ಕೇಳಿ ಲಕ್ಷ್ಮಿಯ ಶಕ್ತಿ ಎಲ್ಲ ಉಡುಗಿ ಹೋಯಿತು. ಅವಳು ನಿಲ್ಲಲಾರದೆ ನೆಲದ ಮೇಲೆ

ಕುಸಿದು ಬಿದ್ದಳು.

"ಲಕ್ಷ್ಮಿಕ್ಕೀ, ನೀನು ನಾಯಕನ ಜತೆಯಲ್ಲಿ ನಡೆಸಿದ ಮೋಜನ್ನೆಲ್ಲಾ ನಾನು ಬಲ್ಲೆ." ಮಾವ ಕ್ರುದ್ಧ ಸ್ವರದಲ್ಲಿ ಹೇಳಿದರು: "ತರವಾಡಿಗೆ ಮಸಿ ಬಳಿಯಲು ಹೊರಟ ನಿನ್ನನ್ನು ಒದೆದು ಮನೆಯಿಂದ ಹೊರಗಟ್ಟುತಿದ್ದೆ; ಆ ನಾಯಕನನ್ನು ಜೇಲಿಗೆ ಅಟ್ಟುತಿದ್ದೆ. ಆದರೆ ತರವಾಡಿನ ಗೌರವ ವನ್ನು ಆಲೋಚಿಸಿ ನಾನು ಸುಮ್ಮನಾದೆ."

"ಮಾವ, ಬೇಕಾದರೆ ನೀವು ನನ್ನ ಕೊಂದು ಬಿಡಿ." ಲಕ್ಷ್ಮಿಕ್ಕ ಅಳುತ್ತಾ ಹೇಳಿದಳು: "ಆದರೆ ಆ ಯಂಬ್ರಾಂದ್ರಿಗೆ ಮಾತ್ರ ನೀವು ನನ್ನ ಒಪ್ಪಿಸಬೇಡಿ!"

"ಲಕ್ಷ್ಮಿಕ್ಕ, ನೀನು ತರವಾಡಿನ ಮಾನವನ್ನು ಕಳೆದೆ. ಈಗ ನನ್ನ ಮತ್ತು ತರವಾಡಿನ ಮಾನವನ್ನು ಉಳಿಸಬೇಕಾದರೆ ನೀನು ಯಂಬ್ರಾಂದ್ರಿ ಯನ್ನು ಸಂಬಂಧ ಮಾಡಿಕೊಳ್ಳಲೇ ಬೇಕು!"

"ನಾನು ಮೊದಲೇ ಎಚ್ಚರಿಕೆ ಹೇಳಿದ್ದೆ" ಈ ವರೆಗೆ ಮೌನ ವಾಗಿದ್ದ ಅತ್ತೆ ದನಿ ಎತ್ತಿದಳು: "ಆದರೆ ಮನೆಯಲ್ಲಿ ಬೆಳೆದ ಕುರುಬ ಹುಡುಗ; ಆದುದರಿಂದ ಲಕ್ಷ್ಮಿಕ್ಕ ಆತನೊಡನೆ ಸಲುಗೆಯಿಂದ ನಡೆದು ಕೊಳ್ಳುತಿದ್ದಾಳೆ ಎಂದು ನನ್ನ ಮಾತನ್ನು ನೀವು ಕಿವಿಗಳಿಗೆ ಹಾಕಿಕೊಳ್ಳ ಲಿಲ್ಲ. ಈಗ ಎಂತಹ ಪೇಚು ಅಪಮಾನಗಳ ಪ್ರಸಂಗ ಒದಗಿತು! ನಿಮ್ಮ ಜಾಗ್ರತೆ ಅಟ್ಟ ಮೇಲೆ ಒಲೆ ಉರಿಯಿತು ಎಂಬ ಗಾದೆಯ ಹಾಗೆ ಆಯಿತು. ಈ ಅವಧಿಯಲ್ಲಿ ಏನೆಲ್ಲಾ ನಡೆದು ಹೋಗಿದೆಯೇ ಎಂಬು ದನ್ನು ಆ ಭಗವತಿಯೇ ಬಲ್ಲಳು!"

ಮಾವನ ಮಾತೆಂದರೆ ಕಲ್ಲ ಮೇಲೆ ಕೆತ್ತಿದ ಬರಹ. ಅವರು ಒಮ್ಮೆ ನುಡಿದ ಮಾತನ್ನು ಎಂದಿಗೂ ಬದಲಾಯಿಸುವ ಹಾಗಿಲ್ಲ. ಆ ಹಾರುವನ ಜತೆಯಲ್ಲಿ ಬಾಳುವುದು ಹೇಗೆ? ಈಗ ನಾಯಕನಾದರೂ ಸನಿಹದಲ್ಲಿ ಇದ್ದಿದ್ದರೆ ಲೇಸಾಗುತಿದ್ದಿತು. ಕುಲದ ಘನತೆ,-ತರವಾಡಿನ ಹಿರಿಮೆ,-ಇವುಗಳನ್ನೆಲ್ಲಾ ಗಾಳಿಗೊಡ್ಡಿ ಆತನ ಜತೆಯಲ್ಲಿ ದೂರ, ಬಹು ದೂರ ಹೋಗಬಹುದಿತ್ತು; ಯಾರೂ ಅರಿಯದ ದೂರದ ನಾಡಿನಲ್ಲಿ ದಿನ ಗಳನ್ನು ದೂಡಬಹುದಿತ್ತು. ಆದರೆ ಆತ ಬಳಿಯಲಿಲ್ಲ. ತಾನು ಆತ

ನನ್ನು ಕಾಣಬಾರದು; ಆತನ ಸಂಗಾತ ಆಲೋಚಿಸಬಾರದು ಎಂದೇ ಮಾವ ಆತನನ್ನು ಮುಟ್ಟಲಿಗೆ ಕಳುಹಿಸಿದ್ದಾರೆ; ತನ್ನ ಸುತ್ತಲೂ ಬೆಂಕಿಯ ಬಲೆಯನ್ನು ಹೆಣೆದಿದ್ದಾರೆ! ತನಗಿರುವುದೊಂದೇ ದಾರಿ; ಅದು ಸಾವನ್ನಪ್ಪುವುದು!

ಹೀಗೆ ಲಕ್ಷ್ಮಿ ಚಿಂತೆಯ ಪೊಡೆಗಗಳೊಗೆ ಸಿಲುಕಿ ದಾರಿಗಾಣದೆ ತೊಳಲಿದಳು. ಕೊನೆಗೆ ಅವಳು ತನ್ನ ಜೀವವನ್ನು ತೊರೆದು ಬಿಡುವೆನೆಂದು ಹೊಳೆಯ ಕಡೆಗೆ ಓಡಿದಳು. ನೀರು ಸ್ತಬ್ಧವಾಗಿತ್ತು. ದಡದಲ್ಲಿ ಬೆಳೆದು ನಿಂತ ಮಾವಿನ ಮರದ ನೆರಳು ನೀರಲ್ಲಿ ಕಾಣಿಸುತಿದ್ದಿತು. ಎಲೆಗಳ ಎಡೆಯಿಂದ ಬಾನಿನಲ್ಲಿ ಬೆಳಗುತಿದ್ದ ಬೆಂಗದಿರ ಲಕ್ಷ್ಮಿಯನ್ನು ಇಣಿಕಿ ನೋಡಿದ.

ಲಕ್ಷ್ಮಿ ಬಟ್ಟೆ ಬಡಿಯುವ ಹಾಸುಗಲ್ಲಿನ ಪಕ್ಕದಲ್ಲಿದ್ದ ಗುಂಡುಕಲ್ಲನ್ನು ಎತ್ತಿಕೊಂಡಳು. ಆ ಅರೆಯನ್ನು ಮೇಲುದೆಯಲ್ಲಿ ಸುತ್ತಿಕೊರಳಿಗೆ ಕಟ್ಟಿಕೊಂಡಳು. ತನ್ನ ಜೀವವನ್ನು ಜಲದೇವಿಗೆ ಕಾಣಿಕೆಯಾಗಿ ಒಪ್ಪಿಸುವೆನೆಂದು ದಿಟ್ಟತನದಿಂದ ನೀರಿಗಿಳಿದಳು. ಸ್ತಬ್ಧವಾದ ನೀರು ಅಲುಗಾಡಿತು. ಅವಳು ನೀರನ್ನು ಸೀಳುತ್ತಾ ಮಡುವಿನೆಡೆಗೆ ಸಾಗಿದಳು. ಅವಳು ಮುಂಬರಿದು ಧಡಂ ಎಂದು ಮಡುವಿನೊಳಗೆ ನೆಗೆದಳು.

ಆಕೆ ಬಿದ್ದೆಡೆಯಲ್ಲಿ ಚಕ್ರಾಕಾರದಲ್ಲಿ ಅರೆಗಳು ಎದ್ದುವು. ಆಕೆಯ ಮೈ ಮಡುವಿನೊಳಗೆ ಮರೆಯಾಯಿತು. ಕೊರಳಿಗೆ ಬಿಗಿದ ಕಲ್ಲು ಅವಳನ್ನು ಮಡುವಿನೊಳಗೆ ಎಳೆದೊಯ್ದಿತು. ನೀರನ್ನು ಸೀಳಿ ಒಳನುಗ್ಗುತಿದ್ದ ನೇಸರ ಕಿರಣಗಳು ನೀರಿಗೆ ಹಸಿರು ಬಣ್ಣ ಬಳಿದಿದ್ದುವು. ಒಳಗೆ ಓಡಾಡುತಿದ್ದ ಮೀನುಗಳು ಏನೋ ಹೊಸ ಆಹಾರ ನೀರಲ್ಲಿ ಬಿತ್ತೆಂದು ಈಜಿಬಂದು ಲಕ್ಷ್ಮಿಯನ್ನು ಮುತ್ತಿದುವು. ಆಕೆಯ ಕೈ ಮೈ ಮುಡಿ ಮತ್ತು ಬಾಯಿಗಳನ್ನು ಸೋಂಕಿದುವು. ಆಕೆಯ ಕಿವಿಗಳೊಳಗೆ ನುಗ್ಗಿದುವು.

ಲಕ್ಷ್ಮಿಗೆ ಉಸಿರು ಕಟ್ಟಿತು. ಕೊರಳ ಸೆರೆಗಳು ಬಿಗಿದುವು. ಅವಳ ಜೀವ ಸಾವು ಬದುಕುಗಳ ನಡುವೆ ಇರುವ ತಂತುವಿನ ಮೇಲೆ ಹೊಯ್ದಾಡತೊಡಗಿತು. ಭೀತಿಯ ಕರಿನೆರಳು ಅವಳ ಕಣ್ಣಮುಂದೆ ಸುಳಿಯಿತು.

ಸಾವು ಬದುಕಿಗಿಂತ ನೂರು ಪಾಲು ಭಯಂಕರ ಎಂದು ಅವಳ ಎದೆ ತಲ್ಲಣಿಸಿತು. ಅವಳ ಕಾಲುಗಳು ನೀರೊಳಗೆ ಬಡಿದುಕೊಂಡುವು. ಕೈಗಳು ನೀರನ್ನು ಒಗೆದು ಸೀಳಿದುವು. ಈಗ ಅವಳ ಮೈ ನೀರೊಳಗೆ ಚಲಿಸಲಾರಂಭಿಸಿತು. ಅವಳ ಕೊರಳಲ್ಲಿ ತೂಗುತಿದ್ದ ಕಲ್ಲು ಅವಳನ್ನು ಮಡುವಿನಾಳಕ್ಕೆ ಎಳೆಯಿತು. ಅವಳ ಕೈಗಳು ಮೇಲುದೆಯ ಗಂಟನ್ನು ಬಿಚ್ಚಲೆಂದು ಅರಸಿದುವು. ಆದರೆ ಗಂಟು ಕೈಗಳಿಗೆ ಸಿಗಲೊಲ್ಲದು. ಕೈಗಳು ಗಂಟನ್ನು ಹುಡುಕುತಿದ್ದಾಗ ಶರೀರ ನೀರಿನಾಳಕ್ಕೆ ಇನ್ನಷ್ಟು ಇಳಿಯಿತು.

ಎತ್ತಲೂ ಕತ್ತಲೆ ಹರಡಿಕೊಂಡಿತು. ಹೌದು, ತಾನು ಸಾಯುವುದು ಖಚಿತ; ಸಾಯುವ ಮುನ್ನ ಇನಿಯನ ಮೇರೆಯನ್ನು ನೋಡುವ ಸೌಭಾಗ್ಯ ತನಗಿಲ್ಲ; ಇಲ್ಲಿ ನೆತ್ತರನ್ನು ಹೆಪ್ಪುಗಟ್ಟಿಸುವ ನೀರಲ್ಲಿ ಜೀವವನ್ನು ತೊರೆಯಬೇಕು. ತಲೆಯನ್ನಿರಿಸಿಕೊಳ್ಳಲು ನಾಯಕನ ಎದೆ ದೊರೆತಿದ್ದರೆ ಅವಳು ನಗುನಗುತ್ತಾ ಸಾವನ್ನಪ್ಪುತಿದ್ದಳು !

ಉಸಿರು ಕಟ್ಟಿತು. ಅವಲಕ್ಕಿಯನ್ನು ಮಿದಿಯುವ ರಾಟೆಯಂತೆ ಎದೆ ತುಡಿದುಕೊಂಡಿತು. ಇನ್ನು ಉಸಿರನ್ನು ಬಿಗಿಹಿಡಿಯಲು ಸಾಧ್ಯವಿಲ್ಲ. ಬಾಯಿ ಮೂಗುಗಳನ್ನು ತೆರೆಯಲೇಬೇಕು; ಇನ್ನೊಂದು ಕ್ಷಣದಲ್ಲಿ ಅವಳ ಜೀವನದ ಕತೆ ಕೊನೆಗಾಣುವುದು !

ಆದರೆ ಲಕ್ಷ್ಮಿ ಮಡುವಿನಾಳಕ್ಕೆ ಇಳಿಯುವುದರ ಬದಲು ಬಿಲ್ಲಿಹೆದೆಯನ್ನು ಮೆಟ್ಟಿ ಹಾರಿದ ಸರಳಂತೆ ಮೇಲೆ ಬರತೊಡಗಿದಳು. ಅವಳು ಕೈಕಾಲುಗಳನ್ನು ಬಡಿದಳು. ಮೈ ಮೊದಲಿಗಿಂತ ಹಗುರವಾಗಿತ್ತು. ಅವಳ ಕೈಗಳು ಕೊರಳಿಗೆ ಸುತ್ತಿದ ಮೇಲುದೆಯ ಗಂಟನ್ನು ಬಿಚ್ಚಲು ಹವಣಿಸಿದುವು; ಆದರೆ ಅಲ್ಲಿ ಆ ಗುಂಡುಕಲ್ಲು ಇರಲಿಲ್ಲ. ಅದು ಆಕೆಯ ಹೊಯ್ದಾಟದಲ್ಲಿ ಅರಿವೆಯ ಸಂದಿನಿಂದ ಜಾರಿ ಮಡುವಿನೊಳಗೆ ಬಿದ್ದಿತ್ತು; ಅವಳನ್ನು ಸಾವಿನ ಅಪ್ಪುಗೆಯಿಂದ ಪಾರುಗಾಣಿಸಿತ್ತು.

ಲಕ್ಷ್ಮಿ ನೀರ ಮೇಲೆ ಬಂದಳು. ಅವಳು ಚೆಲ್ಲಿದ ನಿಡುಸುಯ್ಲು ಎದೆಯ ಮೇಲಿನ ಹೊರೆಯನ್ನು ಇಳಿಸಿತು. ಮಾವಿನ ಮರದ ಚಿಗುರುಗಳನ್ನು ಸೋಂಕಿ ಬಂದ ತಂಗಾಳಿ ಅವಳ ಎದೆಯೊಳಗೆ ನುಗ್ಗಿತು. ಮರದ

ಕೊಂಬೆಯ ಮೇಲೆ ಕುಳಿತ ಹಕ್ಕಿಯೊಂದು, "ಜೀವನ ಮಧುರವಾದುದು!" ಎಂದು ಹಾಡಿತು.

ಲಕ್ಷ್ಮಿ ತೋಳು ಬೀಸಿ ಈಜಿದಳು. "ಅಕ್ಕ, ಅಕ್ಕ," ಎಂಬ ಕಾತರದ ಧ್ವನಿ ಹರಿದು ಬಂದು ಅವಳ ಕಿವಿಗಳಲ್ಲಿ ಬಿದ್ದಿತು. ಅವಳು ಎದೆಯಾಳದ ನೀರಲ್ಲಿ ಕಾಲೂರಿ ನಿಂತಳು. ಅವಳು ದಡದ ಕಡೆಗೆ ಕಣ್ಣೋಡಿಸಿದಳು. ಅಲ್ಲಿ ಚಿರುತೆ ಬಟ್ಟೆ ಬಡಿಯುವ ಹಾಸುಗಲ್ಲಿನ ಮೇಲೆ ನಿಂತು ಬೆರಗುಗಣ್ಣುಗಳಿಂದ ಅಕ್ಕನನ್ನು ಎವೆ ಇಕ್ಕದೆ ನೋಡುತ್ತಿದ್ದಳು.

"ಅಕ್ಕ, ನಾನು ನೀರಲ್ಲಿ ಬಿದ್ದ ಧುಡುಂ ಎಂಬ ಸದ್ದನ್ನು ಕೇಳಿ ಓಡಿ ಬಂದೆ. ದೂರದಿಂದಲೇ ನೀರಮೇಲೆ ನಿನ್ನ ರವಿಕೆ ಮತ್ತು ಪೊಡವೆಗಳು ಕಾಣಿಸಿದುವು. ನೀನು ನೀರಲ್ಲಿ ಮುಳುಗಿ ಹೋದೆ ಎಂದೇ ನಾನು ಎಣಿಸಿದೆ. ಓಡಿಹೋಗಿ ಮಾವನನ್ನು ಕರೆದುಕೊಂಡು ಬರಬೇಕೆಂದಿದ್ದೆ!" ಎಂದು ಚಿರುತೆ ಹೇಳಿದಳು.

"ಚಿರುತೆ, ನೀನು ಮಾವನನ್ನು ಕರೆತರದುದು ಲೇಸಾಯ್ತು" ಲಕ್ಷ್ಮಿ ಪಡಿನುಡಿದಳು: "ನಾನು ಹೊಳೆಗೆ ಇಳಿದಿದ್ದೆ. ಕಾಲು ಜಾರಿ ಮಡುವಿನೊಳಗೆ ಬಿದ್ದು ಬಿಟ್ಟೆ. ನೀರ ಸೆಳವು ನನ್ನನ್ನು ಮಡುವಿಗೆ ಒಯ್ದು ಬಿಟ್ಟಿತು."

"ಅಕ್ಕ, ನಿನ್ನ ಮಾತು ನಿಜವೇ?" ಚಿರುತೆ ಸಂಶಯ ತುಂಬಿದ ಕಣ್ಣುಗಳಿಂದ ಅಕ್ಕನನ್ನು ನೋಡಿದಳು.

"ನಾನು ಸುಳ್ಳು ಹೇಳಬೇಕೇ?" ಎಂದು ಉಲಿಯುತ್ತಾ ಲಕ್ಷ್ಮಿ ಕೊರಳಿಗೆ ಸುತ್ತಿದ ಮೇಲುದೆಯನ್ನು ಬಿಚ್ಚಿದಳು.

"ನಾಯಕ ಹೋದನೆಂಬ ಬೇಸರದಿಂದ ನೀನು ಹಳ್ಳಕ್ಕೆ ಹಾರಿದೆ ಎಂದು ನಾನು ಅಂಜಿದ್ದೆ!"

"ಹೋಗೇ. ನಿನ್ನ ಚೇಷ್ಟೆ!" ಲಕ್ಷ್ಮಿಯ ಮೋರೆ ಕೆಂಪಾಯಿತು. "ಹೋಗಿ ಒಂದು ಪೊಡವೆ ಮತ್ತು ಒಂದು ರವಿಕೆಯನ್ನು ತಾ."

ಚಿರುತೆ ಓಡಿಹೋಗಿ ಮನೆಯಿಂದ ಒಂದು ರವಿಕೆ ಮತ್ತು ಬಿಳಿಯ ಪೊಡವೆಗಳನ್ನು ತಂದು ಅಕ್ಕನಿಗೆ ಕೊಟ್ಟಳು. ಲಕ್ಷ್ಮಿ ತನ್ನ ಮೇಲಿನ ಒದ್ದೆ ವಸ್ತ್ರಗಳನ್ನು ಕಳಚಿ, ಒಣ ವಸ್ತ್ರಗಳನ್ನು ತೊಟ್ಟುಕೊಂಡಳು.

ಮಾಧವನಿಂದ ಮಾವಿನಕೆರೆ ವಾಸುದೇವ ಯಂಬ್ರಾಂದ್ರಿಗೆ ಓಲೆ ಹೋಯಿತು. ಕಾಗದ ತಲುಪಿದ ಮರುದಿನವೇ ಯಂಬ್ರಾಂದ್ರಿ ಮನೆಗೆ ಬಂದರು. ಮಾಧವ ತಾವು ಆಮಂತ್ರಣ ಕಳುಹಿದ ಕಾರಣವನ್ನು ಓಲೆಯಲ್ಲಿ ಸೂಚಿಸಿರಲಿಲ್ಲ. ಯಂಬ್ರಾಂದ್ರಿ ಹಾಲು ಹಣ್ಣುಗಳ ಸೇವೆಯನ್ನು ಕೈಗೊಂಡು ಆದಮೇಲೆ, " ನಾಯರ, ಬರಬೇಕೆಂದು ನೀವು ಆತುರದ ಓಲೆಯನ್ನು ಕಳುಹಿಸಿದಿರಲ್ಲ ? " ಎಂದು ಕೇಳಿದರು.

" ನೋಡಿ, ಒಂದು ತಿಂಗಳ ಹಿಂದೆ ನೀವು ಒಂದು ಸಂಗತಿಯನ್ನು ನನ್ನ ಜತೆಯಲ್ಲಿ ಪ್ರಸ್ತಾಪಿಸಿದಿರಿ. "

" ನಿಮ್ಮ ಸೊಸೆಯ ಸಂಬಂಧದ ವಿಚಾರವೇ ? "

" ಹೌದು. ನಾನು ಆಲೋಚನೆ ಮಾಡಿ ಮೊನ್ನೆ ದಿನ ಒಂದು ನಿಶ್ಚಯಕ್ಕೆ ತಲುಪಿದೆ. ಅದನ್ನು ನಿಮಗೆ ತಿಳಿಸಿಬಿಡೋಣವೆಂದು ನಿಮಗೆ ಕರೆ ಕಳುಹಿದೆ. "

ನಾಯರರು ಮಾಡಿದ ನಿರ್ಧಾರವೇನು ಎಂದು ಅರಿತುಕೊಳ್ಳಲು ಅವರ ಮನಸ್ಸು ಆತುರಗೊಂಡಿತು. ಆಶೆ ನಿರಾಶೆಗಳೆರಡೂ ಅವರ ಕಣ್ಣುಗಳಲ್ಲಿ ತೇಲಿದುವು. ಅವರು " ನೀವು ಯಾವ ನಿಶ್ಚಯ ಮಾಡಿದಿರಿ ? " ಎಂದು ಉತ್ಸುಕತೆ ತುಂಬಿದ ದನಿಯಲ್ಲಿ ಕೇಳಿದರು.

" ನೋಡಿ, ಲಕ್ಷ್ಮಿ ಬಳೆದ ಹೆಣ್ಣು. ಅವಳು ಹೀಗೆಯೇ ಇರಲು ಸಾಧ್ಯವಿಲ್ಲ. ಬ್ರಾಹ್ಮಣ ಸಂಬಂಧ ನಮ್ಮ ಕುಲಪದ್ಧತಿ. ಆದರೆ ನಾನು ಹಿಂದೆ ಅದನ್ನು ಮೀರಿ ಸ್ವಜಾತಿಯವನಿಗೇ ಹೆಣ್ಣು ಕೊಟ್ಟೆ. ಅದಕ್ಕೆ ತಕ್ಕ ಶಾಸ್ತಿಯೂ ಆಯಿತು. ಆದುದರಿಂದ.... " ನಾಯರರು ಮಾತು ಪೂರೈಸದೆ ಕೈಯಲ್ಲಿ ಮಡಚಿ ಹಿಡಿದಿದ್ದ ತಾಂಬೂಲವನ್ನು ಬಾಯೊಳಗೆ ಹಾಕಿಕೊಂಡು ಜಗಿಯ ತೊಡಗಿದರು. ಅವರು ಮುಂದೇನು ಹೇಳುವರೆಂದು ಯಂಬ್ರಾಂದ್ರಿ ಮೈಯೆಲ್ಲ ಕಿವಿಯಾಗಿ ನಿರೀಕ್ಷಿಸತೊಡಗಿದರು.

" ನೋಡಿ, ನಾನು ನಿಮಗೆ ಸೊಸೆಯನ್ನು ಸಂಬಂಧ ಮಾಡಿಕೊಡಬೇಕೆಂದು ನಿಶ್ಚಯಿಸಿರುವೆನು. ಈ ನನ್ನ ಕೋರಿಕೆಯನ್ನು ನೀವು ನಡೆಸಿಕೊಡಬೇಕು. "

ಮಾಧವನ ನುಡಿಯನ್ನು ಕೇಳಿದಾಗ ಯಂಬ್ರಾಂದ್ರಿಯ ಮುಖ ಅರ

ತು. ಅವರು, “ ನಾನು ನಿಮಗೆ ಎಷ್ಟು ಋಣಿಯಾಗಿದ್ದರೂ ಸಾಲದು. ಉಪಕಾರವನ್ನು ಎಂದೆಂದಿಗೂ ಮರೆಯಲಾರೆ. ” ಎಂದು ಉದ್ಗಾರ ತ್ತಿದರು. “ ಬೇಗ ಒಂದು ಮುಹೂರ್ತ ನೋಡಿಬಿಡಿ. ’’ ಮಾವ ಸುರಿದರು : ‘‘ ನಾನು ಬೇಗ ಪೊಡೆಮುರಿಯನ್ನು ನಡೆಸಿ, ಸೊಸೆಯನ್ನು ಮ್ಮ ಮಠಕ್ಕೆ ಕಳುಹಿಸಿ ಬಿಡುವೆನು. ”

‘‘ ಆಕೆಯನ್ನು ನನ್ನ ಮಠಕ್ಕೆ ಕಳುಹಿಸುವಿರಾ ? ” ಯಂಬ್ರಾಂ ಯ ಕೊರಳಿನಿಂದ ಬೆರಗಿನ ದನಿ ಹೊರಟಿತು. ಅವನಿಗೆ ನಾಯರರು ಸೆಯನ್ನು ಸಂಬಂಧ ಮಾಡಿಕೊಡುವೆನು ಎಂದು ಹೇಳಿದುದಕ್ಕಿಂತಲೂ, ಮಾತು ಹೆಚ್ಚು ಸೋಜಿಗವಾಗಿ ತೋರಿತು. ಅವರು ನಾಯರರು ಸೆಯನ್ನು ತಮ್ಮ ಸಂಗಾತ ಕಳುಹಲಾರರು ಎಂದು ಆಲೋಚಿಸಿ ರು.

‘‘ ಏಕೆ ಆಗಬಾರದು ? ” ನಾಯರರು ಪ್ರಶ್ನಿಸಿದರು : “ ಆಕೆ ಅಲ್ಲಿ ಮಗೂ ನೆರವಾದಾಳು. ಇಲ್ಲಿ ಅತ್ತೆ ಸೊಸೆಯರ ಕದನದ ರಾಮರಂಪ ಂದ ತರವಾಡಿನ ಶಾಂತಿ ಹದಗೆಟ್ಟು ಹೋಗಿದೆ. ”

ಅಂದು ಯಂಬಾಂದ್ರಿ ನಾಯರರ ಮನೆಯಲ್ಲಿ ಸನ್ಮಾನ್ಯ ಅತಿಥಿ ಾಗಿ ಉಳಿದುಕೊಂಡರು. ಮುಂದೆರಡು ದಿನಗಳಲ್ಲಿ ಅವರು ಪಂಚಾಂಗ ನ್ನು ನೋಡಿ ಪೊಡೆಮುರಿಗೆ ಇರುವ ಶುಭಮುಹೂರ್ತವನ್ನೂ ಹೇಳಿಯೇ ಟ್ಟರು.

ಈ ಮುಹೂರ್ತ ದಿನವೂ ಬಂತು. ಮಾವ ಹತ್ತಿರದ ನಾಲ್ಕು ಜನ ಂಟರನ್ನು ಕರೆಯಿಸಿ ಪೊಡೆಮುರಿ ಸದ್ಯ ಮಾಡಿಸಿದರು. ಹತ್ತೆಂಟು ಂದಿ ಬ್ರಾಹ್ಮಣರನ್ನು ಕರೆಯಿಸಿ ಸಮಾರಾಧನೆ ನಡೆಸಿದರು. ಬಂದ ್ರಾಹ್ಮಣರಿಗೆಲ್ಲ ಒಂದೊಂದು ರೂಪಾಯಿ ದಕ್ಷಿಣೆ ಕೊಟ್ಟರು.

ಅಂದಿನ ಇರುಳು ಯಂಭಾಂದ್ರಿಯೊಡನೆ ಲಕ್ಷ್ಮಿಯ ಪೊಡೆಮುರಿ ಂಬಂಧವೂ ನಡೆದು ಹೋಯಿತು. ಅವಳು ಈಗ ವಾಸುದೇವ ಯಂಬ್ರಾಂ ಯ ಮಡದಿಯಾದಳು. ಮುಂದೆರಡು ದಿನಗಳಲ್ಲಿ ಅವಳು ಮಾವ ಳುವಳಿಯಾಗಿ ಕೊಟ್ಟ ವಸ್ತುಗಳನ್ನೆಲ್ಲಾ ತೆಗೆದುಕೊಂಡು ಯಂಬ್ರಾಂ ಯ ಮಠಕ್ಕೆ ತೆರಳಿದಳು.

ಇಪ್ಪತ್ತು ದಿನಗಳಲ್ಲಿ ನಾಯಕ ಮುಟ್ಟಿಲ ದಾಸಯ್ಯ ಗವುಂಡನ ಕೆಲಸ ತೀರಿಸಿ ಶಂಕರನನ್ನು ಅಟ್ಟಿಕೊಂಡು ಮನೆಗೆ ಮರಳಿದ. ಅವನಿಗೆ ತನ್ನ ಹೃದಯವನ್ನು ಸೂರೆಗೊಂಡ ಪಾಪಾತಿಯ ಮುದ್ದು ಮೋಗ ಗೋಚರಿಸಲಿಲ್ಲ. ಇಂದು ಆ ಚೆಲು ಮೋರೆ ಪಾಪನ ತೊಡಿಯಲ್ಲಿರ ಲಿಲ್ಲ. ಲಕ್ಷ್ಮಿಯನ್ನು ಕಾಣದುದರಿಂದ ಅವನು ಗ್ರಹಣ ಹಿಡಿದ ಚಂದ್ರ ನಂತಾದ.

ಅಂದು ಮಧ್ಯಾಹ್ನ ದೇವತ್ತೆಯೇ ಅವನಿಗೆ ಉಣಬಡಿಸಿದಳು. ಅವನು ಮಾತಾಡದೆ ಅನ್ನ ಸಾರುಗಳನ್ನು ಕಲಿಸಿ ಉಣ ತೊಡಗಿದ. ಆದರೆ ಉಣಿಸು ಅವನ ನಾಲಗೆಗೆ ರುಚಿಸಲಿಲ್ಲ. ತನ್ನ ಒಲವಿನ ಪಾಪಾತಿ ಆ ಅಡುಗೆಯನ್ನು ಬಡಿಸದುದರಿಂದ ಊಟ ಅವನಿಗೆ ಬಹು ಸಪ್ಪೆಯಾಗಿ ತೋರಿತು. ದೇವತ್ತೆ ಪಲ್ಯವನ್ನು ಬಡಿಸಲೆಂದು ಬಂದಾಗ, “ ಪಾಪಾತಿ, ಪುಟ್ಟ ಪಾಪಾತಿ ಎಲ್ಲಿ ? ಅವರನ್ನು ಕಾಣುವುದೇ ಇಲ್ಲವಲ್ಲ ? ” ಎಂದು ಕೇಳಿದ.

“ ಯಾರು ಲಕ್ಷ್ಮಿಯೇ ? ”

“ ಹೌದು. ” ಪಲ್ಯವನ್ನು ನಂಚಿಕೊಳ್ಳುತ್ತಾ ನಾಯಕ ನುಡಿದ.

“ ಲಕ್ಷ್ಮಿಯ ಕೈಯಿಂದ ಊಟ ಬಿದ್ದರೆ ಮಾತ್ರ ನಿನ್ನ ಬಾಯಿಗೆ ರುಚಿಸುವುದೇನೋ! ” ದೇವತೆಯ ತುಟಿಗಳನ್ನು ಬಿರಿದು ಕೊಂಕು ಮಾತು ಹೊರಟಿತು. ಮನೆಯ ಯಜಮಾನಿಯ ಮಾತಿನಿಂದ ಲಕ್ಷ್ಮಿಯ ರಹಸ್ಯ ಪ್ರಯಣದ ಸುಳಿವು ದೇವತ್ತೆಗೆ ಸಿಕ್ಕಿತ್ತು. ಅವಳು ಕುರುಬ ಹುಡುಗನ ಪ್ರಶ್ನೆಗೆ ನೇರಾದ ಉತ್ತರವನ್ನು ಹೇಳದೆ ಆತನನ್ನು ಪೇಚಿನಲ್ಲಿ ಕೇಡುಹಿ ದಳು.

ಊಟ ಮುಗಿಸಿದ ಮೇಲೆ ನಾಯಕನಿಗೆ ಚಿರುತೆ ಸಿಕ್ಕಿದಳು. ಅವನು ಲಕ್ಷ್ಮಿ ಎಲ್ಲಿರುವಳೆಂದು ತಿಳಿಯಬೇಕೆಂಬ ಉತ್ಸುಕತೆಯಿಂದ “ ಮರಿ ಪಾಪಾತಿ, ನಿಮ್ಮ ಅಕ್ಕ ಪಾಪಾತಿ ಎಲ್ಲಿರುವಳು ? ” ಎಂದು ಕೇಳಿದ.

“ ಅಕ್ಕ ಹೋರಟು ಹೋದಳು !. ”

“ ಎಲ್ಲಿಗೆ ? ” ನಾಯಕನ ಬೆರಗು ಇಮ್ಮಡಿಸಿತು.

“ ಬೇರೆಲ್ಲಿಗೆ ಹೋದಾಳು; ಗಂಡನ ಮನೆಗೆ! ”

"ಗಂಡನ ಮನೆಯೇ ?" ಚಿರುತೆಯ ನುಡಿ ಕಣೆಯಂತೆ ನಾಯಕನ ಎದೆಗೆ ನಾಟಿತು.

"ಅಯ್ಯೋ ಬೆಪ್ಪೆ! ನೀನೆಲ್ಲಿರುವೆ ?" ಚಿರುತೆ ನಗುನಗುತ್ತಾ ಹೇಳಿದಳು: "ನೀನು ಮುಟ್ಟಲಿಗೆ ಹೋದ ಮೇಲೆ ಅಕ್ಕನ ಸಂಬಂಧ ನಡೆದುಹೋಯಿತು! ಮಾವಿನಕೆರೆ ವಾಸುದೇವ ಯಂಬ್ರಾಂದ್ರಿ ಆಕೆಯನ್ನು ತಮ್ಮ ಮಠಕ್ಕೆ ಕರೆದುಕೊಂಡು ಹೋದರು."

ಚಿರುತೆಯ ವಚನಗಳು ನಾಯಕನ ಎದೆಯನ್ನು ಸೀಳುವ ಸಿಡಿಗುಂಡುಗಳಾದುವು. ಅವನು ಈ ಆಘಾತವನ್ನು ತಾಳಲಾರದೆ ನೆಲದ ಮೇಲೆ ಕುಕ್ಕುರಿಸಿ ಹೋದ. ಅವನ ಕಣ್ಣುಗಳಿಗೆ ಶೂನ್ಯತೆ ಕವಿದಿತು!



ಲಕ್ಷ್ಮಿ ಹೊಳೆಯ ದಂಡೆಯಲ್ಲಿನ ಗೋಳಿಮರದ ನೆರಳಲ್ಲಿ ಕುಳಿತು ನಾಯಕನ ಬರವನ್ನು ನಿರೀಕ್ಷಿಸುತ್ತಿದ್ದಳು. ಅವಳು ತಾನು ಗೋಳಿಮರದ ನೆರಳಿನಲ್ಲಿ ಕಾದಿರುವೆನೆಂದು ಊರ ಅಂಬಲದ ಜಾತ್ರೆಯನ್ನು ನೋಡಲೆಂದು ಬಂದ ಚಿರುತೆಯ ಸಂಗಾತ ಆತನಿಗೆ ಗೋಪ್ಯಸಂದೇಶವನ್ನು ಕಳುಹಿದ್ದಳು. ಆದರೆ ನಾಯಕನ ಮೋರೆ ಮಾತ್ರ ಆಕೆಯ ಕಣ್ಣುಗಳಿಗೆ ಗೋಚರಿಸಲೊಲ್ಲದು; ಕಣ್ಣುಗಳು ಆತನ ಬರವನ್ನು ಇದಿರು ನೋಡಿ ಬೇಸತ್ತವು. ಆದರೆ ಆಕೆಯ ಅಂತರಂಗ ಮಾತ್ರ ಆತನು ಬಂದೇತಿರುವನೆಂದು ನುಡಿಯುತಿದ್ದಿತು.

ಅವಳು ತಲೆಯೆತ್ತಿ ನೋಡಿದಳು. ಗಿಳಿಯೊಂದು ಮರದ ಮೇಲಿನ ಗೋಳಿ ಹಣ್ಣನ್ನು ಕುಟುಕುತಿದ್ದಿತು. ಗಂಡು ಪಾರಿವಾಳವೊಂದು ಕೊಕ್ಕನ್ನು ಚಾಚಿ ಹೆಣ್ಣು ಪಾರಿವಾಳದ ಗರಿಗಳ ಮೇಲಿದ್ದ ಕಸದ ಕಣಗಳನ್ನು ಹೆಕ್ಕಿ ತೆಗೆಯುತಿದ್ದಿತು. ಹೊಳೆಯ ಸ್ಪರ್ಶದಿಂದ ತಂಪನ್ನು ತಳೆದ ತೆಳುಗಾಳಿ ಹರಿದು ಬಂದು ಅವಳ ಮೈಯನ್ನು ಸೋಂಕುತಿದ್ದಿತು. ಸೂರ್ಯ ಬಾನ

ನೆತ್ತಿಯಿಂದ ಎರಡು ಮಾರು ಕೆಳಗೆ ಇಳಿದಿದ್ದ. ಮೂಡಣದ ಆಗಸದಲ್ಲಿ ಬೆಳ್ಮೋಡವೊಂದು ಈಸುತಿದ್ದಿತು.

ನಾಯಕನ ಹಾದಿಯನ್ನು ಕಾಯ್ದು ಲಕ್ಷ್ಮಿಗೆ ಬೇಸರವಾಯಿತು. ಆದರೂ ಹೊಳೆಯ ದಂಡೆಯನ್ನು ತೊರೆದು ಮಠಕ್ಕೆ ಮರಳಲು ಅವಳಿಗೆ ಮನಸ್ಸು ಬರಲಿಲ್ಲ. ಆತ ಬಂದಾನು; ತಾನು ಕಳುಹಿದ ಗೋಪ್ಯಸಂದೇಶ ವನ್ನು ತಿರಸ್ಕರಿಸಲಾರ ಎಂದು ಅಂತರಂಗದ ವಾಣಿ ಉಸುರುತಿದ್ದಿತು.

ಅವಳ ಮನಸ್ಸಿನ ಮುಂದೆ ಕಳೆದ ಆರು ತಿಂಗಳುಗಳು ಹಾದು ಹೋದವು. ಆ ಆರು ತಿಂಗಳು ಆಕೆಗೆ ಆರು ವರ್ಷಗಳಷ್ಟು ಉದ್ದವಾಗಿ ತೋರಿದುವು. ಈ ಅವಧಿ ವೇದನೆ, ಅಳಲು ಮತ್ತು ವಿಹ್ವಲತೆಗಳ ಆಗರ ವಾಗಿತ್ತು. ಆಕೆ ನಾಯಕನಿಂದ ದೂರವಾಗಿದ್ದಳು. ಆದರೆ ಅವನು ಆಕೆ ಯನ್ನು ನೆರಳಿನಂತೆ ಅನುಸರಿಸುತಿದ್ದ. ನಿಂತಲ್ಲಿ; ಕುಳಿತಲ್ಲಿ, ನಡೆವಲ್ಲಿ, ಉಣ್ಣುವಲ್ಲಿ ಮಲಗುವಲ್ಲಿ ಅವನು ಬಂದು ಆಕೆಯ ಕಣ್ಣ ಮುಂದೆ ನಿಲ್ಲುತಿದ್ದ. ಎಲ್ಲೆಲ್ಲಿಯೂ ನಾಯಕನ ರೂಪವೇ ಬಂದು ಆಕೆಯ ಮುಂದೆ ಕುಣಿಯು ತಿದ್ದಿತು. ಅವಳು ನಾಲ್ಕಾರು ಸಲ ಯಂಬ್ರಾಂದ್ರಿಯನ್ನೇ ನಾಯಕನೆಂದು ತಿಳಿದು ಅಪ್ಪಿಕೊಂಡಳು !

ಯಂಬ್ರಾಂದ್ರಿ ! ಅವರು ನಿಜವಾಗಿಯೂ ಒಳ್ಳೆಯವರು; ಅವಳು ನಾಯಕನನ್ನು ಕಾಣದೆ ಹೋಗಿದ್ದರೆ, ನಾಯಕ ಆಕೆಯ ಹೃದಯವನ್ನು ಸೂರೆಗೊಳ್ಳದೆ ಹೋಗಿದ್ದರೆ ಅವಳು ತನ್ನ ಒಡಲೊಡನೆ ಜೀವವನ್ನು ಸಹ ಅವರ ಅಡಿಗಳಲ್ಲಿ ಮುಡಿಪಾಗಿ ಅರ್ಪಿಸಿ ಬಿಡುತಿದ್ದಳು. ಈ ಆರು ತಿಂಗಳು ಗಳಲ್ಲಿ ಅವರು ಒಮ್ಮೆಯಾದರೂ ಲಕ್ಷ್ಮಿಯ ಮೇಲೆ ಮುನಿಸುತಾಳಿರಲಿಲ್ಲ. ಕೆಡುನುಡಿಯನ್ನು ಆಡಿರಲಿಲ್ಲ. ಅವರು ಕರುಣೆ ಸೌಜನ್ಯಗಳು ಮೈವ ಳೆದು ಬಂದಂತೆ ಇದ್ದರು. ಅವರು ತಮ್ಮ ಇಚ್ಛೆಯನ್ನು ಬಲಾತ್ಕಾರದಿಂದ ಆಕೆಯ ಮೇಲೆ ಹೇರಲು ಪ್ರಯತ್ನಿಸಲಿಲ್ಲ. ಇಷ್ಟು ಒಳ್ಳೆಯತನವನ್ನು ತೋರಿಸುವವರನ್ನು ತಾನು ಮನವಾರೆ ಪ್ರೀತಿಸಲಾರದೆ ಹೋದೆನಲ್ಲ ಎಂದು ಅವಳು ಕೊರಗಿದಳು.

ಆ ಮೊದಲನೆಯ ಇರುಳು ಲಕ್ಷ್ಮಿಯ ಸ್ಮೃತಿಪಥದಲ್ಲಿ ಪ್ರವೇಶಿಸಿತು. ಕರುವನ್ನು ಕಂಚಲೊಳಗೆ ಮಾಡುವಂತೆ ಅತ್ತೆ ಲಕ್ಷ್ಮಿಯನ್ನು ಯಂಬ್ರಾಂದ್ರಿ

ಗೆಂದು ಸಜ್ಜುಗೊಳಿಸಿದ ಓವರಿಯೊಳಗೆ ದೂಡಿದಳು. ಮಂಚದ ಮೇಲೆ ಹಾಸಿ ಸಜ್ಜುಗೊಳಿಸಿದ ಹಾಸಿಗೆ ಅವಳನ್ನು ಕರೆದಿತ್ತು. ಯಂಬ್ರಾಂದ್ರಿ ಆರೋಗಣೆಯನ್ನು ಮುಗಿಸಿ ಸಜ್ಜೆ ಮನೆಯೊಳಗೆ ಹೊಕ್ಕರು. ಮಂಚದ ಮೇಲೆ ಕುಳಿತುಕೊಂಡರು. ಲಕ್ಷ್ಮಿ ನಡುಗುವ ಕೈಗಳಿಂದ ಬೆಳ್ಳಿಯ ಲೋಟದಲ್ಲಿ ತುಂಬಿದ ಹಾಲನ್ನು ಎತ್ತಿ ಅವರಿಗೆ ಕೊಟ್ಟಳು. ಅವರು ಲೋಟದಲ್ಲಿ ತುಂಬಿದ ಹಾಲಿನಲ್ಲಿ ಅರೆವಾಸಿ ಕುಡಿದಾದ ಮೇಲೆ ಉಳಿದುದನ್ನು "ನೀನು ಕುಡಿ" ಎಂದು ಆಕೆಯ ಕೈಗೆ ನೀಡಿದರು.

ಅವರಿಗೆ ಪಡಿನುಡಿಯಲು ಲಕ್ಷ್ಮಿಯ ಕೊರಳಿಂದ ಮಾತು ಹೊರಡಲಿಲ್ಲ. ಅವಳು ಒಲ್ಲೆ ಎಂದು ತಲೆಯನ್ನು ಅಲುಗಿಸಿದಳು. ಯಂಬ್ರಾಂದ್ರಿ ಮಂಚದಿಂದ ಎದ್ದು ಬಂದು ಲೋಟವನ್ನು ಎತ್ತಿಕೊಂಡು ಆಕೆಯ ತುಟಿಗೆ ಹಿಡಿದು, "ಲಕ್ಷ್ಮೀ, ನೀನು ಹಾಲು ಕುಡಿಯುವಿದ್ದರೆ ನನ್ನ ಮನಸ್ಸಿಗೆ ಸಂತೋಷವಿಲ್ಲ." ಎಂದು ಉದ್ಗಾರವೆತ್ತಿದರು.

ಲಕ್ಷ್ಮಿಯ ಕೊರಳು ಬಿಗಿದು ಬಂತು. ಕಣ್ಣುಗಳಿಂದ ನೀರ ಹನಿಗಳು ಉದುರಿದುವು. ಅವಳು ಕಹಿ ಮದ್ದನ್ನು ಕುಡಿಯುವಂತೆ ಎರಡು ಗುಟುಕು ಹಾಲೀಂಟಿದಳು. ಅವಳು ಕಂಪಿಸುವ ಕೈಗಳಿಂದ ಎಲೆಗೆ ಸುಣ್ಣ ಹಚ್ಚಿ ಅಡಿಕೆ ಚೂರು ಬೆರಸಿ ಯಂಬ್ರಾಂದ್ರಿ ಕೈಗೆ ಕೊಟ್ಟಳು. ಅವರು ಆಕೆ ಇತ್ತ ತಾಂಬೂಲವನ್ನು ಮೆಲ್ಲುತ್ತಾ, "ನೀನೂ ತಾಂಬೂಲ ಹಾಕಿಕೋ." ಎಂದು ನುಡಿದರು. ಆದರೆ ಅವಳು ತನಗೆ ಬೇಡವೆಂದು ಸನ್ನೆಮಾಡಿದಳು.

ಯಂಬ್ರಾಂದ್ರಿ ಆಕೆಯನ್ನು ಮಂಚದ ಮೇಲೆ ಕುಳ್ಳಿರಿಸಲೆಂದು ಕೈಯನ್ನು ಹಿಡಿದು ಮಿದುವಾಗಿ ಎಳೆದರು. ಅವರ ಕೈ ಮೈಗೆ ಸೋಂಕಿದೊಡನೆ ಲಕ್ಷ್ಮಿಗೆ ಸಾವಿರ ಕಟ್ಟಿರುವೆಗಳು ಕಡಿದಂತಾದುವು ಯಂಬ್ರಾಂದ್ರಿಯ ಬೆನ್ನ ಹಿಂದೆ ನಾಯಕ ನಿಂತು ತನ್ನನ್ನು ದುರುಗುಟ್ಟಿ ನೋಡುತ್ತಿರುವಂತೆ ಅವಳಿಗೆ ತೋರಿತು. ಆಕೆಗೆ ಒಡಲೊಳಗಿನ ಕರುಳು ಬಾಯಿಗೆ ಬಂದಂತಾಯಿತು. ಅವಳು ಯಂಬ್ರಾಂದ್ರಿಯ ಅಡಿಗಳಲ್ಲಿ ಕುಸಿದುಬಿದ್ದಳು.

"ಲಕ್ಷ್ಮೀ, ಏನಾಯಿತು?" ಯಂಬ್ರಾಂದ್ರಿ ಗಾಬರಿಯಿಂದ ಕೇಳಿದರು.

“ ನಾನು ನಿಮಗೆ ತಕ್ಕವಳಲ್ಲ! ” ಲಕ್ಷ್ಮಿ ಬಿಕ್ಕುದನಿಯಲ್ಲಿ ಉದ್ಗಾರವೆತ್ತಿದಳು.

ಯಂಬ್ರಾಂದ್ರಿ ಲಕ್ಷ್ಮಿಗೆ ಅಳಿದ ಗಂಡನ ನೆನಪು ತಲೆದೋರಿ ವೇದನೆಯನ್ನು ನೀಡಿರಬೇಕೆಂದು ಊಹಿಸಿದರು. ಅವರು ಆಕೆಯ ಅತ್ತು ಕೆಂಪಾದ ಕಣ್ಣುಗಳನ್ನು ನೋಡಿದರು. ಅವರು ಒಂದು ನಿಡುಸುಯ್ಲನ್ನು ಹೊರಚೆಲ್ಲಿ ಲಕ್ಷ್ಮಿಯ ಕೈಯನ್ನು ಬಿಟ್ಟರು. ಅವರು ಮರಳಿ ಮಂಚದ ಮೇಲೆ ಕುಳಿತರು. ಅವರು, “ಲಕ್ಷ್ಮೀ, ಹಸಿದ ಹುಲಿ ಎಳೆಯ ಜಿಂಕೆಯ ಮೇಲೆ ಬೀಳುವಂತೆ ನಾನು ನಿನ್ನ ಮೇಲೆ ಬೀಳಲಾರೆ. ನಾನು ನಿನ್ನ ನೋವನ್ನುಬಲ್ಲೆ; ಆದರೆ ನಾನು ನಿನ್ನ ಅಳಲನ್ನು ಅಳಿಸ ಬಲ್ಲೆ; ನಿನ್ನ ಎದೆಯ ಗಾಯಕ್ಕೆ ಮದ್ದು ಲೇಪಿಸ ಬಲ್ಲೆ. ನಾನು ನಿನ್ನ ಇಷ್ಟಕ್ಕೆ ವಿರುದ್ಧವಾಗಿ ನಿನ್ನ ಮೇಲೆ ಕೈ ಮಾಡಲಾರೆ.” ಎಂದು ನುಡಿದರು.

“ ನೀವು ನನಗೆ ಅಷ್ಟೊಂದು ಭರವಸೆಯನ್ನು ಕೊಟ್ಟರೆ ಸಾಕು; ನಿಮ್ಮ ಅಡಿಗಳ ಸೇವೆ ಮಾಡಿಕೊಂಡಿರುತ್ತೇನೆ. ” ಲಕ್ಷ್ಮಿಯ ಕಣ್ಣುಗಳು ಕೃತಜ್ಞತೆಯನ್ನು ಹೊರಚೆಲ್ಲಿದುವು. ಅದೇ ಅವಳು ಅವರೊಡನೆ ಆಡಿದ ಮೊದಲನೆಯ ಮಾತು.

“ ನನ್ನ ಮಾತನ್ನು ನಂಬು. ” ಯಂಬ್ರಾಂದ್ರಿ ಮಾತು ಕೊಟ್ಟರು: ನಿನ್ನ ಇಷ್ಟಕ್ಕೆ ವಿಪರೀತವಾಗಿ ನಿನ್ನ ಸುಖವನ್ನು ಹೊಂದಲು ನಾನು ಯತ್ನಿಸಲಾರೆ. ಈಶ್ವರನ ಆಣೆಯಾಗಿಯೂ ಈ ಮಾತು ಸತ್ಯ. ನಿನಗೆ ನನ್ನ ಜತೆಯಲ್ಲಿ ಮಲಗಲು ಇಷ್ಟವಿಲ್ಲದಿದ್ದರೆ, ಬೇರೆಯಾಗಿ ಮಲಗಿಕೋ.”

ಯಂಬ್ರಾಂದ್ರಿ ಹಾಸಿಗೆಯ ಅಡಿಯಲ್ಲಿದ್ದ ಹಸೆಯನ್ನೂ ಹೊದೆಯಲು ದುಪ್ಪಟಿಯನ್ನು ತೆಗೆದು ಲಕ್ಷ್ಮಿಗೆ ಕೊಟ್ಟರು. ಅವಳು ನೆಲದ ಮೇಲೆ ಚಾಪೆಯನ್ನು ಹಾಸಿ ದುಪ್ಪಟಿಯನ್ನು ಹೊದೆದು ಮಲಗಿಕೊಂಡಳು. ಮಂಚದ ಮೇಲಿನ ಹಾಸಿಗೆಯಲ್ಲಿ ಯಂಬ್ರಾಂದ್ರಿ ಪವಡಿಸಿದರು.

ಲಕ್ಷ್ಮಿಗೆ ನಿದ್ದಿಯೇ ಬರಲಿಲ್ಲ. ಅವಳು ಆ ಕಡೆ ಹೊರಳಿದಳು; ಈ ಕಡೆ ಹೊರಳಿದಳು. ಅವಳ ಸಮೀಪದಲ್ಲಿ ನಾಯಕ ಸುಳಿದು ಸುತ್ತುತಿದ್ದು ಕಣ್ಣು ಮುಚ್ಚಿದರಾದರೂ ನಿದ್ದೆ ಬರುವುದೇನೋ ಎಂದು ಅವಳು ಎವೆ ಚಿಮ್ಮಿದಳು. ಆದರೆ ನಾಯಕ ಅವಳ ಮನಸ್ಸಿನೊಳಗೆ ನುಸುಳಿ

" ಪುಟ್ಟ ಪಾಪಾತಿ, ನಾನು ನನ್ನ ಜೀವವನ್ನು ನಿಮ್ಮ ಕೈಗೆ ಒಪ್ಪಿಸಿದ್ದೇನೆ. ನೀವು ನನಗೆ ದ್ರೋಹ ಬಗೆಯಲಾಗದು. " ಎಂದು ಕರುಣಾರ್ದ್ರ ಧ್ವನಿಯಲ್ಲಿ ಹೇಳಿದ.

"ಇಲ್ಲ ನಾಯಕ. ಈ ಮನಸ್ಸು ಮತ್ತು ಜೀವಗಳು ನಿನಗೆ ಮೀಸಲು ! ನನ್ನಾಣೆ ಇದೆ." ಲಕ್ಷ್ಮಿ ಮಾರ್ನುಡಿದಳು: " ಎಂದೆಂದಿಗೂ ನಾನು ನಿನಗೆ ಕೇಡೆಣಿಸಲಾರೆ ! "

" ನಿಜವೇ ಪಾಪಾತಿ ? ತಂಬ್ರಾಕಳು ನಿಮ್ಮನ್ನು ನನ್ನಿಂದ ಸೆಳೆದೊಯ್ಯುತ್ತಿದ್ದಾರೆ ! "

" ನಿನಗೆ ಮುಡಿಪಾಗಿಸಿದ ಮೈಯನ್ನು ನಾನು ತಂಬ್ರಾಕಳಿಗೆ ಒಪ್ಪಿಸಲಾರೆ. ಅಂತಹ ಸಮಯದಲ್ಲಿ ಈ ಜೀವವನ್ನು ತೊರೆದೇನು. ನನ್ನ ಮನಸ್ಸು ನಿನ್ನನ್ನು ಬಿಟ್ಟು ಕದಲಲಾರದು."

" ಆಣೆ ಇಡಿ." ನಾಯಕ ನುಡಿದ.

" ನನ್ನ ಆಣೆ. ಬೆಳ್ಳೂರು ಕಾವು ಭಾಗವತಿಯ ಆಣೆ ! "

ಹೀಗೆ ಆಣೆ ಇಟ್ಟು ಕೊಂಡ ಮೇಲೆ ಲಕ್ಷ್ಮಿಯ ಅಂತರಂಗದ ಉದ್ವೇಗ ನಸು ಕಡಿಮೆಯಾಯಿತು. ಎದೆಯಲ್ಲಿ ಉದಿಸಿದ್ದ ಬಿರುಗಾಳಿ ಶಾಂತವಾಯಿತು. ದಣಿದ ಮನಸ್ಸು ವಿಶ್ರಾಂತಿಯನ್ನು ಬಯಸಿತು. ಕಣ್ಣೆವೆಗಳು ಭಾರವಾದುವು ಅವಳಿಗೆ ಜೊಂಪು ಹತ್ತಿತು.

ನಡುರಾತ್ರಿ ಕಳೆದಿತು. ಲಕ್ಷ್ಮಿಯ ಮೇಲೆ ಉರಿಯುವ ಕೆಂಡವನ್ನಿರಿಸಿದಂತಾಯಿತು. ಅವಳು ಎಚ್ಚೆತ್ತು ಬೆಚ್ಚಿಬಿದ್ದಳು; 'ಹಾಯ್' ಎಂದು ಉದ್ಗಾರವೆತ್ತಿದಳು. ಕಿಡಿಕಿಯ ಸಂದಿನಿಂದ ಹರಿದು ಬಂದ ಬೆಳದಿಂಗಳು ಕೋಣೆಯೊಳಗೆ ತುಂಬಿಕೊಂಡಿತ್ತು. ಬೆಳದಿಂಗಳ ಮಬ್ಬು ಬೆಳಕಿನಲ್ಲಿ ಅವಳು ಕಣ್ಣಾಗಲಿಸಿ ನೋಡಿದಳು. ಯಂಬ್ರಾಂದ್ರಿ ಮಂಚದಿಂದ ಇಳಿದು ಬಂದಿದ್ದರು; ಬಾಗಿ ಆಕೆಯ ತುಟಿಗಳನ್ನು ಚುಂಬಿಸುತ್ತಿದ್ದರು !

ಲಕ್ಷ್ಮಿಯ ಅಂತರಂಗದಲ್ಲಿ ಮುನಿಸು ಹೊಗೆಯಾಡಿತು. ಅವಳು ಕಟುದನಿಯಲ್ಲಿ, " ಇರುಳು ಕೊಟ್ಟ ಭಾಷೆಯನ್ನು ಬೆಳಕು ಹರಿವ ಮುನ್ನ ಮುರಿದಿರಾ ? " ಎಂದು ಕೇಳಿದಳು.

ಯಂಬ್ರಾಂದ್ರಿಗೆ ಲಕ್ಷ್ಮಿಯಾಡಿದ ಮಾತು ಎತ್ತಿ ಬೆನ್ನ ಮೇಲೆ

ಬಿಗಿದ ಚಾಟಿಯ ಪೆಟ್ಟಾಯಿತು. ಅವರು, "ಲಕ್ಷ್ಮೀ, ನನ್ನಿಂದ ತಪ್ಪಾಯಿತು. ಇನ್ನು ಮುಂದೆ ಎಂದಿಗೂ ನಿನ್ನ ಇಷ್ಟವನ್ನು ಮೀರಲಾರೆ" ಎಂದು ಹೇಳಿ ಮರಳಿ ಮಂಚವನ್ನು ಸೇರಿದರು.

ಯಂಬ್ರಾಂದ್ರಿ ಕೊನೆಯವರೆಗೆ ತಮ್ಮ ಭಾಷೆಯನ್ನು ಉಳಿಸಿಕೊಂಡರು. ಮೈ ಮನಗಳ ಬಯಕೆಯನ್ನೂ ಹಿಂಗಿಸಿಕೊಂಡರು. ತಾನು ತೊಟ್ಟ ಪ್ರತಿಜ್ಞೆಯನ್ನೂ ಕೆಡಿಸಿಕೊಂಡೆ; ಮನಸ್ಸಿನ ನೆಮ್ಮದಿಯನ್ನೂ ಹಾಳು ಮಾಡಿಕೊಂಡೆ. ಇದು ಹೇಗೆ ಎಂದು ಲಕ್ಷ್ಮಿ ಹಳೆಯ ನೆನಹುಗಳನ್ನು ತೋಡ ತೊಡಗಿದಳು.

ಪೊಡೆಮುರಿ ಸಂಭ್ರಮ ಕಳೆದ ಎರಡು ದಿನಗಳಲ್ಲಿಯೇ ಅವಳು ಯಂಬ್ರಾಂದ್ರಿಯ ಮಠಕ್ಕೆ ಬಂದಳು. ಆಕೆಯ ಬೇಸರವನ್ನು ನೀಗಲು ಜತೆಯಲ್ಲಿ ಚಿರುತೆಯನ್ನು ಮಾವ ಕಳುಹಿಕೊಟ್ಟಿದ್ದರು.

ಯಂಬ್ರಾಂದ್ರಿಯ ಮಠ ಚಿಕ್ಕದಾದರೂ ಬಹು ಚಂದವಾದುದು. ಅದು ಹುಲ್ಲು ಛಾವಣಿಯ ಮನೆಯಾದರೂ ಮನೆಯೊಳಗೆ ಮತ್ತು ಹೊರಗೆ ಗಾಳಿ ಬೆಳಕುಗಳು ತುಂಬಾ ಓಡಾಡುತ್ತಿದ್ದುವು. ಮನೆಯ ಜಗಲಿ ಕಪ್ಪಗೆ ಕನ್ನಡಿಯಂತೆ ಮಿನುಗುತ್ತಿದ್ದತು. ಮನೆಯ ಅಂಗಳದಲ್ಲಿ ಸೊಗಸಾದ ಹೂದೋಟವೊಂದಿತ್ತು. ಮನೆಯ ಅಂದ ಮತ್ತು ತೋಟದ ಚಂದ ಯಂಬ್ರಾಂದ್ರಿಯ ರಸಿಕತೆಯನ್ನು ತಿಳಿಸುತಿದ್ದವು. ಮನೆಯ ಹೊರಗೆಲಸಗಳಿಗೆಂದು ಚಾತು ಎಂಬ ಒಬ್ಬ ಹುಡುಗನಿದ್ದ. ಮನೆಗೆ ಲಕ್ಷ್ಮಿ ಕಾಲಿಟ್ಟೊಡನೆ ಯಂಬ್ರಾಂದ್ರಿ, "ಲಕ್ಷ್ಮೀ, ಇದು ನನ್ನ ಮನೆಯಲ್ಲ; ನಿನ್ನ ಮನೆ. ಇಲ್ಲಿ ಹೆಂಗಸಿನ ಕೈ ಆಡದುದರಿಂದ ಮನೆ ಅಂದಗೆಟ್ಟಿದೆ. ಮನೆಯನ್ನು ಚಂದಗೊಳಿಸುವ ಹೊಣೆ ನಿನ್ನದು." ಎಂದು ಹೇಳಿದರು.

ಯಂಬ್ರಾಂದ್ರಿಯೇ ಕಾಫಿಯನ್ನು ಕಾಯಿಸಿತಂದು ಎಲ್ಲರಿಗೂ ಕೊಟ್ಟರು. ಅವರು ಲಕ್ಷ್ಮಿಗೆ ಮಾವನಿತ್ತ ಬಳುವಳಿಗಳನ್ನು ತಂದ ಆಳುಗಳಿಗೆ ಮಧ್ಯಾಹ್ನದ ಊಟ ಹಾಕಿ ಒಂದೊಂದು ರೂಪಾಯಿಯನ್ನು ಪಾರಿತೋಷಕ ಕೊಟ್ಟು ಕಳುಹಿಸಿದರು. ಮಧ್ಯಾಹ್ನದ ಅಡುಗೆಯನ್ನು ಮಾಡಿದುದಾದರೂ ಯಂಬ್ರಾಂದ್ರಿಯೇ ಅವರೇ ಎಲ್ಲರಿಗೂ ಊಟ ಬಡಿಸಿದರು. ಯಂಬ್ರಾಂದ್ರಿ ಅಟ್ಟು ಬಿಡಿಸುವುದನ್ನು ಕಂಡು ಚಿರುತೆಗೆ ಆಶ್ಚರ್ಯ

ವಾಯಿತು. ಅವಳು, "ಅಕ್ಕ ಇದೇನು? ಇಲ್ಲಿ ಯಂಬ್ರಾಂದ್ರಿಯೇ ಅಡುಗೆ ಮಾಡಿ ನಮಗೆಲ್ಲ ಬಡಿಸುತ್ತಾರೆ. ಆದರೆ ನಮ್ಮ ಮನೆಯಲ್ಲಿ ನಾವ ಒಂದೇ ಒಂದು ದಿನ ಅಡುಗೆ ಮಾಡುವುದಿಲ್ಲವಲ್ಲ!" ಎಂದು ಉದ್ಗಾರವೆತ್ತಿದಳು.

"ಅವರು ಬ್ರಾಹ್ಮಣರು; ಅನ್ಯರ ಕೈಯ ಅಡುಗೆಯನ್ನು ಅವರು ಉಣ್ಣುವುದಿಲ್ಲ."

"ದಿನ ನಿತ್ಯ ಅವರೇ ಅಡುಗೆ ಮಾಡಿ ನಿನಗೆ ಬಡಿಸುವರೇ?"

"ಹೌದು."

"ಹಾಗಾದರೆ ನಿನ್ನ ಭಾಗ್ಯವೇ ಭಾಗ್ಯ!"

"ಭಾಗ್ಯವೇನು ಬಂತು?"

"ಅಕ್ಕ, ನೀನು ದಿನ ನಿತ್ಯ ಅಡುಗೆ ಮಾಡಿ ಕೈ ಸುಟ್ಟು ಕೊಳ್ಳ ಬೇಕಾದುದಿಲ್ಲ. ನೀನು ರಾಣಿಯ ಹಾಗೆ ಕುಳಿತು ಉಣಬಹುದು."

"ಚಿರುತೆ, ಹೋಗೇ, ನೀನು ಇಲ್ಲಿಯೂ ನನ್ನ ಚೇಷ್ಟೆ ಮಾಡಿ ಗೋಳು ಹುಯ್ಯಬೇಡ." ಲಕ್ಷ್ಮಿ ಮೆದುದನಿಯಲ್ಲಿ ತಂಗಿಯನ್ನು ಗದರಿಸಿದಳು.

ಮಠದ ಹಿಂದೆಯೇ ಯಂಬ್ರಾಂದ್ರಿಯ ಕಾಫಿ ಮೆಣಸುಗಳ ತೋಟ ಇದೆ. ಕೆಳಗೆ ತಗ್ಗಿನಲ್ಲಿ ಬಾಳೆಯ ತೋಟವಿದೆ. ಮುಂದೆ ನೂರುಮಾರು ನಡೆದರೆ ಗದ್ದೆ ಬಯಲು ಸಿಕ್ಕುವುದು. ಗದ್ದೆ ಬಯಲಂಚನ್ನು ಹಿಡಿದು ಉತ್ತರ ದಿಕ್ಕಿಗೆ ಸಾಗಿದರೆ ಅಲ್ಲಿ ಯಂಬ್ರಾಂದ್ರಿ ಪೂಜೆಗೈವ ಈಶ್ವರ ಗುಡಿ ದೊರೆಯುವುದು. ಗುಡಿಗೆ ಯಂಬ್ರಾಂದ್ರಿಯ ಮಠದಿಂದ ಎರಡು ಮೂರು ಫರ್ಲಾಂಗುಗಳಿಗಿಂತ ಹೆಚ್ಚು ದೂರವಿರಲಾರದು. ಗುಡಿಯ ಸುತ್ತಲೂ ಹಂಚು ಹೊದೆಸಿದ ಒಂದು ಪ್ರಾಕಾರವಿದೆ. ನಡುವೆ ದೇವರ ಗರ್ಭಗುಡಿ ಇದೆ. ಗುಡಿಯ ಅಂಗಣದಲ್ಲಿ ಯಂಬ್ರಾಂದ್ರಿ ತುಳಸಿ, ಶಾವಂತಿಗೆ, ಇರುವಂತಿಗೆ, ಗುಲಾಬಿ, ಮಲ್ಲಿಗೆ ಹೀಗೆ ಬಗೆಬಗೆಯ ಹೂಗಿಡಗಳನ್ನೂ, ಬಳ್ಳಿಗಳನ್ನೂ ನೆಟ್ಟು ಬೆಳೆಸಿದ್ದಾರೆ. ಗುಡಿಯನ್ನು ಅವರು ಬಹು ಚಂದವಾಗಿ ಇರಿಸಿದ್ದಾರೆ. ಗುಡಿಯ ಅಂಕಣದ ಹೊರಗೆ ತಿಳಿನೀರಿನ ಕೊಳವೊಂದು ಇದೆ. ಕೊಳದ ಪಕ್ಕದಲ್ಲಿಯೇ ಕಲ್ಲು ಕಟ್ಟಿದ ಬಾವಿಯೊಂದು ಇದೆ.

ಅಂದು ಸಂಜೆ ಯಂಬ್ರಾಂದ್ರಿ ಲಕ್ಷ್ಮಿ-ಚಿರುತೆಯನ್ನು ಗುಡಿಗೆ ಕರೆದು ಕೊಂಡು ಹೋದರು. ತಾವು ಶಾಂತಿಗೈಯ್ಯುತ್ತಿರುವ ದೇಗುಲವನ್ನು ಅವರಿಗೆ ತೋರಿಸಿಕೊಟ್ಟರು. ಗುಡಿಯ ಆವರಣ ಶಾಂತಿಸಮಾಧಾನಗಳ ನಿತ್ಯನಿಕೇತನವಾಗಿದ್ದಿತು. ಅಲ್ಲಿ ಸೊಗಸು ಚೆಂದಗಳು ತುಂಬಿದ್ದುವು. ಗುಡಿಯನ್ನು ನೋಡಿ ಚಿರುತೆಗೆ ಸಂತೋಷವಾಯಿತು. ಅವಳು, "ಇದು ನಮ್ಮ ಊರಿನ ಗುಡಿಯ ಹಾಗಿಲ್ಲ. ಅಲ್ಲಿ ಗುಡಿಯ ಅಂಕಣದೊಳಗೆ ಕಾಲಿಟ್ಟರೆ ಸಾಕು; ವಾಸನೆಯನ್ನು ತಡೆಯಲಾಗದೆ ಮೂಗು ಮುಚ್ಚಿ ಕೊಳ್ಳಬೇಕಾಗುತ್ತದೆ." ಎಂದು ನುಡಿದಳು.

"ಇಲ್ಲಿ ದುರ್ವಾಸನೆ ಏನಾದರೂ ಬರುವುದೇ?" ಯಂಬ್ರಾಂದ್ರಿ ಚಿರುತೆಯನ್ನು ಕೇಳಿದರು: "ಹಾಗೇನಾದರೂ ಇದ್ದರೆ ಗುಡಿಯ ಆವರ ಣವನ್ನು ಸ್ವಚ್ಛಗೊಳಿಸಲು ನಾಳೆಯೇ ಹೊರಡಬೇಕಾಗುವುದು,"

"ಇಲ್ಲ. ಯಂಬ್ರಾಂದ್ರಿ." ಚಿರುತೆ ಕೆಂಪೇರಿದ ಕಪೋಲಗಳೊ ಡನೆ ಉಸುರಿದಳು: "ಈ ಅಂಬಲ ನಾವು ವಾಸಮಾಡುವ ಬೀಡಿ ಗಿಂತಲೂ ಶುಚಿಯಾಗಿದೆ."

"ರಾತ್ರಿ ಯಂಬ್ರಾಂದ್ರಿಯೇ ಅಡುಗೆ ಮಾಡಿದರು; ಮೊದಲು ತಾವು ಉಂಡು ಆ ಮೇಲೆ ಚಿರುತೆ-ಲಕ್ಷ್ಮಿಯರಿಗೆ ಬಡಿಸಿದರು. ಉಂಡ ಮೇಲೆ ಎಂಜಲು ಎಲೆ ತೆಗೆಯುವುದು, ಉಂಡ ಎಡೆಗೆ ಗೋಮಯ ಹಚ್ಚು ವದು, ಮುಸುರೆ ಪಾತ್ರೆಗಳನ್ನು ತಿಕ್ಕಿ ಬೆಳಗುವುದು ಇತ್ಯಾದಿ ಸಣ್ಣ ಪುಟ್ಟ ಕೆಲಸಗಳನ್ನು ಮಾಡಿ ಲಕ್ಷ್ಮಿ ಗೃಹಿಣಿಯ ಕರ್ತವ್ಯಗಳನ್ನು ಈಡೇರಿಸಿದಳು.

ನಾಯಕನ ಚಿಂತೆ ಆ ಇರುಳೂ ಲಕ್ಷ್ಮಿಯನ್ನು ಕಾಡದೆ ಇರಲಿಲ್ಲ. ಸ್ಥಳ ಬದಲಾದುದರಿಂದ ಆಕೆಗೆ ಬೇಗನೆ ನಿದ್ದೆ ಬರಲಿಲ್ಲ. ಅವಳು ಹಾಸಿ ಗೆಯ ಮೇಲೆ ಹೊರಳಾಡಿಯೇ ಇರುಳನ್ನು ಕಳೆದಳು! ಯಂಬ್ರಾಂದ್ರಿ ತಾವು ಕೊಟ್ಟ ಮಾತನ್ನು ಮೀರಲಿಲ್ಲ. ಆಕೆಯ ಮೈಯನ್ನು ಸೋಂಕ ಲಿಲ್ಲ. ಆಕೆಗೆ ಬೆಳಗಿನ ಜಾವದಲ್ಲಿ ಗಾಢ ನಿದ್ದೆ ಬಂತು. ಯಂಬ್ರಾಂದ್ರಿ ಕರೆದಾಗಲೇ ಎಚ್ಚರವಾದುದು.

"ಕಾಫಿ ಉಪ್ಪಿಟ್ಟು ತಯಾರಾಗಿದೆ ಲಕ್ಷ್ಮೀ." ಅವರು ಆಕೆ ಯನ್ನು ಕೂಗಿ ಹೇಳುತಿದರು: "ಬೇಗ ಹೋಗಿ ಮೋರೆ ತೊಳೆದು

ಕೊಂಡು ಬನ್ನಿ.''

ಲಕ್ಷ್ಮಿ ಕಣ್ತೆರೆದು ನೋಡಿದಳು. ಸೂರ್ಯ ಕಿರಣಗಳು ಕಿಟಕಿಯ ಸಂದಿನಿಂದ ನುಗ್ಗಿ ಆಕೆಯ ಮೇಲೆ ಧಾಳಿ ನಡೆಸುತ್ತಿದ್ದವು. ತಾನು ಇಷ್ಟು ಹೊತ್ತು ನಿದ್ರಿಸಿ ತಡವಾಗಿ ಎದ್ದೆನಲ್ಲ ಎಂದು ಅವಳಿಗೆ ನಾಚಿಕೆಯಾಯಿತು. ಅವಳು ಲಗುಬಗನೆ ಎದ್ದು ಹಾಸಿಗೆಯನ್ನು ಸುತ್ತಿದಳು. ಹಾಸಿಗೆಯ ಮೇಲೆ ಅಡ್ಡಲಾಗಿ ಹೊರಳಿದ್ದ ಚಿರುತೆಯನ್ನು ಕರೆದೆಬ್ಬಿಸಿದಳು. ಅವರು ಬಾವಿಗೆ ಹೋಗಿ ಕೈಕಾಲು ಮೋರೆಗಳನ್ನು ತೊಳೆದುಕೊಂಡು ಬಂದಾಗ ಯಂಬ್ರಾಂದ್ರಿ ಕಾಫಿ ಫಲಹಾರಗಳನ್ನು ಮುಗಿಸಿದ್ದರು. ಹೊರಗೆ ಅಂಗಳ ದಲ್ಲಿ ತೋಟದ ಕೆಲಸ ಮಾಡಲೆಂದು ಆಳುಗಳು ಬಂದು ನಿಂತಿದ್ದರು. ಯಂಬ್ರಾಂದ್ರಿ, " ಲಕ್ಷ್ಮೀ, ನಾನು ತೋಟಕ್ಕೆ ಹೋಗಿ ಆಳುಗಳಿಗೆ ಕೆಲಸ ಕೊಟ್ಟು ಬರಬೇಕು; ನೀವೇ ಉಪ್ಪಿಟ್ಟು ಬಡಿಸಿಕೊಂಡು ಬಿಡಿ " ಎಂದು ನುಡಿದು ಹೊರಟುಹೋದರು.

ಲಕ್ಷ್ಮಿ ಎರಡು ಎಲೆಗಳನ್ನು ಹಾಕಿ ಯಂಬ್ರಾಂದ್ರಿ ಮಾಡಿಟ್ಟ ಉಪ್ಪಿಟ್ಟನ್ನು ಬಡಿಸಿದಳು. ಮನೆಗೆಲಸದ ಚಾತುವಿಗೂ ಕೊಟ್ಟಳು. ಚಿರುತೆ ಉಪ್ಪಿಟ್ಟನ್ನು ಮೆಲ್ಲುತ್ತಾ, '' ಅಕ್ಕ, ಇಷ್ಟೊಂದು ರುಚಿಯಾಗಿ ದೇವತ್ತೆ ಸಹ ಉಪ್ಪಿಟ್ಟನ್ನು ಮಾಡಲಾರರು; ನೀನೂ ಮಾಡಲಾರೆ. ಕಾಫಿಯಂತೂ ಗರಂ ಎಂದು ಪರಮಾಷಿಯಾಗಿದೆ!" ಎಂದು ಯಂಬ್ರಾಂದ್ರಿಯ ಕೈಯ ಅಡುಗೆಯನ್ನು ಹೊಗಳಿದಳು.

'' ಯಂಬ್ರಾಂದ್ರಿಗಳು ಹುಟ್ಟುವಾಗಲೇ ಪಾಚಕ ಕಲೆಯನ್ನು ಮೈಗೂಡಿಸಿಕೊಂಡಿರುತ್ತಾರೆ. "

'' ಹಾಗಾದರೆ, ಅಕ್ಕ, ನಾನು ನನ್ನ ನಿಶ್ಚಯವನ್ನು ಬದಲಿಸಿ ಬಿಟ್ಟೆ.'' ಚಿರುತೆ ನಗುತ್ತಾ ಉಲಿದಳು: '' ನನಗೆ ನಾಯಕ ಗಂಡನಾಗು ವುದು ಬೇಡ. ನಾನೂ ಒಬ್ಬ ಯಂಬ್ರಾಂದ್ರಿಯನ್ನೇ ಮದುವೆಯಾಗಿ ಬಿಡುತ್ತೇನೆ. ಅಂದರೆ ಅಡುಗೆ ಮಾಡಿ ಕೈ ಸುಟ್ಟುಕೊಳ್ಳುವ ತೊಂದರೆ ಯಿಲ್ಲ. ಹೊತ್ತುಹೊತ್ತಿಗೆ ಸರಿಯಾಗಿ ಊಟ ತಿಂಡಿಗಳು ದೊರೆಯುತ್ತವೆ."

" ಚಿರುತೆ, ಹಾಗಾದರೆ ನೀನು ಯಾರನ್ನೆಲ್ಲಾ ಮದುವೆಯಾಗುವೆ ?"

" ಏಕೆ ?"

"ನೋಡು. ಉಯ್ಯಾಲೆಯಾಡಲು ಕೊಂಬು ಮೀಸೆಯ ಧಾಂಡಿಗ ಗಂಡನನ್ನೇ; ಅಡವಿಯಿಂದ ಹಣ್ಣು ಮತ್ತು ಜೇನು ಎರಿಗಳನ್ನು ತಂದು ಕೊಡುವ ನಾಯಕನನ್ನೇ; ಅಥವಾ ಸವಿ ಸವಿಯಾದ ಊಟ ತಿಂಡಿಗಳನ್ನು ಒದಗಿಸಿ ಕೊಡುವ ಯಂಬ್ರಾಂದ್ರಿಯನ್ನೇ ?''

"ಹೋಗಕ್ಕ, ನಿನ್ನ ಚೇಷ್ಟೆ ಸಾಕು ! ನಿನಗೆ ದೊರೆತಂತಹ ಒಬ್ಬ ಯಂಬ್ರಾಂದ್ರಿ ಸಿಕ್ಕಿದರೆ ಲೇಸು."

ಅವರು ಮಾತಾಡುತ್ತಾ ಉಪ್ಪಿಟ್ಟನ್ನು ಮೆದ್ದು ಕಾಫಿ ಕುಡಿದು ಮುಗಿಸಿದರು. ಲಕ್ಷ್ಮಿ ಎಂಜಲು ಎಲೆಗಳನ್ನೆತ್ತಿ ದೂರ ಎಸೆದಳು. ತಿಂದ ಸ್ಥಳಕ್ಕೆ ಸೆಗಣಿಯನ್ನು ಹಚ್ಚಿ ಬಳಿದಳು. ಅಡುಗೆ ಪಾತ್ರೆಗಳನ್ನು ತಿಕ್ಕಿ ತೊಳೆದಳು. ಆ ವೇಳೆಗೆ ಚಾತು ಹಸುಗಳ ಹಾಲುಕರೆದು ಹಟ್ಟಿಯ ಸೆಗಣಿ ತೆಗೆದು ಬಂದಿದ್ದ. ಲಕ್ಷ್ಮಿ ಅಂಗಳದಲ್ಲಿ ಕಸ ತುಂಬಿರುವುದನ್ನು ಕಂಡು ಉಡುಗಲೆಂದು ಕಸಬರಿಕೆಯನ್ನು ಎತ್ತಿಕೊಂಡಳು. ಆದರೆ ಚಾತು ಅವಳನ್ನು ತಡೆದು, "ಬೇಡಿ ಅಮ್ಮ, ಯಂಬ್ರಾಂದ್ರಿ ಆ ಕೆಲಸವನ್ನು ಮಾಡಲೆಂದೇ ನನ್ನನ್ನು ಇಲ್ಲಿ ನಿಲ್ಲಿಸಿಕೊಂಡಿದ್ದಾರೆ. ನೀವು ಹಾಗೆ ಮಾಡು ಹೀಗೆ ಮಾಡು ಎಂದು ನನಗೆ ಯಜಮಾನಿಕೆ ಮಾಡಿದರೆ ಸಾಕು." ಎಂದು ಹೇಳಿ ಆಕೆಯ ಕೈಯ ಕಸಬರಿಕೆಯನ್ನು ಕೇಳಿಕೊಂಡ.

ಯಂಬ್ರಾಂದ್ರಿ ತೋಟದಲ್ಲಿ ಆಳುಗಳಿಗೆ ಈ ದಿನದ ಕೆಲಸವನ್ನೊಪ್ಪಿಸಿ ಮಠಕ್ಕೆ ಮರುಳಿದರು. ಅವರು, "ಲಕ್ಷ್ಮಿ ಬಟ್ಟೆ ಬರೆಗಳನ್ನು ಹೊಳೆಗೆ ಹೋಗಿ ಒಗೆದುಕೊಳ್ಳಬಹುದು. ಮೀಹಕ್ಕೆ ಚಾತು ಬಿಸಿನೀರನ್ನು ಕಾಯಿಸಿಕೊಡುತ್ತಾನೆ.'' ಎಂದು ಹೇಳಿದರು. ಅವರು ಒಗೆಯಲೆಂದು ತಮ್ಮ ಪಂಚೆಜುಬ್ಬಗಳನ್ನು ಕಳಚಿಕೊಟ್ಟರು.

"ನನಗೆ ಬಿಸಿನೀರು ಬೇಡ. ತಣ್ಣೀರಿನಲ್ಲಿ ಮಿಂದು ಅಭ್ಯಾಸವಿದೆ'' ಎಂದ ಹೇಳಿ ಲಕ್ಷ್ಮಿ ಸಾಬೂನು ಮತ್ತು ಒಗೆಯಲಿರುವ ಅರಿವೆಗಳನ್ನು ಎತ್ತಿಕೊಂಡು ಹೊಳೆಗೆ ಹೋದಳು. ಜತೆಯಲ್ಲಿ ಚಿರುತೆಯೂ ಇದ್ದಳು.

ಅವಳು ಅರಿವೆಗಳನ್ನು ಒಗೆದು ಸ್ನಾನ ಮುಗಿಸಿಕೊಂಡು ಬಂದಾಗ ಯಂಬ್ರಾಂದ್ರಿ ಜಪ-ತಪಗಳನ್ನು ತೀರಿಸಿ ಗುಡಿಗೆ ಹೊರಡಲು ಅಣಿಯಾಗುತ್ತಿದ್ದರು. ಅವರು ಹಣೆಗೆ ಲೇಪಿಸಿಕೊಂಡ ಭಸ್ಮ ಫಳಫಳನೆ ಹೊಳೆಯು

ತಿತ್ತು. ಅವರು ಲಕ್ಷ್ಮಿಯನ್ನು ಕಂಡೊಡನೆ, "ನಾನು ಗುಡಿಗೆ ಹೋಗಿ ಒಂದು ಕ್ಷಣದಲ್ಲಿ ಪೂಜೆ ಮುಗಿಸಿಕೊಂಡು ಬಂದು ಬಿಡುತ್ತೇನೆ. ಇಲ್ಲಿ ನಿನಗೆ ಬೇಸರವಾಗುವುದೇನೋ. ಇದನ್ನು ಓದುತ್ತಾ ಹೊತ್ತು ಕಳೆಯ ಬಹುದು." ಎಂದು ನುಡಿದು ಆಕೆಗೆ ವಿರುದನ್ ಶಂಕು ಎಂಬ ಕಾದಂಬರಿ ಯನ್ನು ತೆಗೆದು ಕೊಟ್ಟನು.

"ಯಂಬ್ರಾಂದ್ರಿ, ನಾವೂ ನಿಮ್ಮ ಜತೆಯಲ್ಲಿ ಗುಡಿಗೆ ಬರುತ್ತೇವೆ." ಚಿರುತೆ ಹೇಳಿದಳು.

"ಆಗಲಿ. ಬನ್ನಿ."

ಯಂಬ್ರಾಂದ್ರಿ ಒಂದು ಹಿತ್ತಾಳೆಯ ಪಾತ್ರೆಯನ್ನು ಹಿಡಿದುಕೊಂಡು ಸಾಗಿದರು. ಚಿರುತೆ ಲಕ್ಷ್ಮಿಯರು ಅವರನ್ನು ಅನುಸರಿದರು. ಗುಡಿಗೆ ಬಂದು ಅವರು ಕದಗಳನ್ನು ತೆರೆದರು. ತಾವು ಸಂಬಂಧ ಮಾಡಿಕೊಳ್ಳ ಲೆಂದು ಯಂಬ್ರಾಂದ್ರಿ ಊರನ್ನು ಬಿಟ್ಟು ಹೋದಾಗ, ಗುಡಿಯ ಪೂಜೆ ಯನ್ನು ನೆರೆಯ ಕೇಶವನ್ ಯಂಬ್ರಾಂದ್ರಿಗೆ ಒಪ್ಪಿಸಿದ್ದರು. ಆತ ಗರ್ಭ ಗುಡಿಯನ್ನು ಸ್ವಚ್ಛಗೊಳಿಸಿರಲಿಲ್ಲ; ಹರಿವಾಣ ಪಂಚಪಾತ್ರೆಗಳನ್ನು ಬೆಳಗಿರ ಲಿಲ್ಲ. ಅವುಗಳಲ್ಲಿ ಕಿಲುಬು ಹಿಡಿದ ಕಪ್ಪು ಕಲೆಗಳು ಎದ್ದು ತೋರುತಿ ದ್ದವು. ದೇವರ ಸನ್ನಿಧಿಯಲ್ಲಿ ಮಲಿನತೆ ಬೀಡುಬಿಟ್ಟಿದೆಯಲ್ಲ ಎಂದು ಯಂಬ್ರಾಂದ್ರಿಗೆ ತುಂಬಾ ಬೇಸರವಾಯಿತು. ಅವರು ಪಂಚಪಾತ್ರೆ ಹರಿ ವಾಣಗಳನ್ನು ಲಕ್ಷ್ಮಿಯ ಕೈಗೆ ಕೊಟ್ಟು, "ಲಕ್ಷ್ಮೀ, ನೀನು ಇವುಗಳ ನ್ನೊಮ್ಮೆ ಬೆಳಗಿ ತಂದು ಬಿಡು. ಹೀಗೆ ದೇವರ ಸನ್ನಿಧಿಯನ್ನು ನಾವು ಹೊಲಸಾಗಿಡುವುದರಿಂದಲೇ ಜನ ನಮ್ಮನ್ನು ತೆಗಳುತಿದ್ದಾರೆ." ಎಂದು ನುಡಿದರು.

ಲಕ್ಷ್ಮಿ ಹರಿವಾಣ ಪಂಚಪಾತ್ರೆಗಳನ್ನು ಎತ್ತಿಕೊಂಡು ಗುಡಿಯ ಹೊರಗಿನ ಕೊಳದ ದಂಡೆಗೆ ತೆರಳಿದಳು. ಅವಳು ಸ್ವಲ್ಪ ಹುಳಿಯನ್ನು ಹಚ್ಚಿ ಬೆಳಗಲಾರಂಭಿಸಿದಳು. ಕೊಳದ ದಂಡೆಯಲ್ಲಿ ಒಂದು ಪೇರಳೆ ಗಿಡ ನಿಂತಿತ್ತು. ಚಿರುತೆಯ ಕಣ್ಣುಗಳು ಗಿಡದ ಕಡೆಗೆ ಹರಿದುವು. ಕೊಂಬೆ ಯೊಂದರಲ್ಲಿ ನಾಲ್ಕೆಂಟು ಕಳಿತ ಹಣ್ಣುಗಳು ತೂಗುತಿದ್ದುವು. ಹಣ್ಣುಗಳು ಕಣ್ಣುಗಳಿಗೆ ಬೀಳಲು ಅವಳ ಬಾಯಲ್ಲಿ ನೀರೂರಿತು. ಅವಳು, "ಅಕ್ಕ,

ಅಲ್ಲಿ ನೋಡು ಕಳಿತ ಪೇರಲ ಹಣ್ಣುಗಳು!" ಎಂದು ಉಸುರಿದಳು.

ಲಕ್ಷ್ಮಿ ಕಣ್ಣುಗಳನ್ನೆತ್ತಿ ಹಣ್ಣುಗಳನ್ನು ನೋಡಿದಳು. ಅವಳು "ಹಣ್ಣುಗಳು ತುದಿಗೊಂಬೆಯಲ್ಲಿವೆ. ಕೈಗೆ ಎಟಕಲಾರವು." ಎಂದು ಮಾರುಲಿದಳು.

"ನಾಯಕನಿದ್ದರೆ ಹುಣ್ಣುಗಳನ್ನು ಕಿತ್ತುಕೊಡುತ್ತಿದ್ದ."

ಅಂದು ಬೆಳಗಿನಂದ ನಾಯಕ ಲಕ್ಷ್ಮಿಯ ಚಿತ್ತದಲ್ಲಿ ಸುಳಿದಿರಲಿಲ್ಲ. ಯಂಬ್ರಾಂದ್ರಿಯ ಮನೆಗೆಲಸಗಳನ್ನು ಮಾಡುವುದರಲ್ಲಿ ಅವಳು ಆತನನ್ನು ಮರೆತಿದ್ದಳು. ಚಿರುತೆ ನಾಯಕನ ಹೆಸರೆತ್ತಿದೊಡನೆ ಅವನು ಬಂದು ಅವಳ ಮನಸ್ಸಿನಲ್ಲಿ ನುಗ್ಗಿ ತೊಳಗಿದ. ಅವನು "ಪಾಪಾತಿ, ನೀವು ಹಿಂದೆ ನನ್ನನ್ನು ಎಂದೆಂದಿಗೂ ಮರೆಯಲಾರೆ ಎಂದು ಹೇಳಿದ್ದಿರಿ. ಈಗ ನೋಡಿ, ಮುಂಜಾನೆಯಿಂದ ನೀವು ನನ್ನ ನೆನೆಯಲೇ ಇಲ್ಲ." ಎಂದು ಹೇಳಿದ. ಲಕ್ಷ್ಮಿಯ ಮುಖ ಮ್ಲಾನವಾಯಿತು. ಅವಳು ನೀಡುಸುಯ್ಲೊಂದನ್ನು ಹೊರಚೆಲ್ಲಿದಳು.

ಲಕ್ಷ್ಮಿ ಹರಿವಾಣ ಪಂಚಪಾತ್ರೆಗಳನ್ನು ಬೆಳಗಿ ಮುಗಿಸಿದಳು. ಚಿರುತೆ ಗಿಡಗ ಕೊಂಬೆಯ ಮೇಲಿನಿಂದ ದೃಷ್ಟಿಯನ್ನು ತಿರುಗಿಸದೆ. "ಎಷ್ಟು ಸೊಗಸಾದ ಹಣ್ಣುಗಳು!" ಎಂದು ಹೇಳುತ್ತಲೇ ಇದಳು.

ಕೊಳೆದ ದಂಡೆಯ ಮೇಲೆ ಒಣ ಬಡಿಗೆಯೊಂದು ಬಿದ್ದಿತ್ತು. ಲಕ್ಷ್ಮಿ ಆ ಬಗೆಯನ್ನು ಎತ್ತಿ ಹಣ್ಣಿರುವ ಕೊಂಬೆಗೆ ಗುರಿಯಿಟ್ಟು ಎಸೆದಳು. ಆಕೆಯ ಎಸೆತ ಗುರಿತಪ್ಪಲಿಲ್ಲ. ನಾಲ್ಕಾರು ಹಣ್ಣುಗಳು ಪಟಪಟನೆ ಕೆಳ ಗುದುರಿದುವು. ಚಿರುತೆ ಆತುರದಿಂದ ಓಡಿ ಹೋಗಿ ಹಣ್ಣುಗಳನ್ನು ಹೆಕ್ಕಿ ಕೊಂಡಳು.

ಬೆಳಗಿದ ಹರಿವಾಣ ಪಂಚಪಾತ್ರೆಗಳನ್ನು ಎತ್ತಿಕೊಂಡು ಲಕ್ಷ್ಮಿ ಗುಡಿಗೆ ಬಂದಳು. ಅವಳು ಬೆಳಗಿದ ಪಾತ್ರೆಗಳನ್ನು ಗುಡಿಯ ಬಾಗಿಲಲ್ಲಿ ಇರಿಸಿದಳು. ಯಂಬ್ರಾಂದ್ರಿ ಅಲ್ಲಿ ಜಪ ಮಾಡುತ್ತಾ ಕುಳಿತಿದ್ದರು. ಲಕ್ಷ್ಮಿ ಪೂಜೆಗೆಂದು ತೋಟದಿಂದ ಅರಳಿದ ಹೂಗಳನ್ನು ಕಿತ್ತುಕೊಟ್ಟಳು. ಚಿರುತೆ ಪ್ರಾಕಾರದಲ್ಲಿ ಕುಳಿತು ಪೇರಳೆ ಹಣ್ಣುಗಳನ್ನು ಕಡಿದು ಮೆಲ್ಲಲಾರಂಭಿಸಿ ದಳು.

ಯಂಬ್ರಾಂದ್ರಿ ಜಪ ಮುಗಿಸಿದರು. ಅವರು ಪೂಜೆಗೆ ಕೈ ಹಚ್ಚಿದರು. ಅವರು ಗಂಟೆ ಬಾರಿಸುತ್ತ ದೇವರಿಗೆ ಅಭಿಷೇಕ ಮಾಡತೊಡಗಿದರು. ಅವರು ಬಾಯಿಯಿಂದ ಹೇಳುತಿದ್ದ ಮಂತ್ರಗಳು ಗಾಳಿಯಲ್ಲಿ ತೇಲಿ ಬಂದು ಲಕ್ಷ್ಮಿಯ ಕಿವಿಗಳಿಗೆ ಬಿದ್ದವು. ಆ ಧ್ವನಿ ಕಿರುಗೆಜ್ಜೆಗಳ ಧ್ವನಿಯಂತೆ ಚಿತ್ತಾಪಹಾರಕರವಾಗಿದ್ದಿತು. ಯಂಬ್ರಾಂದ್ರಿಯ ಧ್ವನಿ ಬಹು ಮಧುರವಾದುದು ಎಂದು ಅವಳಿಗೆ ಅರಿವಾಯಿತು.

ಯಂಬ್ರಾಂದ್ರಿ ಪೂಜೆಯನ್ನು ಮುಗಿಸಿ ದೇವರಿಗೆ ನೈವೇದ್ಯ ಮಾಡಿದರು. ಅವರು ಲಕ್ಷ್ಮಿ ಚಿರುತೆಯನ್ನು ಕರೆದು ತೀರ್ಥಪ್ರಸಾದಗಳನ್ನು ಕೊಟ್ಟರು. ಅವರು ಗುಡಿಯ ಕದಗಳನ್ನಿಕ್ಕಿ ನೈವೇದ್ಯದ ತಪ್ಪಲೆಯನ್ನು ಎತ್ತಿಕೊಂಡು ಮಠಕ್ಕೆ ಹೊರಟರು. ಲಕ್ಷ್ಮಿ ತಂಗಿಯೊಡನೆ ಅವರನ್ನು ಹಿಂಬಾಲಿಸಿದಳು.




ಚಿರುತೆಗೆ ಯಂಬ್ರಾಂದ್ರಿಯ ಮಠದಲ್ಲಿ ಬೇಸರ ಬಂತು. ಆಕೆಯ ಜತೆಯಲ್ಲಿ ಆಡಲು ಗಾಮು ಕುಂಞಿಂಬುಗಳು ಇರಲಿಲ್ಲ. ಸೊಸೆಯ ಯೋಗಕ್ಷೇಮವನ್ನು ಆರಯ್ಯಲೆಂದು ಮಾವ ಬಂದಿದ್ದಾಗ, ಅವಳು ಅವರ ಜತೆಯಲ್ಲಿಯೇ ಮರಳಿದಳು. ಈಗ ಯಂಬ್ರಾಂದ್ರಿಯ ಮಠದಲ್ಲಿ ಲಕ್ಷ್ಮಿಯೊಬ್ಬಳೇ ಉಳಿದಳು.

ತುಂಬಿದ ಮನೆಯಲ್ಲಿ ದಿನ ಕಳೆದಿದ್ದ ಲಕ್ಷ್ಮಿಗೆ ಈಗ ಯಂಬ್ರಾಂದ್ರಿ ಮಠದಲ್ಲಿ ಹೊತ್ತನ್ನು ದೂಡುವುದು ಬಹಳ ಕಷ್ಟವಾಯಿತು. ಯಂಬ್ರಾಂದ್ರಿ ತಮ್ಮ ತೋಟ ಮತ್ತು ಗದ್ದೆಗಳಲ್ಲಿ ಸಮಯವನ್ನು ಕಳೆಯುತಿದ್ದರು. ಅಡುಗೆಯನ್ನು ಸಹ ಅವರೇ ಮಾಡುತಿದ್ದುದರಿಂದ ಲಕ್ಷ್ಮಿಗೆ ವಿಶೇಷ ಕೆಲಸಗಳೇನೂ ಇರಲಿಲ್ಲ. ಚಿಲ್ಲರೆ ಕೆಲಸಗಳನ್ನು ಮಾಡಲು ಚಾತು ಬೇರೆ ಇದ್ದ. ಗುಡಿಸುವುದು, ಸಾರಿಸುವುದು, ಹಾಲ ಗರೆಯುವುದು ಮೊದಲಾದ ಕೆಲಸಗಳಿಗೆ ಅವಳು ಕೈ ಹಚ್ಚಿದರೆ

ಯಂಬ್ರಾಂದ್ರಿ, "ಲಕ್ಷ್ಮಿಕ್ಕ ಬೇಡ; ನೀನು ದೊಡ್ಡ ತರವಾಡಿನಲ್ಲಿ ಬಳೆದವಳು; ನೀನು ಹೀಗೆ ಕೆಲಸ ಮಾಡಿದರೆ ನಿನ್ನ ಮೈ ಬಳಲೀತು; ಕೈ ಒರಟಾದೀತು!" ಎಂದು ಹೇಳಿ ಆಕೆಯನ್ನು ತಡೆಯುತಿದ್ದರು.

"ಹೊತ್ತು ಕಳೆಯುವುದಕ್ಕೋಸ್ಕರವಾಗಿಯಾದರೂ ನಾನು ಏನಾದರೊಂದು ಕೆಲಸ ಮಾಡಬೇಕಲ್ಲ!" ಲಕ್ಷ್ಮಿಕ್ಕ ಉದ್ಗಾರವೆತ್ತುತಿದ್ದಳು.

ಅವಳಾಡಿದ ನುಡಿ ದಿಟವಾಗಿತ್ತು. ಅವಳು ಏನೂ ಕೆಲಸ ಮಾಡದೆ ಸುಮ್ಮನೆ ಕುಳಿತರೆ ನಾಯಕ ಅವಳ ಮುಂದೆ ಸುಳಿಯುತಿದ್ದ. ಆಕೆಯನ್ನು ಕಾಡುತಿದ್ದ.

ಯಂಬ್ರಾಂದ್ರಿ ಹಳ್ಳಿಯ ಶಾಲೆಯ ಉಪಾಧ್ಯಾಯರನ್ನು ಕೇಳಿ ಲಕ್ಷ್ಮಿಕ್ಕಗೆ ಓದಲೆಂದು ಕೆಲವು ಮಲಯಾಳಿ ಪುಸ್ತಕ ತಂದು ಕೊಟ್ಟರು. ಆಕೆ ಓದಿನಲ್ಲಿ ವೇಳೆಯನ್ನು ಕಳೆಯತೊಡಗಿದಳು. ಓದಿ ಬೇಸರ ಹತ್ತಿದಾಗ ಮನೆ ಮುಂದಿನ ಹೂದೋಟದಲ್ಲಿ ಕೆಲಸ ಮಾಡುತಿದ್ದಳು. ಅವಳು ಮಠವನ್ನು ಸೇರಿದಂದಿನಿಂದ ಮನೆಯ ಶೋಭೆ ಹೆಚ್ಚಿತು. ಹೂದೋಟ ಅಂದ ಚಂದಗಳ ಆಗರವಾಯಿತು. ಅವಳು ಹೂದೋಟದಲ್ಲಿ ದುಡಿಯುವುದನ್ನು ಕಂಡು ಯಂಬ್ರಾಂದ್ರಿ ತುಟಿಗಳ ಮುಗುಳ್ನಗುಪನ್ನು ತಂದುಕೊಳ್ಳುತಿದ್ದರು. ಅವರು, "ಲಕ್ಷ್ಮಿಕ್ಕ ನೀನು ನನ್ನ ಭಾಗ್ಯ ಲಕ್ಷ್ಮಿಕ್ಕೀ! ನೀನು ಈ ನನ್ನ ಮಠವನ್ನು ನಂದನವನ್ನಾಗಿ ಮಾಡಿವೆ!" ಎಂದು ಉದ್ಗಾರವೆತ್ತುತಿದ್ದರು.

ಈ ಹೊಗಳಿಕೆಯನ್ನು ಕೇಳಿದಾಗ ಲಕ್ಷ್ಮಿಕ್ಕಯ ಕೆನ್ನೆಗಳಿಗೆ ಅಭಿಮಾನದ ರಂಗೇರುತಿದ್ದಿತು. ಮರುಕ್ಷಣದಲ್ಲಿ ಚಿಂತೆಯ ಮುಗಿಲು ಅವಳ ಮುಖಚಂದ್ರಮನನ್ನು ಆವರಿಸುತಿದ್ದಿತು. ಈ ಸ್ತುತಿವಚನ ಯಂಬ್ರಾಂದ್ರಿಯ ಕೊರಳಿನಿಂದ ಬರುವುದರ ಬದಲು ನಾಯಕನ ಕಂಠದಿಂದ ಬಂದಿದ್ದರೆ ತಾನು ಎಷ್ಟು ಹಿಗ್ಗುತಿದ್ದೆ ಎಂದು ಅವಳು ತನ್ನಲ್ಲಿಯೇ ನೆನೆಯುತಿದ್ದಳು.

ಲಕ್ಷ್ಮಿಕ್ಕಯ ಮೊಗ ಬಾಡಿದುದನ್ನು ಯಂಬ್ರಾಂದ್ರಿಯ ಕಣ್ಣುಗಳು ಕಾಣದೆ ಇರಲಿಲ್ಲ. ಅವರು, "ಲಕ್ಷ್ಮಿಕ್ಕೀ, ನನ್ನ ಮಾತು ನಿನಗೆ ಮೆಚ್ಚಿಕೆಯಾಗಲಿಲ್ಲವೇ? ನನ್ನ ಹೊಮ್ಮರೆಯ ಮೊರೆಯನ್ನು ಮುಗಿಲು ಕವಿದಿ

ನಲ್ಲ !" ಎಂದು ಉದ್ಗಾರವೆತ್ತಿದರು.

ಲಕ್ಷ್ಮಿಯ ಅಂತರಂಗದಲ್ಲಿ ಲಜ್ಜೆ ದುಃಖಗಳ ತರಂಗಗಳೆದ್ದುವು. ಅವಳು, "ನೀವಾಡಿದ ನುಡಿಗಳು ನಾಯಕನ ತುಟಿಗಳನ್ನು ಬಿರಿದು ಬಂದಿದ್ದರೆ ನಾನೆಷ್ಟು ಹಿಗ್ಗುತ್ತಿದ್ದೆ !" ಎಂದು ಯಂಬ್ರ್ರಾಂದ್ರಿಗೆ ಯಾವ ಬಾಯಿಯಿಂದ ಹೇಳಿಯಾಳು? ಅವಳು ಯಂಬ್ರ್ರಾಂದ್ರಿಯ ಕಣ್ಣ ನೋಟ ವನ್ನು ಇದುರಿಸಲಾಗದೆ ಮರೆಗೆ ಸರಿದಳು.

ಯಂಬ್ರ್ರಾಂದ್ರಿಗಳು ರಸಿಕರೂ ಹೌದು; ವಿದ್ಯಾವಂತರೂ ಹೌದು. ಅವರು ಉಡುಪಿಯ ಸಂಸ್ಕೃತ ಕಾಲೇಜಿನಲ್ಲಿ ಎಂಟು ವರ್ಷ ಸಂಸ್ಕೃತ ಅಭ್ಯಾಸ ಮಾಡಿದ್ದರಂತೆ. ಅವರು ಸಂಸ್ಕೃತ ಗ್ರಂಥಗಳನ್ನು ಲೀಲಾ ಜಾಲವಾಗಿ ಓದಬಲ್ಲರು; ಓದಿ ಅರ್ಥ ಹೇಳಬಲ್ಲರು. ಮನೆ ಯೊಳಗೆ ಒಂದು ಪೆಟ್ಟಿಗೆ ತುಂಬಾ ಸಂಸ್ಕೃತ ಗ್ರಂಥಗಳೇ ಇದ್ದುವು. ಈ ಹೊತ್ತಗೆಗಳ ಗುಡ್ಡೆಯನ್ನು ನೋಡಿ ಲಕ್ಷ್ಮಿಗೆ ಆಶ್ಚರ್ಯವಾಯಿತು. ಅವಳು ವಿಸ್ಮಯಾಕುಲಳಾಗಿ "ನೀವು ಈ ಪಾಟಿ ಪುಸ್ತಕಗಳನ್ನು ಓದಿ ರುವಿರಾ?" ಎಂದು ಕೇಳಿದಳು.

"ಓದಿದುದು ಮಾತ್ರವಲ್ಲ; ಅವುಗಳಲ್ಲಿ ಮುಖ್ಯವಾದ ಭಾಗ ಗಳನ್ನು ಬಾಯಿಪಾಠ ಸಹ ಹೇಳಬಲ್ಲೆ !" ಎಂದು ಅವರು ಹೇಳಿದುದು ಮಾತ್ರವಲ್ಲ; ಅವರು ತಮ್ಮ ಮನೋಮೋಹಕ ದನಿಯಲ್ಲಿ "ಅಸ್ತ್ಯು ತ್ತರದಿಶಾ" ಎಂಬ ಆದಿಶ್ಲೋಕವನ್ನು ತೊಡಗಿ ಪ್ರಥಮ ಸರ್ಗ ಮುಗಿ ಯುವವರೆಗೆ ಕುಮಾರಸಂಭವವನ್ನು ತಡೆತೊಡಕುಗಳಿಲ್ಲದೆ ಹೇಳಿದರು. ಅವರು ಅಂದ ಶ್ಲೋಕಗಳು ಲಕ್ಷ್ಮಿಗೆ ಅರ್ಥವಾಗದೇ ಹೋದರೂ ಅವು ಕರ್ಣಮಧುರವಾಗಿ ತೋರಿದುವು. ಅವರು ಪ್ರಥಮ ಸರ್ಗವನ್ನು ಹೇಳಿ ಮುಗಿಸಿ "ಲಕ್ಷ್ಮೀ ನೀನು, ಸಂಸ್ಕೃತವನ್ನು ಕಲಿಯಬೇಕು; ಅದರಷ್ಟು ಸೊಗಸಾದ ಭಾಷೆ ಬೇರೊಂದಿಲ್ಲ. ಆ ಭಾಷೆಯಲ್ಲಿ ಎಷ್ಟು ಸೊಗಸಾದ ನಾಟಕಗಳಿವೆ; ಕಾವ್ಯಗಳಿವೆ !" ಎಂದು ನುಡಿದರು.

"ನೀವು ಇಷ್ಟೊಂದು ಬಲ್ಲವರು ಎಂಬುದು ನನಗೆ ಅರಿವೇ ಇರ ಲಿಲ್ಲ !" ಲಕ್ಷ್ಮಿ ಬೆರಗು ತುಂಬಿದ ದನಿಯಲ್ಲಿ ಉದ್ಗಾರವೆತ್ತಿದಳು.

ಅಂದಿನಿಂದ ಇರುಳು ಊಟವನ್ನು ಮುಗಿಸಿದ ಮೇಲೆ ಯಂಬ್ರ್ರಾಂದ್ರಿ

ತಾವು ಅಭ್ಯಾಸ ಮಾಡಿದ ಕಾವ್ಯ ನಾಟಕಗಳ ಕತೆಗಳನ್ನು ತಾಂಬೂಲ ಮೆಲ್ಲುತ್ತಾ ಲಕ್ಷ್ಮಿಗೆ ಹೇಳಿಕೊಡತೊಡಗಿದರು. ಅವರು ಹೇಳುವ ಶೈಲಿ ಯಾದರೂ ಸೊಗಸಾದುದು; ವಿನೂತನವಾದುದು. ಬೇಸರಿಕೆಯನ್ನು ತರುವಂತಹದಲ್ಲ. ಅವರು ಮಾಲತೀ ಮಾಧವರ ನಾಟಕ ಕತೆಯನ್ನು ತಿಳಿಸಿದರು; ಮೃಚ್ಛಕಟಿಕವನ್ನು ವಿವರಿಸಿದರು; ಶಾಕುಂತಲವನ್ನು ಬಣ್ಣಿಸಿದರು. ಅವರು ಈ ನಾಟಕ ಕತೆಗಳನ್ನು ಹೇಳುವಾಗ ತಾವು ಮಾಧವ, ಲಕ್ಷ್ಮಿ ಮಾಲತಿ; ತಾವು ಚಾರುದತ್ತ, ಲಕ್ಷ್ಮಿ ವಸಂತಸೇನೆ; ತಾವು ದುಷ್ಯಂತ, ಲಕ್ಷ್ಮಿ ಶಕುಂತಲೆ ಎಂಬ ಭಾವವನ್ನು ಇಟ್ಟುಕೊಂಡು ಹೇಳುತ್ತಿರುವರೆಂದು ಲಕ್ಷ್ಮಿಗೆ ಅನಿಸಿತು. ಕತೆಯನ್ನು ಮುಗಿಸಿಯಾದ ಮೇಲೆ ಅವರು ನಿಟ್ಟುಸಿರೊಂದನ್ನು ಹೊರಚೆಲ್ಲುತಿದ್ದರು. ಅವರ ಕಣ್ಣು ಗಳಿಂದ ಹೊಮ್ಮಿದ ತೀಕ್ಷ್ಣ ಪ್ರಭೆಯೊಂದು ಆಕೆಯ ಮೋರೆಯನ್ನು ಇರಿಯುತಿದ್ದಿತು.

ಲಕ್ಷ್ಮಿ ಯಂಬ್ರಾಂದ್ರಿಯ ಪೇರುಸಿರನ್ನು ಅವರ ಕಣ್ಣುಗಳ ತೀಕ್ಷ್ಣ ಪ್ರಭೆಯನ್ನು ಅರ್ಥಮಾಡಿಕೊಳ್ಳುತಿದ್ದಳು. ಅವರ ನೋಟವನ್ನು ಇದು ರಿಸಲಾಗದೆ ಮುಖವನ್ನು ಬೇರೊಂದು ದಿಕ್ಕಿಗೆ ತಿರುಗಿಸುತಿದ್ದಳು. ತನ ಗೋಸುಗ ಅವರು ಎಷ್ಟೊಂದು ಆಶೆ ಪಡುತಿದ್ದಾರೆ; ತಾವು ಕೊಟ್ಟ ಭಾಷೆಯನ್ನು ಮುರಿಯಲಾಗದೆ ಅಂತರಂಗದಲ್ಲಿಯೇ ಎಷ್ಟೊಂದು ಹೊಯ್ದಾಡುತಿದ್ದಾರೆ ಎಂದು ಲಕ್ಷ್ಮಿ ಊಹಿಸುತಿದ್ದಳು. ಅವರ ಸ್ಥಿತಿ ಯನ್ನು ಕಂಡು ಆಕೆಯ ಅಂತರಂಗದಲ್ಲಿ ಮರುಕ ಹುಟ್ಟುತಿದ್ದಿತು. ಇಷ್ಟು ಒಳ್ಳೆಯ ಮನುಷ್ಯನ ಬಯಕೆಯನ್ನು ತಾನು ತಣಿಸಲಾರೆನಲ್ಲ ಎಂದು ತನ್ನನ್ನೇ ಹಳಿದುಕೊಳ್ಳುತಿದ್ದಳು. ಯಂಬ್ರಾಂದ್ರಿಯ ವಿಷಯದಲ್ಲಿ ತಲೆ ದೋರುತ್ತಿರುವ ಮರುಕ; ಅವರ ವಿಚಾರದಲ್ಲಿ ಒಡಮೂಡಿದ ಆದರ, ಇವೆಲ್ಲ ತನ್ನ ನಿರ್ಧಾರವನ್ನು ತುಂಡುಗೈದು ಬಿಡುವುದೋ ಎಂದು ಅವಳು ಅಂಜದಿರಲಿಲ್ಲ.

ಚಿರುತೆ ಮಾವನ ಮನೆಗೆ ಮರಳಿದ ಮೇಲೆ ಯಂಬ್ರಾಂದ್ರಿಯೂ ಲಕ್ಷ್ಮಿಯೂ ಒಂದೇ ಕೋಣೆಯಲ್ಲಿ ಮಲಗುತಿದ್ದರು. ಯಂಬ್ರಾಂದ್ರಿಯ ಮಠದಲ್ಲಿ ಮಂಚಗಳಿರಲಿಲ್ಲ. ನೆಲದ ಮೇಲೆಯೇ ಹಾಸಿಗೆಗಳನ್ನು ಹಾಕಿ

ಕೊಳ್ಳುತ್ತಿದ್ದರು. ಎರಡು ಹಾಸಿಗೆಗಳ ನಡುವೆ ಕೇವಲ ಒಂದು ಮಾರಿನಷ್ಟು ಅಂತರವಿರುತ್ತಿದ್ದಿತು. ಈಗ ಲಕ್ಷ್ಮಿಯ ಮೇಲೆ ಕೈ ಮಾಡಲು ಯಂಬ್ರಾಂದ್ರಿಗೆ ಯಾವ ತಡೆಯೂ ಇರಲಿಲ್ಲ. ಆದರೂ ಅವರು ಆಕೆಯ ಮೈಯನ್ನು ಸೋಂಕದೆ ಬಹು ಸಂಯಮದಿಂದ ನಡೆದುಕೊಂಡಿದ್ದರು. ತಾವು ಕೊಟ್ಟ ಭಾಷೆಯನ್ನು ಪಾಲಿಸಿಕೊಂಡು ಬಂದಿದ್ದರು. ಅವರು ಇರುಳು ಮಲಗಿದ ಮೇಲೆ ತಾವು ಸಂಸ್ಕೃತ ಕಾವ್ಯಗಳನ್ನು ಓದಿ ತಿಳಿದ ಪುರಾಣ ಕತೆಗಳನ್ನು ಹೇಳುತ್ತಿದ್ದರು. ಆ ಕತೆಗಳನ್ನು ಕೇಳುತ್ತಾ ಲಕ್ಷ್ಮಿ ನಿದ್ರೆ ಹೋಗುತ್ತಿದ್ದಳು.

ಒಂದು ಇರುಳು ಲಕ್ಷ್ಮಿಗೆ ನಿದ್ರಾಭಂಗವಾಯಿತು. ಕೃಷ್ಣಪಕ್ಷದ ರಾತ್ರಿಯಾದುದರಿಂದ ಬೆಳದಿಂಗಳು ಕಿಟಕಿಯ ಸಂದಿನಿಂದ ನುಸುಳಿ ಬರುತ್ತಿರಲಿಲ್ಲ. ಕೋಣೆ ತುಂಬಾ ಕತ್ತಲೆ ಪಸರಿಸಿತ್ತು. ಲಕ್ಷ್ಮಿಗೆ ತನ್ನ ಗಲ್ಲಕ್ಕೆ ತುಟಿಸೋಂಕಿದಂತೆ ಅನಿಸಿತು. ಯಂಬ್ರಾಂದ್ರಿ ತಮ್ಮ ಹಾಸಿಗೆಯನ್ನು ಬಿಟ್ಟು ತನ್ನ ಬಳಿಗೆ ಬಂದಿರುವರೆಂದು ಅವಳು ತಿಳಿದಳು. ಅವಳ ಎದೆ ತೀವ್ರಗತಿಯಿಂದ ಬಡಿದುಕೊಂಡಿತು.:

"ತನ್ನ ರಕ್ಷಣೆಯನ್ನು ಮಾಡಿಕೊಳ್ಳಲಾಗದ ಹೆಣ್ಣೊಂದು ನಿಮ್ಮ ಕೈಗೆ ಸಿಕ್ಕಿದೆ ಎಂದು ಕೊಟ್ಟ ಮಾತನ್ನು ಮುರಿದಿರಾ?" ಎಂದು ಕೇಳಬೇಕೆಂದು ಲಕ್ಷ್ಮಿ ಬಾಯ್ದೆರೆದಳು. ಆದರೆ ನಾಲಗೆಯ ತುದಿಗೆ ಬಂದ ಮಾತು ಅಲ್ಲಿಯೇ ನಿಂತಿತು. ಕೊಟ್ಟ ಮಾತನ್ನು ಮೀರಲಾಗದೆ ಯಂಬ್ರಾಂದ್ರಿ ತನಗಿಂತ ಸಾವಿರ ಪಾಲು ಬವಣೆಪಡುತ್ತಿರುವರೆಂದು ಅವಳಿಗೆ ತಿಳಿಯಿತು. ಅವರು ಮುಂದೇನು ಮಾಡುವರೆಂದು ಕಾದು ನೋಡೋಣವೆಂದು ಅವಳು ನಾಲಗೆಯನ್ನು ಬಿಗಿ ಹಿಡಿದಳು.

ಯಂಬ್ರಾಂದ್ರಿ ಲಕ್ಷ್ಮಿಯ ಎರಡು ಕಪೋಲಗಳನ್ನೂ ಆಕೆಯ ತುಟಿಗಳನ್ನೂ ಬಹು ಮಿದುವಾಗಿ ಚುಂಬಿಸಿದರು. ನಿಡುಸುಯ್ಲೊಂದು ಅವರ ಎದೆಯಿಂದ ಹೊರಹೊಮ್ಮಿತು. ಅವರ ಅಂತರಂಗದ ಹೊಯ್ದಾಟ ಈ ಪೇರುಸಿರ ರೂಪವನ್ನು ತಾಳಿ ಹೊರಬಂದಿತ್ತು. ಅವರು ಹಿಂದೆ ಸರಿದು ತಮ್ಮ ಹಾಸಿಗೆಯ ಮೇಲೆ ಹೊರಳಿದರು. ಅವರು ಪಡುತ್ತಿರುವ ಬವಣೆಯನ್ನು ಆಲೋಚಿಸಿ ಲಕ್ಷ್ಮಿಗೆ ಅಯ್ಯೋ ಎನಿಸಿತು.

ಮಗದೊಂದು ರಾತ್ರಿಯ ಸ್ಮೃತಿ ಲಕ್ಷ್ಮಿಯ ಚಿತ್ತದಲ್ಲಿ ತೇಲಿತು: ಹೊರಗೆ ನೆಲವೆಲ್ಲ ಬೆಳದಿಂಗಳಿನ ಹೊನಲಲ್ಲಿ ಈಸುತಿದ್ದಿತು. ಹೊರಗೆ ಹೂದೋಟದಲ್ಲಿದ್ದ ಕುಸುಮಗಳ ಸವಿಗಂಪು ಕೋಣೆಯೊಳಗೆ ಸುಳಿದು ಬಂದು ಜೀವವನ್ನು ಆಹ್ಲಾದಗೊಳಿಸುತಿದ್ದಿತು. ಲಕ್ಷ್ಮಿ ಹೂಗಳ ಸೌರಭ ದೊಡನೆ ಯಂಬ್ರಾಂದ್ರಿ ಹೇಳಿದ ಮಾಲತಿಮಾಧವರ ಕತೆಯನ್ನು ಕೇಳುತ್ತಾ ನಿದ್ದೆ ಹೋದಳು.

ತಾನು ಎಷ್ಟು ಹೊತ್ತು ನಿದ್ದಿಸುತಿದ್ದೆನೆಂಬುದು ಲಕ್ಷ್ಮಿಗೆ ತಿಳಿಯದು. ಕೊನೆಯಲ್ಲಿ ಅವಳು ಕನಸೊಂದನ್ನು ಕಂಡಳು. ಕನಸಿನಲ್ಲಿ ನಾಯಕ ತಾನು ಮರದಿಂದ ಕಿತ್ತು ತಂದ ನೇರಳೆ ಹಣ್ಣುಗಳನ್ನು ತನ್ನ ಪ್ರಾಣಪ್ರಾತಿಯ ಕೈಗೆ ನೀಡಿದ್ದ. ಅವಳು ಅವನಿತ್ತ ಮುತ್ತುಗದ ದೊನ್ನೆಯಲ್ಲಿ ತುಂಬಿದ ನೇರಳೆ ಹಣ್ಣುಗಳನ್ನು ಹೆಕ್ಕಿ ತನ್ನ ಬಾಯೊಳಗೆ ಹಾಕಿಕೊಳ್ಳುತಿದ್ದಳು. ಅವಳು ಹಣ್ಣುಗಳನ್ನು ಮೆಲ್ಲುತ್ತಾ, "ನಾಯಕ, ಇಷ್ಟು ಸವಿಯಾದ ಹಣ್ಣುಗಳನ್ನು ನೀನೆಲ್ಲಿಂದ ಆರಿಸಿತಂದೆ?" ಎಂದು ಕೇಳಿದಳು.

"ಈ ಹಣ್ಣುಗಳಿಗಿಂತ ನೂರುಪಾಲು ಸವಿಯಾದ ಹಣ್ಣನ್ನು ನಾನು ಆರಸಿ ಇರಿಸಿದ್ದೇನೆ!" ಕುರುಬನ ಕಣ್ಣುಗಳಿಂದ ಹರಿದ ಕೊಂಕು ನೋಟದ ಬೆಳಕು ಲಕ್ಷ್ಮಿಯ ಮೋರೆಯ ಮೇಲೆ ಬಿದ್ದಿತು. "ಆ ಹಣ್ಣೇ ಇದು!" ಎಂದು ನಾಯಕ ತೋಳು ಚಾಚಿ ಲಕ್ಷ್ಮಿಯನ್ನು ತನ್ನ ಎದೆ ಗಪ್ಪಿಕೊಂಡು ಆಕೆಯ ಕೆಂದುಟಿಯ ಜೇನನ್ನು ಸವಿದ.

ಲಕ್ಷ್ಮಿಯ ಅಂತರಂಗ ನಲಿವಿನ ಕಡಲಾಯಿತು. ಅವಳು ನಾಯಕ ನನ್ನು ಆಲಂಗಿಸಲೆಂದು ತೋಳು ಚಾಚಿದಳು; ಆತನನ್ನು ತನ್ನ ಎದೆಗೆ ಅಪ್ಪಿಕೊಂಡಳು.

ನಾಯಕನನ್ನು ಅಪ್ಪಿಕೊಳ್ಳುತ್ತಿರುವೆನೆಂದು ಕನಸಿನಲ್ಲಿ ಭಾವಿಸಿದ ಲಕ್ಷ್ಮಿ ಯಂಬ್ರಾಂದ್ರಿಯ ಕಡೆ ಹೊರಳಿದಳು. ಅವಳ ತೋಳು ಯಂಬ್ರಾಂದ್ರಿಯ ಮೈಯನ್ನು ಸೋಂಕಿತು. ಅವರು ಬಹು ದಿನಗಳಿಂದ ನಿರೀಕ್ಷಿಸುತಿದ್ದ ರತಿಕೇಳಿಗೆ ಅದೇ ಆಹ್ವಾನವಾಯಿತು.

ಕನಸಿನ ಅಮಲಿನಲ್ಲಿಯೇ ಲಕ್ಷ್ಮಿ ಯಂಬ್ರಾಂದ್ರಿಗೆ ಮೈತೆತ್ತಳು. ತನ್ನೊಡನಿರುವುದು ನಾಯಕನಲ್ಲ; ಯಂಬ್ರಾಂದ್ರಿ ಎಂಬುದು ಅರಿ

ವಾದಾಗ ಆಕೆಯ ದೇಹ ಪೂರ್ತಿಯಾಗಿ ಯಂಬ್ರಾಂದ್ರಿಯ ವಶವಾಗಿ ಹೋಗಿತ್ತು.

ಮರುದಿನ ಲಕ್ಷ್ಮಿ ಇರುಳು ಒದಗಿದ ಅನರ್ಥವನ್ನು ನೆನೆದು ಕಣ್ಣೀರು ಹಾಕಿದಳು. ಈಸು ದಿನಗಳತನಕ ಹೃದಯದೇಗುಲದಲ್ಲಿರಿಸಿ ಆರಾಧಿಸುತಿದ್ದ ನಲ್ಲನಿಗೆ ದ್ರೋಹ ಬಗೆದೆನಲ್ಲ ಎಂದು ಅವಳು ಹಲುಬಿದಳು. ಇಷ್ಟರವರೆಗೆ ತನ್ನ ಸುತ್ತಲೂ ಒಂದು ಕೋಟೆಯನ್ನು ಕಟ್ಟಿಕೊಂಡು ತನ್ನ ಒಲವಿನ ಪರಿಶುದ್ಧತೆಯನ್ನು ಕಾಪಾಡಿಕೊಂಡಿದ್ದಳು. ಆದರೆ ಹೋದ ಇರುಳು ಒಂದು ಕ್ಷಣದಲ್ಲಿ, ಅವಳು ಸಮೆದ ಕಾಪಿನ ಕೋಟೆ ಹುಡಿಯಾಗಿ ಹೋಗಿತ್ತು! ಅವಳು ರಕ್ಷಿಸುತಿದ್ದ ಅಮೂಲ್ಯ ನಿಧಿ ಅಪಹೃತವಾಗಿ ಹೋಗಿತ್ತು! ಅವಳೀಗ ಯಾರನ್ನು ದೂರಬೇಕು? ಕಣ್ಣಿಗಳಿಂದ ಸುರಿದ ಬಾಷ್ಪಸ್ರೋತವೇ ಎದೆಯಕಿಚ್ಚನ್ನು ಆರಿಸಲಿರುವ ಜಲಾಭಿಷೇಕವಾಯಿತು!

ಲಕ್ಷ್ಮಿ, "ನಾಯಕ, ನೀನೇ ನನಗೆ ಮೋಸಮಾಡಿದೆ. ನೀನೇಕೆ ಕನಸಿನಲ್ಲಿ ಸುಳಿದೆ? ನನ್ನನ್ನೇಕೆ ಸರಸಕ್ಕೆ ಕರೆದೆ? ಬಂದವ ನೀನೆಂದು ಬಗೆದು ನನ್ನ ಅಮೂಲ್ಯ ರತ್ನ ಭಂಡಾರವನ್ನು ಆತನಿಗೊಪ್ಪಿಸಿದೆ!" ಎಂದು ಹಲುಬಿದಳು.

ಆ ದಿನ ಆಕೆಗೆ ಯಂಬ್ರಾಂದ್ರಿಯ ಮೋರೆಯನ್ನು ದಿಟ್ಟಿಸಿನೋಡಲು ಧೈರ್ಯವಾಗಲಿಲ್ಲ. ಅವಳು ಯಂಬ್ರಾಂದ್ರಿಯ ಕಣ್ಣನೋಟವನ್ನು ತಪ್ಪಿಸಿದಳು. ಅವರ ಪ್ರಶ್ನೆಗಳಿಗೆ ಸರಿಯಾಗಿ ಮರುಮಾತುಗೊಡದೆ, "ಹಾ, ಹೂ" ಎಂದು ಮಾರುಲಿದಳು. ಆಕೆಯಲ್ಲಾದ ಭಾವಭೇದವನ್ನು ಯಂಬ್ರಾಂದ್ರಿ ಕಾಣದೆ ಇರಲಿಲ್ಲ. ಅವರು, "ಲಕ್ಷ್ಮೀ ಈ ದಿನ ನೀನು ದುಗುಡದ ಮುದ್ದೆಯೇ ಆಗಿರುವೆಯಲ್ಲ?" ಎಂದು ಕೇಳಿದರು.

"ನೀವು ತಿಳಿದವರು; ಕೊಟ್ಟ ಭಾಷೆಯನ್ನು ಮೆಟ್ಟನಿಲ್ಲಬಹುದೇ?"

"ಲಕ್ಷ್ಮಿ, ನಾನೇನು ಕೊಟ್ಟ ಮಾತನ್ನು ಮುರಿಯಲಿಲ್ಲ." ಯಂಬ್ರಾಂದ್ರಿ ಗಂಭೀರ ಧ್ವನಿಯಲ್ಲಿ ನುಡಿದರು: "ನಾನು ಕೊಟ್ಟ ಭಾಷೆಯನ್ನು ನಡೆಸಿದ್ದೇನೆ. ನೀನೇ ನನ್ನ ಕರೆದೆ."

"ನಾನು ಕರೆದೆನೇ?" ಲಕ್ಷ್ಮಿಯ ಕಣ್ಣುಗಳಿಂದ ವಿಸ್ಮಯದ

ಕಿಡಿಗಳು ಉದುರಿದುವು.

"ಹೌದು! ನೀನು ತೋಳು ಚಾಚಿ ನನ್ನ ತಬ್ಬಿಕೊಂಡೆಯಲ್ಲ? ಅದು ಕರೆಯಲ್ಲವೆ?"

ಲಕ್ಷ್ಮಿಯ ಕೊರಳಿಂದ ಮಾರ್ದನಿ ಹೊರಡಲಿಲ್ಲ. ಯಂಬ್ರಾಂದ್ರಿ ಸುಳ್ಳಾಡರೆಂಬುದನ್ನು ಅವಳು ಬಲ್ಲಳು. ತಾನು ಇರುಳು ಕಂಡ ಕನಸೇ ತನ್ನನ್ನು ಮೋಸಗೊಳಿಸಿತೆಂದು ಅವಳಿಗೆ ಖಚಿತವಾಯಿತು.

ಮುಂದೇನು ಎಂದು ಅವಳು ಆಲೋಚಿಸಿದಳು. ಅವಳಿಗೆ ಇದ್ದುದು ಎರಡೇ ಹಾದಿ. ಮೊದಲನೆಯದು ಯಂಬ್ರಾಂದ್ರಿಯನ್ನು ತೊರೆದು ನಾಯಕನ ಆಸರೆಯನ್ನು ಪಡೆದು ಆತನ ಬಡತನದ ಬಾಳ್ವೆಯಲ್ಲಿ ಪಾಲು ಗಾರಳಾಗಬೇಕು; ಇಲ್ಲವೇ ಯಂಬ್ರಾಂದ್ರಿಗೆ ಹೊಂದಿಕೊಂಡು ಬಾಳ ಬೇಕು. ಮೊದಲಿನ ಮಾರ್ಗ ನಾಯಕನಿಗೆ ಕೇಡು ತರುವುದು. ಮಾವ ನಾದರೋ ಹಟವಾದಿಗಳು. ತರವಾಡಿನ ಮಾನ ಕಳೆದನೆಂಬ ರೋಷ ದಿಂದ ಅವರು ಸುಳ್ಳು ದೂರು ಹೊರಿಸಿ ನಾಯಕನನ್ನು ಸೆರೆಮನೆಗೆ ಕಳುಹಲೂ ಹಿಂಜರಿಯರು! ಆಗ ತಾನು ದಿಕ್ಕಿಲ್ಲದವಳಾಗುವೆನು ಎಂದು ಅವಳು ನೆನೆದಳು.

## ೨೩

ಮತ್ತೆರಡು ತಿಂಗಳುಗಳು ಸಾಗಿ ಹೋದುವು. ಈಗ ಲಕ್ಷ್ಮಿ ಯಂಬ್ರಾಂದ್ರಿಯ ಬಾಳ್ವೆಯಲ್ಲಿ ಪಾಲುಗಾರಳಾಗಿ ನಾಯಕನನ್ನು ಮರೆಯಲು ಪ್ರಯತ್ನಿಸುತ್ತಿದ್ದಾಳೆ. ಅವ ನೊಡನೆ ತಾನು ನಡೆಸಿದ ಸರಸ ಚೆಲ್ಲಾಟಗಳನ್ನು ಹಳೆಯ ಕನಸೊಂದು ಎಂದು ಎಣಿಸತೊಡಗಿದ್ದಾಳೆ. ತನ್ನ ಮೈಮನಗಳನ್ನು ಯಂಬ್ರಾಂದ್ರಿಯ ಸೇವೆಗೆ ಮೀಸಲಾಗಿಸಲು ಹವಣಿಸುತ್ತಿದ್ದಾಳೆ. ಮೈ ಯನ್ನೇನೋ ಆಕೆ ಬಹು ಸುಲಭವಾಗಿ ಯಂಬ್ರಾಂದ್ರಿಯ ಅಡಿಗಳಲ್ಲಿ ಅರ್ಪಿಸಿದಳು. ಆದರೆ ಮನಸ್ಸು ಮಾತ್ರ ಆಕೆಯ ಅಂಕೆಗೆ ಒಳಗಾಗಲೊ ಲ್ಲದು. ನಾಯಕ ಆಕೆಯ ಕಣ್ಣಮುಂದೆ ಸುಳಿದು, "ಪಾಪಾತಿ, ನೀವು

ಒಡಲನ್ನೇನೋ ತಂಬ್ರಾಕಳಿಗೆ ಸುಲಭವಾಗಿ ಒಪ್ಪಿಸಿದಿರಿ; ಆದರೆ ನಿಮ್ಮ ಮನಸ್ಸನ್ನು ಅಷ್ಟು ಸುಲಭವಾಗಿ ಒಪ್ಪಿಸಲು ನಾನು ಬಿಡಲೊಲ್ಲೆ!" ಎಂದು ಹಟ ಹಿಡಿದು ಹೇಳುತಿದ್ದಾನೆ.

ಲಕ್ಷ್ಮಿ ಪೇರುಸಿರೊಂದನ್ನು ಹೊರಚೆಲ್ಲಿದಳು. ಅವಳು ಗೋಳಿ ಮರದ ನೆರಳನ್ನು ಸೇರಿ ಒಂದು ಗಳಿಗೆಗಿಂತಲೂ ಹೆಚ್ಚು ಸಮಯ ಕಳೆದಿತ್ತು. ಆದರೂ ಆಕೆಗೆ ನಾಯಕನ ನೇರಿಲೆ ಬಣ್ಣದ ಮೋರೆ ಗೋಚರಿಸಲೊಲ್ಲದು. ಜಾತ್ರೆಯಲ್ಲಿ ಚಿರುತೆ ತನ್ನ ಗೋಪ್ಯಸಂದೇಶವನ್ನು ಆತನಿಗೆ ಮುಟ್ಟಿಸದೆ ಇರಲಾರಳು; ಆದರೂ ಅವನೇಕೆ ಬರಲಿಲ್ಲ? ತನ್ನನ್ನು ಮರೆತು ತಂಬ್ರಾಕಳ ಮಠವನ್ನು ಸೇರಿದ ಪಾಪಾತಿಯ ಗೊಡವೆ ಏಕೆಂದು ಮುನಿಸು ತಾಳಿರಬಹುದೇ ಎಂದು ಅವಳ ಬುದ್ಧಿ ತರ್ಕಿಸಿತು. ಈ ಆಲೋಚನೆ ಚಿತ್ತದಲ್ಲಿ ನುಸುಳಲು ಅವಳ ಮೋರೆಯ ಮೇಲೆ ನಿರಾಶೆಯ ಮಂಜು ಮುಸುಕಿತು.

ಇನ್ನೂ ಒಂದು ಅರೆಗಳಿಗೆ ಕಾದು ನೋಡುವೆನೆಂದು ಅವಳು ಗೋಳಿ ಮರದಡಿಯಲ್ಲಿ ಕುಳಿತಳು. ಅವಳ ಮನಸ್ಸು ಪೂರ್ವ ಸ್ಮೃತಿಗಳನ್ನು ನೆನಪಿಗೆ ತಂದುಕೊಂಡು ಮರಳಿ ಹೊಸೆಯ ತೊಡಗಿತು.

ಯಂಬ್ರಾಂದ್ರಿಯ ಬಾಳ್ವೆಯಲ್ಲಿ ನಲವು ಕುಡಿಯೊಡೆದು ದಾಂಗುಡಿಗಳನ್ನು ನಾಲ್ದೆಸೆಗಳಿಗೆ ಹೊರಚಾಚಿತು. ಅವರ ಹೃದಯ ಸಂತಸದ ಆಗರವಾಯಿತು. ಅವರ ಮುಖ ಪ್ರಸನ್ನತೆಯ ನಿತ್ಯನಿಕೇತನವಾಯಿತು. ಅವರು ತಮ್ಮ ಎದೆಯ ಒಲವಿನ ಅಮೃತ ಕುಂಭವನ್ನೆತ್ತಿ ಲಕ್ಷ್ಮಿಯ ನೆತ್ತಿಗೆ ಧಾರೆ ಎರೆಯುತಿದ್ದರು. ಅವರು ಆಕೆಗೆ ಬಂಗಾರದ ಹಾರವನ್ನು ಮಾಡಿಸಿಕೊಟ್ಟರು. ಕಿವಿಗಳಿಗೆ ವಜ್ರದ ಬೆಂಡೋಲೆಗಳು ಬಂದುವು. ಅವಳ ಮೈಯ ಮಾಟದ ಅಂದವನ್ನು ಹೆಚ್ಚಿಸಲು ರೇಷ್ಮೆ ಕುಪ್ಪಸಗಳು ಬಂದುವು.

"ಈ ಸಾಧನಗಳೆಲ್ಲ ಏಕೆ?" ಲಕ್ಷ್ಮಿ ಕೇಳಿದಳು.

"ನನ್ನ ರತಿದೇವಿಯ ಸೊಬಗನ್ನು ಹೆಚ್ಚಿಸಲು!"

"ಅಂದರೆ ನೀವು ಕಾಮದೇವನೇ?"

"ನೀನು ರತಿದೇವಿಯಾಗಬಲ್ಲೆಯಾದರೆ, ನಾನು ಕಾಮದೇವನೇ

ಸರಿ!"

ಕಾಮದೇವ ಎಂಬ ಉಕ್ತಿ ಲಕ್ಷ್ಮಿಗೆ ನಾಯಕನ ನೆನಪನ್ನು ತಂದೊಡ್ಡಿತು. "ನಿನ್ನ ಕಾಮದೇವ ಯಂಬಾಂದ್ರಿಯಲ್ಲ; ಆನೆಕಾರ ಕುರುಬ ಹುಡುಗ!" ಎಂದು ಅವಳ ಅಂತರಂಗ ನುಡಿದಿತು. ಈ ಭಾವ ಅವರ ಸರಸದ ಹಾಲಿಗೆ ಹುಳಿಯನ್ನು ಬೆರಸಿತು. ಅವಳ ಮೋರೆಯನ್ನು ಚಿಂತೆಯ ಮುಗಿಲು ಆವರಿಸಿತು.

"ನನ್ನ ರತಿದೇವಿಗೆ ಬೇಸರವೇಕೆ?" ಹಾಸ್ಯ ಬೆರೆತ ದನಿಯಲ್ಲಿ ಯಂಬ್ರಾಂದ್ರಿ ಕೇಳಿದರು. ಅವರ ನುಡಿಯ ಸರಳತೆ ಲಕ್ಷ್ಮಿಯ ಎದೆಯನ್ನು ಚುಚ್ಚಿತು. ತಾನು ಯಂಬ್ರಾಂದ್ರಿಯ ಪ್ರೇಮಕ್ಕೆ ತಕ್ಕವಳಲ್ಲ; ಕುರುಬ ಹುಡುಗನಿಗೆ ವೈಮನಗಳನ್ನು ಸೂರೆಗೊಟ್ಟ ಪಾಪಿ ತಾನೆಂದು ಹೇಳಬೇಕೆಂದು ಅವಳಿಗೆ ಅನಿಸಿತು. ಆದರೆ ಉಕ್ಕಿ ಬಂದ ಅಭಿಮಾನ ಅವಳನ್ನು ತಡೆದು ನಿಲ್ಲಿಸಿತು.

ಲಕ್ಷ್ಮಿ ನಾಯಕನನ್ನು ಅರಸಿಕೊಂಡು ಓಡುತ್ತಿರುವ ತನ್ನ ಮನಸ್ಸನ್ನು ಯಂಬ್ರಾಂದ್ರಿಗೆ ಬಿಗಿದು ಕಟ್ಟುವೆನೆಂಬಂತೆ ತೋಳುಗಳನ್ನು ಚಾಚಿ ಯಂಬ್ರಾಂದ್ರಿಯನ್ನು ಬಿಗಿಯಪ್ಪಿದಳು. ಅವರ ತುಟಿಗಳನ್ನು ಮುತ್ತಿಕ್ಕಿದಳು. ಆದರೆ ಆ ಅಪ್ಪುಗೆ ಆಕೆಯ ಅಂತರಂಗದಲ್ಲಿ ನಲವಿನ ತೆರೆಯನ್ನು ಹೊಡೆದೆಬ್ಬಿಸಲಿಲ್ಲ. ಭಾವೋದ್ವೇಗದ ಹೊನಲನ್ನು ಉಕ್ಕಿ ಹರಿಸಲಿಲ್ಲ. ಅವರ ತುಟಿಗಳು ಆಕೆಗೆ ಕಹಿಯಾಗಿ ತೋರಿದುವು.

ಲಕ್ಷ್ಮಿ ಹಗಲು ಹೊತ್ತು ತಮ್ಮನ್ನು ಆಲಿಂಗಿಸಿದುದನ್ನು ಕಂಡು ಯಂಬ್ರಾಂದ್ರಿ ಅಪ್ರತಿಭರಾದರು. ಅವರು ತಮ್ಮ ಮಡದಿ ಹಗಲು ಹೊತ್ತು ಪ್ರಣಯವಿಲಾಸಕ್ಕೆ ಎಳೆಸಬಹುದು ಎಂದು ಎಣಿಸಿರಲಿಲ್ಲ. ಅವರು ಆಕೆಯ ಕೂದಲನ್ನು ನೇವರಿಸುತ್ತಾ, "ಇದೇನು ಹುಚ್ಚು?" ಎಂದು ಉದ್ಗಾರವೆತ್ತಿದರು.

"ಒಡಲು ಮತ್ತು ಪ್ರಾಣಗಳೆರಡೂ ನಿಮ್ಮವು!" ಲಕ್ಷ್ಮಿ ಕಣ್ಣುಗಳಿಂದ ನೀರು ಹರಿಸುತ್ತಾ ಬಿಕ್ಕುದನಿಯಲ್ಲಿ ನುಡಿದಳು.

ಆಕೆಯ ಕಣ್ಣುಗಳಲ್ಲಿ ನೀರು ಮಡುವುಗೊಂಡುದನ್ನು ಕಂಡು ಯಂಬ್ರಾಂದ್ರಿ ಆಕೆ ಮಡಿದ ಗಂಡನ ಸ್ಮರಣೆ ಬಂದುದರಿಂದ ಕಣ್ಣೀರು

ಹಾಕಿದಳು ಎಂದು ಎಣಿಸಿದರು. ಅವರು, " ಲಕ್ಷ್ಮಿ, ಅಗಲಿ ಹೋದವರನ್ನು ನೆನೆಯುವುದರಿಂದ ಮನಸ್ಸು ಕದಡುವುದಲ್ಲದೆ ಬೇರೆ ಯಾವ ಲಾಭವೂ ಇಲ್ಲ! " ಎಂದು ಮಿದುದನಿಯಲ್ಲಿ ನುಡಿದರು.

ಎದೆಯಲ್ಲಿ ಎದ್ದ ಉಮ್ಮಳ ಶಾಂತವಾಗಲು ಲಕ್ಷ್ಮಿ ಯಂಬ್ರಾಂದ್ರಿಯನ್ನು ಬಿಟ್ಟು ದೂರಸರಿದು ನಿಂತಳು. ಅವಳು ಯಂಬ್ರಾಂದ್ರಿಯನ್ನು ಸೋಂಕಿ ಅವರ ಮಡಿಯನ್ನು ಕೆಡಿಸಿದ್ದಳು. ಈಗ ಅವರು ಮರಳಿ ಮಿಂದು ವಸ್ತ್ರಬದಲಿಸಲೆಂದು ನೀರು ಮನೆಗೆ ತೆರಳಿದರು.

ಲಕ್ಷ್ಮಿ ಚಿಂತೆಯ ಹೊರೆಯನ್ನು ಹೊರಲಾಗದೆ ನೆಲದ ಮೇಲೆ ಕುಸಿದಳು. ತನ್ನ ಸೋಂಕಿನಿಂದ ಯಂಬ್ರಾಂದ್ರಿಗೆ ಐತವಾದುದು, ಮೋಡಗಳೆ ಎಡೆಯಲ್ಲಿ ಹೊಳೆದ ಮಿಂಚಿನಂತೆ ನಗುವಿನ ಹೊಳಪನ್ನು ಮಿನುಗಿಸಿತು. ಇರುಳು ತನ್ನನ್ನು ಅಪ್ಪಿಕೊಂಡರೆ ಯಂಬ್ರಾಂದ್ರಿಗೆ ಐತವಿಲ್ಲ; ತನ್ನ ಚುಂಬನದಲ್ಲಿ ಎಂಜಲಿಲ್ಲ; ಆದರೆ ಹಗಲು ಹೊತ್ತು ತಾನು ಅವರನ್ನು ಸ್ಪರ್ಶಿಸಿದರೆ ಅದೇಕೆ ಮೈಲಿಗೆ ಎಂದು ಅವಳು ಪ್ರಶ್ನಿಸಿಕೊಂಡಳು.

ಯಂಬ್ರಾಂದ್ರಿ ಹಗಲು ಹೊತ್ತು ಎಂದೂ ಲಕ್ಷ್ಮಿಯನ್ನು ಸ್ಪರ್ಶಿಸುತ್ತಿರಲಿಲ್ಲ. ಅವರು ದೂರ ನಿಂತೇ ಲಕ್ಷ್ಮಿಯನ್ನು ಮಾತಾಡಿಸುತ್ತಿದ್ದರು. ಒಲವಿಗೂ ಮಡಿ ಮೈಲಿಗೆಗಳ ಕಟ್ಟಿದೆಯೇ ಎಂಬ ಸಂದೇಹ ಅವಳಲ್ಲಿ ತಲೆದೋರಿತು. ಅವರ ವರ್ತನೆ ಆಕೆಗೆ ಬಹು ಕೃತಕವಾಗಿ ಕಂಡಿತು.

ಅಂದು ಲಕ್ಷ್ಮಿ ಯಂಬ್ರಾಂದ್ರಿಯ ತೋಳ ತೆಕ್ಕೆಯಲ್ಲಿದ್ದಾಗ, " ಈಗ ನಿಮಗೆ ಐತವಾಗಲಿಲ್ಲವೇ ? " ಎಂದು ಕೇಳಿದಳು.

" ಆದರೆ ಬೆಳಿಗ್ಗೆ ಮಿಂದು ಅರಿವೆ ಬದಲು ಮಾಡುವೆನಲ್ಲ ? " ಯಂಬ್ರಾಂದ್ರಿ ಮಿದುವಾಗಿ ಮಡದಿಯನ್ನು ಚುಂಬಿಸಿದರು.

" ಈಗ ನೀವು ನನ್ನ ಎಂಜಲು ಉಂಡಿರಲ್ಲ ? "

" ಆದರೆ ಅದು ಎಂಜಲಲ್ಲ. "

" ಮತ್ತಿನ್ನೇನು ? "

"ಜೇನು ! " ಯಂಬ್ರಾಂದ್ರಿ ಉಸುರಿದರು : "ಜೇನಿಗೂ, ಹಾಲಿಗೂ ಮಡಿ ಮೈಲಿಗೆಗಳ ಕಟ್ಟಿದೆಯೇ ? ಕುರುಬ ಎಂಜಲು ಮಾಡಿದ ಜೇನು

ದೇವರಿಗೆ ಅರ್ಪಿತವಾಗುವುದಿಲ್ಲವೇ ? ''

ಯಂಬ್ರಾಂದ್ರಿ ಕುರುಬ ಎಂದು ಹೇಳಿದೊಡನೆ ಲಕ್ಷ್ಮಿಯ ಮನಸ್ಸಿನಲ್ಲಿ ನಾಯಕನ ಆಕೃತಿ ನುಸುಳಿತು. ತಾನು ಯಂಬ್ರಾಂದ್ರಿಯ ತೋಳುಗಳಲ್ಲಿರುವುದರ ಬದಲು ನಾಯಕ ತನ್ನ ಕೊರಳಿಗೆ ತೋಳ ಹಾರವನ್ನು ಸೂಡಿದ್ದರೆ ಎಷ್ಟು ಲೇಸಾಗುತಿತ್ತು ಎಂದು ಅವಳು ಚಿಂತಿಸಿದಳು. ಈ ಆಲೋಚನೆಯಿಂದ ಅವಳೊಂದು ಬಿಸಿಯುಸಿರನ್ನು ಹೊರಚೆಲ್ಲಿದಳು.

" ನನ್ನ ನುಡಿ ಕೇಳಿ ನಿನಗೆ ಬೇಸರವಾಯಿತೇ ? " ಲಕ್ಷ್ಮಿಯ ನಿಡುಸುಯ್ಲನ್ನು ಕಂಡು ಯಂಬ್ರಾಂದ್ರಿ ಕೇಳಿದರು.

'' ಇಲ್ಲ. ಜೇನು ಹೇಗೆ ಕುರುಬರ ಎಂಜಲು ? ''

'' ಜೇನು ಕುರುಬರು ಜೇನು ಎರಿಗಳನ್ನು ಕುಯ್ವ ಮುನ್ನ ಬಾಯೊಳಗೆ ತುಂಬಿದ ಎಂಜಲನ್ನು ಉಗುಳುವರು. ಅವರ ಉಗುಳು ಸೋಂಕಿದ ಜೇನನ್ನು ನಾವು ಸವಿಯುವೆವು. ದೇವರ ಅಭಿಷೇಕಕ್ಕೆ ಇರುವ ಪಂಚಾಮೃತಕ್ಕೆ ಜೇನಿಲ್ಲದೆ ಆಗುವುದಿಲ್ಲ. ಜೇನಿಗೆ ಮಡಿ ಮೈಲಿಗೆಗಳ ಕಟ್ಟಿಲ್ಲ. ಅಂತೆಯೇ ಒಲವಿಗೂ ಮಡಿಮೈಲಿಗೆಗಳಿಲ್ಲ ! ''

'' ಮತ್ತೇಕೆ ನನ್ನ ಸೋಂಕಿನಿಂದ ಮೈಲಿಗೆಯಾಯಿತೆಂದು ನೀವು ಮೀಯುವಿರಿ ? "

'' ನಾನು ಅಂಬಲದ ಪೂಜಾರಿ. ಮಡಿ ಮೈಲಿಗೆಗಳನ್ನು ಇಟ್ಟುಕೊಳ್ಳದಿದ್ದರೆ ಜನ ಏನೆಂದಾರು ? ಜನರಿಗೋಸುಗ ಈ ಕಟ್ಟನ್ನು ಆಚರಿಸಬೇಕಾಗಿದೆ. ''

ದಿನಗಳು ಕೆಲವು ಉರುಳಿದುವು. ಹಚ್ಚಡ, ಯಂಬ್ರಾಂದ್ರಿಯ ಪಂಚೆ, ಜುಬ್ಬ, ತನ್ನ ಪೊಡವೆ ಮತ್ತು ರವಿಕೆ, ಇದನ್ನೆಲ್ಲಾ ಒಗೆದುಕೊಂಡು ಬರುವೆನೆಂದು ಲಕ್ಷ್ಮಿ ಅವುಗಳನ್ನು ಎತ್ತಿಕೊಂಡು ಒಮ್ಮೆ ಹೊಳೆದಂಡೆಗೆ ಹೋದಳು. ಅವಳು ಅರಿವೆಗಳನ್ನೆಲ್ಲಾ ಹೊಳೆಯ ನೀರೊಳಗೆ ಅದ್ದಿ ಸಾಬೂನನ್ನು ಉಜ್ಜಿದಳು. ವಸ್ತ್ರಗಳನ್ನು ಒಂದೊಂದಾಗಿ ಎತ್ತಿ ಒಗೆಯ ತೊಡಗಿದಳು. ಬಡಿಯಲು ತುಂಬಾ ವಸ್ತ್ರಗಳಿದ್ದುವು. ಅರಿವೆಗಳನ್ನು ಬಡಿದು ಬಡಿದು ಆಕೆಯ ತೋಳುಗಳು ದಣಿದುವು. ತುಸ ವಿಶ್ರಮಿಸಿ ಕೊಳ್ಳುವೆನೆಂದು ಅವಳು ಹೊಳೆಯ ದಂಡೆಯಲ್ಲಿ ಕುಳಿತಳು.

ನದಿಯ ವಕ್ಷದ ಮೇಲೆ ಸೂರ್ಯ ಕಿರಣಗಳು ಲಾಸ್ಯವಾಡು ತಿದ್ದುವು. ಬಿಸಿಲಿನ ಜಳದಿಂದ ಹೊಳೆಯ ಮೈ ಬೆಳ್ಳಿಯ ಬಣ್ಣವನ್ನು ತಳೆದಿತ್ತು. ಲಕ್ಷ್ಮಿಯ ಮನಸ್ಸು ಮಾವನ ಮನೆಯ ಪಕ್ಕದಲ್ಲಿ ಹರಿಯುತಿದ್ದ ಹೊಳೆಯ ಕಡೆಗೆ ಸಾಗಿತು. ಅಲ್ಲಿ ಹೊಳೆಯ ನೀರು, ಇಲ್ಲಿನ ನೀರಿಗಿಂತಲೂ ಶೀತಲವಾಗಿತ್ತು. ಇಲ್ಲಿಯ ಹಾಗೆ ಅಲ್ಲಿಯೂ ಅವಳು ಹೊಳೆಯಲ್ಲಿ ವಸ್ತ್ರಗಳನ್ನು ಒಗೆಯುತಿದ್ದಳು; ಮೀಯುತಿದ್ದಳು; ಈಸುತಿದ್ದಳು.

ತನಗೆ ಈಜನ್ನು ಕಲಿಸಕೊಟ್ಟವರಾರೆಂದು ಲಕ್ಷ್ಮಿ ಆಲೋಚಿಸಿದಳು. ಅವಳಿಗೆ ಈಜನ್ನು ಕಲಿಸಿದವನೂ ನಾಯಕನೇ ಆಗಿದ್ದ. ಆರೆಂಟು ವರ್ಷಗಳ ಹಿಂದೆ ಅವಳು ಲಂಗವನ್ನು ತೊಟ್ಟುಕೊಂಡು ಓಡಾಡುವ ಹುಡುಗಿಯಾಗಿದ್ದಾಗ ನಾಯಕನೇ ಅವಳ ಕೈ ಹಿಡಿದು ಈಜು ಕಲಿಸಿದ್ದ. ಕೈಗಳನ್ನು ಎಳೆಯುವುದು ಹೇಗೆ ಕಾಲು ಬಡಿಯುವದು ಹೇಗೆ ಎಂದು ಅವನು ತೋರಿಸಿಕೊಟ್ಟಿದ್ದ. ಒಮ್ಮೆ ಅರೆ ಈಜು ಕಲಿತಾಕೆ ನೀರಲ್ಲಿ ಕೈಕಾಲುಗಳನ್ನು ಬಡಿಯುತ್ತಾ ಸಾಗುತಿದ್ದಾಗ, ನಡುನೀರಲ್ಲಿ ಕೈ ಸೋತು ಹೊಳೆಯಾಳಕ್ಕೆ ಇಳಿದಿದ್ದಳು. ಆಗ ನಾಯಕನೇ ಮಡುವೊಳಗೆ ಇಳಿದು ಆಕೆಯ ಕೈ ಹಿಡಿದು ಎಳೆದು ತಂದಿದ್ದ. ಆತನ ಮೈಯ ಕಸುವು ಅಪಾರವಾದುದು; ಆತ ತನ್ನನ್ನು ಉಕ್ಕಿನಂತಹ ತೋಳುಗಳಲ್ಲಿ ಹಿಡಿದೆತ್ತಿ ತಂದುದು ಈಗ ಆಕೆಯ ಕಣ್ಣ ಮುಂದೆ ಬಂದು ನಿಂತಿತು. ಅವನು ಆಕೆಯನ್ನು ಎತ್ತಿ ತಂದು ದಡಸೇರಿದ ಮೇಲೆ, "ಪುಟ್ಟ ಪಾಪಾತಿ, ನೀವು ಚೆನ್ನಾಗಿ ಈಜು ಕಲಿಯದ ಮುನ್ನ ಮಡುವಿನೆಡೆಗೆ ಸಾಗಿ ಹೋಗಲಾಗದು. ನಾನು ಇಲ್ಲಿರದಿದ್ದರೆ ನೀವು ನದಿಯ ತಳವನ್ನು ಸೇರುತಿದ್ದಿರಿ!" ಎಂದು ಹೇಳಿದ.

ನಗುವಿನ ಬೆಳಕು ಕಳೆಯಾಡುತ್ತಿರುವ ನಾಯಕನ ಮೊಗ ಅವಳ ಕಣ್ಣ ಮುಂದೆ ಗೋಚರಿಸಿತು. ನೀರಿನಿಂದ ತನ್ನನ್ನು ಹಿಡಿದೆತ್ತಿದ ತೋಳು ತನ್ನ ಮೈಯನ್ನು ಬಳಸಿದಂತೆ ಆಕೆಗೆ ತೋರಿತು. ಹೌದು. ನಾಯಕ ಕಣ್ಣೀರು ಸುರಿಸುತ್ತಾ ಅವಳ ಮುಂದೆ ನಿಂತಿದ್ದ. ಅವನು ಬಿಕ್ಕು ದನಿಯಲ್ಲಿ, "ಪಾಪಾತಿ, ನೀವು ನನಗೆ ದ್ರೋಹ ಬಗೆದಿರಿ; ನಿಮ್ಮನ್ನೇ ನಂಬಿದ ಕುರುಬ ಹುಡುಗನನ್ನು ಹಾಳುಗೆಡುಹಿದಿರಿ; ನನ್ನನ್ನು ನಿಮ್ಮ ಮನಸ್ಸಿ

ನಿಂದ ಅಳಿಸಿ ಹಾಕಲು ಪ್ರಯತ್ನಿಸುತ್ತಿದ್ದೀರಿ!" ಎಂದು ಉಲಿದ.

"ನಾಯಕ, ಇಲ್ಲ. ಈ ಮನಸ್ಸು ಮತ್ತು ಜೀವಗಳು ಯಾವಾಗಲೂ ನಿನ್ನವು!" ನಡುಗುವ ದನಿಯಲ್ಲಿ ಲಕ್ಷ್ಮಿ ಮಾರ್ನುಡಿದಳು.

"ಸುಳ್ಳು! ಪಾಪಾತಿ, ನೀವು ನನ್ನನ್ನು ನಿಮ್ಮ ಮನಸ್ಸಿನಿಂದ ತೊಡೆದು ಹಾಕಲು ಪ್ರಯತ್ನಿಸುತ್ತಿರುವಿರಿ; ನನ್ನ ರೂಪ ಕಣ್ಣ ಮುಂದೆ ಸುಳಿದೊಡನೆ ತಂಬ್ರಾಕಳ ಆಸರೆ ಪಡೆಯುತ್ತಿರುವಿರಿ!" ನಾಯಕ ಹೇಳಿದ: "ಆದರೆ ಪಾಪಾತಿ, ನೀವು ನನ್ನ ತೊರೆದರೂ ನಾನು ನಿಮ್ಮನ್ನು ಬಿಡಲಾರೆ; ನಿಮ್ಮನ್ನು ಮರೆಯಲಾರೆ!"

"ನಾಯಕ, ಈ ಎದೆ ಯಾವಾಗಲೂ ನಿನ್ನದು! ನಾನು ಸುಳ್ಳು ನುಡಿಯಲಾರೆ!" ಲಕ್ಷ್ಮಿ ಕಂಬನಿಗರೆಯುತ್ತಾ ಉಸುರಿದಳು: "ನೀನು ನನ್ನ ಎದೆಯ ಹುಣ್ಣನ್ನು ಮುಳ್ಳಿನಿಂದ ಚುಚ್ಚಿ ನೆತ್ತರು ಬಸಿಯಬೇಡ."

"ನಿಜವೇ?"

"ನಿಜ. ನಿನ್ನಾಣೆಯಾಗಿಯೂ ನಿಜ!" ಲಕ್ಷ್ಮಿ ನಾಯಕನನ್ನು ತಬ್ಬಿಕೊಳ್ಳಲೆಂದು ತೋಳು ಚಾಚಿದಳು!

ನಾಯಕನ ತೋಳುಗಳು ಆಕೆಯ ದೇಹವನ್ನು ಬಳಸಿದುವು. ಆತನ ತಾಂಬೂಲರಾಗವನ್ನು ತಳೆದ ತುಟಿಗಳು ಆಕೆಯ ತುಟಿಗಳೊಡನೆ ಬೆರೆತುವು. ಆದರೆ ಆಕೆಯ ತೋಳುಗಳಿಗೆ ನಾಯಕ ದೊರೆಯಲಿಲ್ಲ. ಅವಳು ಬರೀ ಗಾಳಿಯನ್ನು ಅಪ್ಪಿಕೊಂಡಿದ್ದಳು!

ತನ್ನ ತೋಳ ತೆಕ್ಕೆಗೆ ನಾಯಕ ಸಿಗದಿರಲು ಲಕ್ಷ್ಮಿ ಗಾಬರಿಗೊಂಡು ಕಣ್ದೆರೆದಳು. ಅವಳ ಮುಂದೆ ನಾಯಕನಿರಲಿಲ್ಲ. ಅವನು ಮಾಯವಾಗಿ ಹೋಗಿದ್ದ. ಅವಳು ತಲೆ ಎತ್ತಿ ನೋಡಿದಳು. ಗೋಳಿಮರದ ಹಣ್ಣುಗಳನ್ನು ಕೀಳುತ್ತಿದ್ದ ಮಂಗವೊಂದು ಅವಳನ್ನು ನೋಡುತ್ತಾ ಅಣಕಿಸಿತು; ಕಿತ್ತ ಹಣ್ಣುಗಳಲ್ಲೊಂದನ್ನು ಅವಳ ಮೇಲೆ ಎಸೆದು ಕಿರುಚಿತು. ಲಕ್ಷ್ಮಿ ಕನಸಿನ ಲೋಕವನ್ನು ತೊರೆದು ಯಥಾರ್ಥತೆಯ ಜಗತ್ತಿಗೆ ಇಳಿದು ಬಂದಳು. ಆವರೆಗೆ ತಾನು ನೋಡಿದುದು ಮತ್ತು ಅನುಭವಿಸಿದುದು ತನ್ನ ಮನಸ್ಸು ಹೊಸೆದ ಒಂದು ನಾಟಕ ಎಂದು ಅವಳಿಗೆ ಅರಿವಾಯಿತು. ಆ ಅರಿವಿನೊಡನೆ ವೇದನೆಯೂ ಬೆರೆತುಕೊಂಡಿತು.

ಅವಳು ನಿಡುಸುಯ್ಲೊಂದನ್ನು ಹೊರಚೆಲ್ಲಿ ಒಗೆಯಲೆಂದು ಸಾಬೂನು ಉಜ್ಜಿ ಇರಿಸಿದ ಅರಿವೆಗಳನ್ನು ಎತ್ತಿಕೊಂಡಳು.

ತನ್ನ ಮನಸ್ಸಿನಲ್ಲಿ ನೆಲೆಗೊಂಡ ನಾಯಕನನ್ನು ತೊಡೆದು ಹಾಕಲು ಲಕ್ಷ್ಮಿ ನೂರು ವಿಧಗಳಲ್ಲಿ ಪ್ರಯತ್ನಿಸಿದಳು. ಆದರೆ ಈ ಯತ್ನಗಳಲ್ಲಿ ಅವಳಿಗೆ ಎಂದೂ ಗೆಲುವು ದೊರೆಯಲಿಲ್ಲ. ಆತ ತನ್ನ ಬಳಿಸಾರಲಾರ ಎಂದು ಅವಳು ನಿಶ್ಚಿಂತೆಯಿಂದ ಇದ್ದಾಗ ಅವನು ಎಂಲ್ಲಿದಲೋ ನುಸುಳಿ ಬಂದು ಆಕೆಯ ಕಣ್ಣ ಮುಂದೆ ಬಂದು ನಿಂತು ಬಿಡುತಿದ್ದ; ಆಕೆಯನ್ನು ಕೆಣಕುತಿದ್ದ. ಉಣುವಾಗ ಊಟ ಬಡಿಸುವ ಯಂಬ್ರಾಂದ್ರಿಯ ಬೆನ್ನ ಹಿಂದೆ ತೋರುತಿದ್ದ; ಯಂಬ್ರಾಂದ್ರಿ ಕತೆ ಹೇಳುತಿದ್ದಾಗ ಅವರ ಕಣ್ಣುಗಳಲ್ಲಿ ನೆಲೆಗೊಂಡು ಲಕ್ಷ್ಮಿಯನ್ನು ಅಣಕಿಸುತಿದ್ದ. ಯಂಬ್ರಾಂದ್ರಿ ತನ್ನನ್ನು ಆಲಿಂಗನ ಕೈ ಚಾಚಿದಾಗ ನಾಯಕನ ಅವರ ಎದೆಯಲ್ಲಿ ನಲಿದಾಡುತಿದ್ದ. ಹಾಸಿಗೆ ಹೊದಿಕೆಯ ಮಡಸುಗಳ ಎಡೆಯಲ್ಲಿ ಎದ್ದು ಕಾಣಿಸುತಿದ್ದ. ಕೆಲವು ಸಲ ಆಕೆ ಯಂಬ್ರಾಂದ್ರಿಯನ್ನೇ ನಾಯಕನೆಂದು ಭ್ರಮಿಸಿದುದೂ ನಂಬಿ ತೋಳಮಾಲೆಯನ್ನು ಕೊರಳಿಗೆ ಸೂಡಿ ಮುತ್ತುಗಳ ಅಲರುಗಳನ್ನು ಅವರ ಮೇಲೆ ಸುರಿಸಿದುದೂ ಉಂಟು. ಕೆಲವೊಮ್ಮೆ ಮೈ ಮರೆತು ಯಂಬ್ರಾಂದ್ರಿಯನ್ನೇ ನಾಯಕನೆಂದು ಕರೆದುದೂ ಉಂಟು.

ತನ್ನ ಈ ವಿಚಿತ್ರ ವರ್ತನೆಗಳನ್ನು ನೋಡಿ ಯಂಬ್ರಾಂದ್ರಿಗೆ ಆಶ್ಚರ್ಯನಾಗಿರಬೇಕು; ತಾನು ಅವರನ್ನು ಅತಿರೇಕವಾಗಿ ಪ್ರೀತಿಸುತ್ತಿರುವೆನೆಂದು ಗ್ರಹಿಸಿರಬೇಕು ಎಂದು ಲಕ್ಷ್ಮಿ ತನ್ನಲ್ಲಿಯೇ ಹೇಳಿಕೊಂಡಳು.

ಒಂದು ಸಂಜೆ ಯಂಬ್ರಾಂದ್ರಿ ಕಾಫಿ ತೋಟದಿಂದ ಮರಳಿ ಬಂದರು. ಅವರು ತೋಟದಿಂದ ಕಳಿತು ಕೆಂಪಾದ ಕಿತ್ತಳೆ ಹಣ್ಣುಗಳನ್ನು ತಂದಿದ್ದಿರು. ಅವರು ಎರಡು ಹಣ್ಣುಗಳನ್ನು ಲಕ್ಷ್ಮಿಯ ಕಡೆ ಚಾಚಿ, "ಲಕ್ಷ್ಮೀ, ನಿನಗೋಸುಗ ಹಣ್ಣು ತಂದಿದ್ದೇನೆ; ತೆಗೆದುಕೋ" ಎಂದು ಉಸುರಿದರು.

ವಿರುದನ್ ಶಂಕು ಎಂಬ ಕಾದಂಬರಿಯನ್ನು ಓದುತಿದ್ದ ಲಕ್ಷ್ಮಿ ಪುಸ್ತಕದಿಂದ ಕಣ್ಣುಗಳನ್ನು ಮೇಲೆತ್ತಿದಳು. ಹಣ್ಣುಗಳು ಬಹು ಸೊಗಸಾಗಿದ್ದವು. ಒಂದೊಂದು ಹಣ್ಣೂ ಒಂದೊಂದು ತೆಂಗಿನಕಾಯಿಗಾತ್ರವಾಗಿತ್ತು. ಯಂಬ್ರಾಂದ್ರಿ ಒಂದು ಹಣ್ಣನ್ನೆತ್ತಿ ಆಕೆಯ ಕೆನ್ನೆಯ ಹತ್ತಿರ

ಹಿಡಿದು, " ಲಕ್ಷ್ಮೀ, ನಿನ್ನ ಗಲ್ಲ ಚೆಂದವೋ ಕಿತ್ತಾಳೆಯ ಕೆಂಬಣ್ಣ ಚಂದವೋ ? " ಎಂದು ನಗುದನಿಯಲ್ಲಿ ಕೇಳಿದರು.

ಯಂಬ್ರಾಂದ್ರಿಯ ರಸಿಕತೆಯ ನುಡಿಯನ್ನು ಕೇಳಿದಾಗ ಲಕ್ಷ್ಮಿಯ ಕೆನ್ನೆಗಳು ಲಜ್ಜೆಯಿಂದ ಕೆಂಪಾದುವು. ಆಗ ಅವರು, " ಲಕ್ಷ್ಮೀ, ಈಗ ನಿನ್ನ ಗಲ್ಲಗಳು ನಿಜವಾಗಿಯೂ ಕಿತ್ತಳೆ ಹಣ್ಣಿನ ಕೆಂಪನ್ನು ಮೀರಿಸಿದುವು ! " ಎಂದು ಉದ್ಗಾರವೆತ್ತಿದರು.

ಲಕ್ಷ್ಮಿಗೆ ಆ ಕಿತ್ತಳೆಯ ಹಣ್ಣಿನ ಹಿಂದೆ ನಾಯಕನ ಮೋರೆ ಗೋಚರಿಸಿತು. ಆತನೂ ಹಿಂದೊಮ್ಮೆ ಮಾವಿನತೋಟದೊಳಗೆ ನುಗ್ಗಿ ಕಿತ್ತಳೆ ಹಣ್ಣುಗಳನ್ನು ಕಿತ್ತು ತಂದಿದ್ದ. ಆತ ಕಿತ್ತಳೆಯ ಹಣ್ಣುಗಳನ್ನು ಆಕೆಯ ಮುಂದೆ ಹಿಡಿದು, "ಪಾಪಾತಿ, ನಿಮ್ಮ ಮೋರೆ ಕಿತ್ತಳೆಯ ಹಣ್ಣಿನ ರಂಗಿಗಿಂತಲೂ ಸೊಗಸು ಮತ್ತು ಸವಿ. " ಎಂದು ಹೇಳಿದ್ದ.

" ಕಿತ್ತಳೆ ಹಣ್ಣಿಗಿಂತ ಸವಿ ? " ಲಕ್ಷ್ಮಿ ಆಶ್ಚರ್ಯ ಚಕಿತಳಾಗಿ ಕೇಳಿದಳು.

" ನನಗಂತೂ ಕಿತ್ತಳೆ ಹಣ್ಣಿಗಿಂತ ನೂರ್ಮಡಿ ಸವಿ ಹೆಚ್ಚು ! " ಎಂದು ಆ ಕುರುಬರ ಹುಡುಗ ಕೊಂಕು ನುಡಿಯನ್ನಾಡಿದ್ದ. ಆಡಿದುದು ಮಾತ್ರವಲ್ಲದೆ ಮಲ್ಲಿಗೆಯ ಹಂದರದ ಮರೆಯಲ್ಲಿ ಆಕೆಯ ಕೆಂದುಟಿಗಳನ್ನು ಸವಿದೂ ಬಿಟ್ಟಿದ್ದ. ಲಕ್ಷ್ಮಿ ಆತನನ್ನು ತಡೆಯುವ ಗೋಜಿಗೆ ಹೋಗಿರಲಿಲ್ಲ.

ಈ ಘಟನೆ ಲಕ್ಷ್ಮಿಯ ಚಿತ್ತದ ಮಡುವಿನಾಳದಿಂದ ಎದ್ದು ಬಂದು ತೇಲಲು ಅವಳ ಮೈ ಪುಳಕಗೊಂಡಿತು. ಅವಳು ಕುಳಿತಲ್ಲಿಂದ ಎದ್ದು ನಿಂತಳು. ನಾಯಕನೇ ತನ್ನ ಮುಂದೆ ನಿಂತಿರುವನೆಂದು ಅವಳು ಗ್ರಹಿಸಿದಳು. ಅವಳು ಕೈಚಾಚಿ ಯಂಬ್ರಾಂದ್ರಿಯ ಕೈಗಳಿಂದ ಕಿತ್ತಳೆ ಹಣ್ಣುಗಳನ್ನು ಕಸಿದುಕೊಂಡು ಅವರ ನುಣ್ಣಗಿನ ದವಡೆಯ ಮೇಲೆ ಚುಂಬನ ಮುದ್ರೆಯನ್ನು ಒತ್ತಿದಳು.

ಮಡದಿ ತೋರಿದ ಈ ಭಾವೋದ್ವೇಗವನ್ನು ಕಂಡು ಯಂಬ್ರಾಂದ್ರಿ ಆಶ್ಚರ್ಯಪರವಶರಾದರು. ಅವರು ಕೆಂಪೇರಿದ ಮೊಗದೊಡನೆ, " ಈ ಹಗಲು ಹೊತ್ತಿನಲ್ಲೇ ಮುತ್ತಿನ ಮಳೆಗರೆಯಲು ಹೊರಟೆಯಲ್ಲ ! "

ಎಂದು ಕೇಳಿದರು.

ಲಕ್ಷ್ಮಿ‌ಕುಟ್ಟಿಗೆ ಈಗ ಎಚ್ಚರವಾಯಿತು. ತನ್ನ ಮುಂದಿರುವುದು ನಾಯಕನಲ್ಲ ಎಂಬುದು ಅವಳಿಗೆ ಅರಿವಾಯಿತು. ಅವಳು, "ಈ ಸೊಗಸಿನ ಕಿತ್ತಳೆ ಹಣ್ಣುಗಳನ್ನು ತಂದವರಿಗೆ ಕಾಣಿಕೆ ಕೊಡಬೇಡವೇ? ನನ್ನಲ್ಲಿ ಅದಲ್ಲದೆ ಬೇರೇನಿದೆ?" ಎಂದು ಉದ್ಗಾರವೆತ್ತಿದಳು.

"ಆದರೆ ಈ ಕಾಣಿಕೆ ಕೊಡಲು ಹೊತ್ತುಗೊತ್ತುಗಳಿಲ್ಲವೇ?

ಈ ನುಡಿಯನ್ನು ಕೇಳಿದಾಗ ಲಕ್ಷ್ಮಿ‌ಕುಟ್ಟಿ ನಾಚಿಕೆಯಿಂದ ಮುದ್ದೆಯಾಗಿ ಹೋದಳು. ಅವಳು ಯಂಬ್ರಾಂದ್ರಿಯನ್ನು ಬಿಟ್ಟು ದೂರ ಸರಿದಳು.

## ೨೪

ಧನುರ್ಮಾಸ ಬಂತು. ಧನುರ್ಮಾಸದ ಕೊನೆಯ ಸಂಕ್ರಮಣದಂದು ಪಾಕದ ಮಹೇಶ್ವರನ ಗುಡಿಯಲ್ಲಿ ಜಾತ್ರೆ ಜರಗುವುದು. ಈ ಉತ್ಸವಕ್ಕೆ ಬರಬೇಕೆಂದು ಯಂಬ್ರಾಂದ್ರಿ ಲಕ್ಷ್ಮಿ‌ಕುಟ್ಟಿಯ ಮಾವ ಕೇಳುಕುಟ್ಟಿ ನಾಯರರಿಗೆ ಆಮಂತ್ರಣ ಕಳುಹಿಸಿದ್ದರು. ಮಾವನಾದರೂ ಯಂಬ್ರಾಂದ್ರಿಯ ಕರೆಯನ್ನು ಮನ್ನಿಸಿ ಜತೆಯಲ್ಲಿ ಚಿರುತೆ, ಕುಂಞಂಬು ಮತ್ತು ರಾಮು ಇವರನ್ನು ಕರೆದುಕೊಂಡು ಜಾತ್ರೆಯ ಹಿಂದಣ ದಿನವೇ ಯಂಬ್ರಾಂದ್ರಿಯ ಮಠಕ್ಕೆ ಆಗಮಿಸಿದರು.

ಯಂಬ್ರಾಂದ್ರಿ ತಮಗೆ ನೆರವಾಗಲೆಂದು ಪಕ್ಕದ ಗ್ರಾಮದ ರಾಮನ್ ಯಂಬ್ರಾಂದ್ರಿಯನ್ನು ಬರಲು ಹೇಳಿದ್ದರು. ಮನೆಗೆ ಬಂದ ಆಪ್ತರಿಗೆ ಹಾಲು ಪಾಯಸ, ಚಿತ್ರಾನ್ನ ಅವಿಲು ಮತ್ತು ಕೂಟುಗಳ ಸಂಭ್ರಮದ ಔತಣ ನಡೆಯಿತು. ಕರಿದ ನೇಂದ್ರ ಬಾಳೆಕಾಯಿ, ಸುವರ್ಣ ಗೆಡ್ಡೆಗಳ ಉಪ್ಪೇರಿಗಳು ಬೇರೆ ಇದ್ದುವು. ಯಂಬ್ರಾಂದ್ರಿಯ ಆದರಾತಿಥ್ಯಗಳನ್ನು ಕಂಡು ಮಾವ ಸಂತೋಷಗೊಂಡರು.

"ನೋಡಿ, ನಾಯರ. ನಿಮ್ಮ ಸೊಸೆ ಚಿನ್ನದಂತಹ ಹೆಣ್ಣು!" ಯಂಬ್ರಾಂದ್ರಿ ಮಾವನ ಮುಂದೆ ಲಕ್ಷ್ಮಿಯನ್ನು ಹೊಗಳಿದರು: "ಆಕೆ

ಯದ್ದೋ ಬಂಗಾರದ ಗುಣ. ನನಗೆ ಹೊಂದಿಕೊಂಡು ಸಂಸಾರವನ್ನು ತೂಗಿಸಿಕೊಂಡು ಹೋಗುತಿದ್ದಾಳೆ!"

ಯಂಬ್ರಾಂದ್ರಿ ಲಕ್ಷ್ಮಿಯನ್ನು ಹೊಗಳಿದುದನ್ನು ಕೇಳಿ ಮಾವನಿಗೆ ಸಂತೋಷವಾಯಿತು. ಕುರುಬ ಹುಡುಗನಿಗೆ ತನುಮನಗಳನ್ನು ತೆತ್ತ ಹೆಣ್ಣು ಗಂಡನ ಮನೆಯಲ್ಲಿ ಯಾವ ಗೊಂದಲವನ್ನೆಬ್ಬಿಸುವಳೋ ಎಂದು ಅವರು ಭೀತಾಕುಲರಾಗಿದ್ದರು.

ನಾಯಕನ ವಾರ್ತೆಯನ್ನು ಅರಿಯಬೇಕೆಂಬ ತವಕ ಲಕ್ಷ್ಮಿಯ ಎದೆಯಲ್ಲಿ ತುಂಬಿ ತುಳುಕುತ್ತಿದ್ದಿತು. ಅವಳು ಸಮಯವನ್ನು ಸಾಧಿಸಿ ಚಿರುತೆಗೆ ಕಿತ್ತಳೆ ಹಣ್ಣುಗಳ ಆಸೆಯನ್ನು ತೋರಿಸಿ ದೂರ ಕರೆದೊಯ್ದಳು. ಅವಳು ತಂಗಿಯ ಕೈಗೆ ಕಿತ್ತಳೆ ಹಣ್ಣೊಂದನ್ನು ಕೊಟ್ಟು ಮೆಲ್ಲನೆ, "ಚಿರುತೆ, ಈಗ ನಾಯಕನೇನು ಮಾಡುತಿದ್ದಾನೆ?" ಎಂದು ಕೇಳಿದಳು.

"ಅಕ್ಕ ನಾಯಕನ ಪಾಡನ್ನು ಹೇಳುವುದು ಬೇಡ." ಕಿತ್ತಳೆ ಹಣ್ಣನ್ನು ಸುಲಿಯುತ್ತಾ ಚಿರುತೆ ಮಾರ್ನುಡಿದಳು: "ನೀನು ಈ ಕಡೆ ಬಂದಮೇಲೆ ಅವನಿಗೇನೋ ಮಂಕು ಕವಿದಿದೆ. ನಾಳೆ ದಿನ ಅವನು ಈ ಕಡೆಗೆ ಬರುತ್ತಾನೆ. ಆಗ ನೀನೇ ಅವನನ್ನು ನೋಡುವಿಯಂತೆ."

"ನಾಳೆ ಇಲ್ಲಿಗೆ ಬರುವವನೇ?" ಲಕ್ಷ್ಮಿಯ ದನಿಯಲ್ಲಿ ಬೆರಗು ಉತ್ಸುಕತೆಗಳು ತುಂಬಿದ್ದುವು.

"ಹೌದು. ನಾಳೆ ಜಾತ್ರೆಯಂದು ಅಂಬಲದಲ್ಲಿ ದೇವರ ಮೆರವಣಿಗೆ ಇದೆಯಲ್ಲ. ಮೆರವಣಿಗೆಗೆ ಶಂಕರನನ್ನು ಕಳುಹಿಸಿಕೊಡಬೇಕೆಂದು ಪಾಕದ ನಾಯರರು ಮಾವನಿಗೆ ಹೇಳಿದ್ದಾರೆ."

"ಈಗ ನಾಯಕ ಹೇಗಿದ್ದಾನೆ?" ಲಕ್ಷ್ಮಿ ಮರಳಿ ತಂಗಿಯನ್ನು ಕೇಳಿದಳು.

"ಅಕ್ಕ, ಅವನ ಪಾಡನ್ನು ವಿವರಿಸುವುದು ಬೇಡ. ಅವನ ಮೊಗದಲ್ಲಿ ನಗುವಿಲ್ಲ; ಕೆಲಸದಲ್ಲಿ ಉತ್ಸಾಹವಿಲ್ಲ. ದಿನಕ್ಕೆ ಒಮ್ಮೆ ಉಂಡರೆ ಉಂಡ. ಕೆಲವು ಸಲ ಊಟಕ್ಕೆ ಕರೆದರೂ ಬರುವದಿಲ್ಲ. ಹೊಟ್ಟೆ ಹಸಿವು ಇಲ್ಲವೆಂದು ಪತ್ತಾಯದ ಮೇಲೆ ಬಿದ್ದುಕೊಳ್ಳುತ್ತಾನೆ. ತನಷ್ಟಕ್ಕೆ ತಾನೇ ಅಳುತ್ತಾನೆ; ಕಣ್ಣೀರು ಹಾಕುತ್ತಾನೆ. ಅವನು ನಮ್ಮ ಜತೆಯಲ್ಲಿ ಹೆಚ್ಚು ಮಾತಾಡು

ವುದಿಲ್ಲ; ಆಟ ವಿನೋದಗಳಲ್ಲಿ ಬೆರೆಯುವುದಿಲ್ಲ. ಶಂಕರನನ್ನು ಸಹ ಮೊದಲಿನಷ್ಟು ಅಕ್ಕರೆಯಿಂದ ನೋಡಿಕೊಳ್ಳುವುದಿಲ್ಲ. ಈಗ ನೀನು ನಾಯಕನನ್ನು ನೋಡಿದರೆ, ಮೊದಲಿನ ನಾಯಕನೆಂದು ಹೇಳಲಾರೆ.''

ನಾಯಕನ ಸ್ಥಿತಿಯನ್ನು ಅರಿತಾಗ ಅವನಲ್ಲಿ ತೋರಿದ ಪರಿವರ್ತನೆಗೆ ತಾನೇ ಕಾರಣಳೆಂದು ಲಕ್ಷ್ಮಿಗೆ ಹೊಳೆಯಿತು. ಚಿಂತೆಯಿಂದ ಅವಳ ಮುಖ ಕಳೆಗುಂದಿತು. ಹಣೆಯಲ್ಲೊಂದು ಆಲೋಚನೆಯ ಗೆರೆ ಮೂಡಿತು. ಅವಳು ಮಾತಾಡದೆ ತುಸು ಹೊತ್ತು ನೆಲವನ್ನು ನೋಡುತ್ತಾ ಕುಳಿತಳು.

"ನಾಯಕನಿಗೆ ಏನಾಗಿದೆ ಎಂದು ತಿಳಿಯುವುದಿಲ್ಲ." ಚಿರುತೆ ಸುಲಿದ ಕಿತ್ತಳೆ ಹಣ್ಣಿನ ತೊಳೆಗಳನ್ನು ಬಾಯೊಳಗೆ ಹಾಕುತ್ತಾ ಮಾತು ಮುಂದುವರಿಸಿದಳು: "ಅವನನ್ನು ನೋಡುವಾಗ ಅಯ್ಯೋ ಪಾಪ ಎಂದೆನಿಸುತ್ತದೆ. ನಾನಂತೂ ಒಂದು ಸಲ, 'ನಾಯಕ, ಏಕೆ ನೀನು ಮಂಕುಬಡಿದವರಹಾಗಿರುವೆ? ನಿನ್ನಲ್ಲಿ ಈಗ ನಗುವಿಲ್ಲ; ಸಂತೋಷವಿಲ್ಲ.' ಎಂದು ಕೇಳಿಯೇಬಿಟ್ಟೆ."

"ಅವನೇನು ಹೇಳಿದ?'' ಉತ್ಸುಕತೆ ತುಂಬಿದ ದನಿಯಲ್ಲಿ ಕೇಳಿದಳು ಲಕ್ಷ್ಮಿ.

"'ಪುಟ್ಟ ಪಾಪಾತಿ ಹೋಗುವಾಗ ನನ್ನ ಸಂತೋಷ ಮತ್ತು ಹಿಗ್ಗುಗಳನ್ನು ಕದ್ದು ಮೂಟೆಕಟ್ಟಿ ತೆಗೆದುಕೊಂಡು ಹೋದರು' ಎಂದು ಅವನು ಕಣ್ಣೀರು ಸುರಿಸುತ್ತಾ ಹೇಳಿದ. ಅವನ ಮಾತು ನಿಜವೇನು?''

ಲಕ್ಷ್ಮಿಯ ಮೋರೆ ಕೆಂಪೇರಿತು. ನಾಯಕನಾಡಿದ ಮಾತು ಅಕ್ಷರಶಃ ದಿಟವೆಂಬುದನ್ನು ಅವಳು ಬಲ್ಲಳು. ತಾನು ಆತನ ಹೃದಯವನ್ನು ಸೂರೆಗೊಂಡು ತೆರಳಿದ ಮೇಲೆ ಆತನಿಗೆಲ್ಲಿ ಸಂತೋಷವಿದ್ದೀತು! ಆದರೆ ತಂಗಿಯ ಮುಂದೆ ನಿಜವನ್ನು ಒಪ್ಪಿಕೊಳ್ಳಲು ಅವಳಿಗೆ ಧೈರ್ಯಬರಲಿಲ್ಲ.

''ಆ ನಾಯಕ ಚೇಷ್ಟೆಗೆಂದು ಹಾಗೆ ಹೇಳಿರಬೇಕು!" ಲಕ್ಷ್ಮಿ ಮಾರ್ನುಡಿದಳು: "ಸಂತೋಷವನ್ನು ಗಂಟ ಮೂಟೆಕಟ್ಟಿ ಒಯ್ಯಲು ಬರುವುದೇ?''

''ಅಕ್ಕ, ನಾನೂ ಹಾಗೆಯೇ ಆಲೋಚಿಸಿದ್ದೆ." ಚಿರುತೆ ಉಸುರಿದಳು.

ಮರುದಿನ ಮುಂಜಾನೆ ಕಾಫಿ ಫಲಾಹಾರಗಳನ್ನು ಮುಗಿಸಿಯಾದ ಮೇಲೆ ಮಾವ ಮಕ್ಕಳನ್ನು ಕರೆದುಕೊಂಡು ಗುಡಿಗೆ ತೆರಳಿದರು. ಅಂದು ಗುಡಿಯಲ್ಲಿ ಸರ್ವಾಣಿ ಸಂತರ್ಪಣೆ ಇತ್ತು. ಯಂಬ್ರಾಂದ್ರಿ ನಸುಕಿನಲ್ಲಿಯೇ ಎದ್ದು ಸ್ನಾನ ಮಾಡಿ ದೇಗುಲಕ್ಕೆ ಹೊರಟು ಹೋಗಿದ್ದರು.

ಮಾವ ಹೊರಡುವ ಮುನ್ನ, “ ಲಕ್ಷ್ಮಿ, ನೀನು ಅಂಬಲಕ್ಕೆ ಬರುವುದಿಲ್ಲವೇ ? ” ಎಂದು ಕೇಳಿದರು.

“ ಇಲ್ಲ ಮಾವ. ಚಾತು ಬಾಳೆಲೆ ಮತ್ತು ಕಾಯಿಪಲ್ಯಗಳನ್ನು ಕೊಡಲೆಂದು ಅಂಬಲಕ್ಕೆ ಹೋಗಿದ್ದಾನೆ. ಇಲ್ಲಿ ಕರುಗಳಿಗೆ ಅಕ್ಕಚ್ಚು ನೀರುಗಳನ್ನು ಕೊಡುವವರು ಯಾರೂ ಇಲ್ಲ. ಸಂಜೆ ದೇವರ ಮೆರವಣಿಗೆ ಹೊರಡುವ ಹೊತ್ತಿಗೆ ಬರುವೆನು. ”

ಅವರು ಗುಡಿಗೆ ಹೊರಡುವ ಮುನ್ನ ಲಕ್ಷ್ಮಿ ಚಿರುತೆಯನ್ನು ಕರೆದು ಅವಳ ಕೈಯಲ್ಲಿ ಎರಡು ನೇಂದ್ರ ಬಾಳೆ ಹಣ್ಣುಗಳನ್ನು ಇರಿಸಿ, “ ಚಿರುತೆ, ನೀನು ನನಗೊಂದು ಉಪಕಾರ ಮಾಡಬೇಕು. ” ಎಂದು ಹೇಳಿದಳು.

“ ಏನಕ್ಕ ಅದು ? ”

“ ನೋಡು, ನೀನು ನಾಯಕನಿಗೆ ನನ್ನನ್ನೊಮ್ಮೆ ಬಂದು ಕಾಣಲು ಹೇಳು. ಹೊಳೆಯ ದಂಡೆಯಲ್ಲಿರುವ ಗೋಳಿ ಮರದಡಿಯಲ್ಲಿ ನಾನು ಕಾದಿರುವೆನೆಂದು ತಿಳಿಸು. ಯಾರಿಗೂ ಹೇಳಬೇಡ. ”

“ ಆಗಲಿ ಅಕ್ಕ ” ಚಿರುತೆ ಅಕ್ಕ ಒಪ್ಪಿಸಿದ ದೌತ್ಯವನ್ನು ನಿರ್ವಹಿಸಲು ಒಪ್ಪಿದಳು.

ಈಗ ಲಕ್ಷ್ಮಿ ಗೋಳೀ ಮರದಡಿಯಲ್ಲಿ ನಾಯಕನ ಬರವನ್ನು ನಿರೀಕ್ಷಿಸುತ್ತಾ ಕುಳಿತಿದಳು. ಅವಳು ಮಧ್ಯಾಹ್ನ ಗಂಜಿಯನ್ನು ಮಾಡಿ ಮಜ್ಜಿಗೆ ಬೆರಸಿ ಉಂಡಿದ್ದಳು. ಅವಳು ಕರುಗಳಿಗೆ ಅಕ್ಕಚ್ಚು ಮತ್ತು ಮಜ್ಜಿಗೆ ನೀರುಗಳನ್ನು ಕುಡಿಸಿ ಕಂಚಲಿಗೆ ಕೂಡಿ ಸಂಕೇತ ಸ್ಥಾನಕ್ಕೆ ಬಂದಿದ್ದಳು.

# ೨೫

ನಾಯಕನಿನ್ನು ಬರಲಾರ; ಆತನನ್ನು ಕಾದು ಕಾದು ಕಣ್ಣುಗಳು ಸೋತುವು ಎಂದು ಆಲೋಚಿಸುತ್ತ ಲಕ್ಷ್ಮಿ ಕುಳಿತ ಎಡೆಯಿಂದ ಎದ್ದು ನಿಂತಳು. ಅಷ್ಟರಲ್ಲಿ ಹೊಳೆ ದಂಡೆಯಲ್ಲಿ ಬೆಳೆದ ಕಿರುಬಿದಿರ ಮೆಳೆಯ ಎಡೆಯಿಂದ "ಪುಟ್ಟು ಪಾಪಾತಿ" ಎಂಬ ಧ್ವನಿ ಗಾಳಿಯಲ್ಲಿ ತೇಲಿ ಬಂತು.

ಲಕ್ಷ್ಮಿ ಆ ಧ್ವನಿ ಯಾರದೆಂದು ಗುರುತಿಸಿದಳು. ಅದು ಆಕೆಗೆ ಚಿರ ಪರಿಚಿತವಾದುದು. ಅದು ಆಕೆಯ ಹೃದಯವನ್ನು ಸೂರೆಗೊಂಡ ನಾಯಕನದು! ಆಕೆಯ ಮೈಯೆಲ್ಲ ಕಣ್ಣಾದುವು. ಅವಳು ಎವೆಯಿಕ್ಕದೆ ಧ್ವನಿ ಬಂದೆಡೆಯನ್ನು ನಿಟ್ಟಿಸಿ ನೋಡತೊಡಗಿದಳು.

ನಾಯಕ ಕಿರುಬಿದಿರ ಮೆಳೆಯ ಸಂದಿನಿಂದ 'ನುಸುಳಿ ಬರುತ್ತಿದ್ದ. ಅವನ ಎಡಗೈಯಲ್ಲಿ ಅಂಕುಶವಿತ್ತು. ಬಲಗೈಯಲ್ಲಿ ಕತ್ತಿಯಿತ್ತು. ಲಕ್ಷ್ಮಿ ಕಣ್ಣೆತ್ತಿ ಆತನ ಮೈ ಕೈಗಳನ್ನು ನಿಟ್ಟಿಸಿ ನೋಡಿದಳು. ಚಿರುತೆಯಾಡಿದ ಪ್ರತಿಯೊಂದು ಮಾತೂ ನಿಜವಾಗಿತ್ತು. ನಾಯಕನ ದೇಹ ಬಹಳ ಸೊರಗಿ ಹೋಗಿತ್ತು. ಅವನ ಮೈ ಆರುತಿಂಗಳು ಹಿಂದಿನಂತೆ ಹೃಷ್ಟ ಪುಷ್ಟವಾಗಿರಲಿಲ್ಲ. ಎದೆಗೂಡಿನ ಎಲುಬುಗಳು ಎದ್ದು ತೋರುತಿದ್ದುವು. ಕಣ್ಣುಗಳು ಗುಳಿ ಬಿದ್ದಿದ್ದುವು. ಮೊಗದಲ್ಲಿ ಹಿಂದೆ ನಳನಳಿಸುತಿದ್ದ ಎಳೆ ನಗು ಮತ್ತು ಹೊಳಪುಗಳಿರಲಿಲ್ಲ. ಕಣ್ಣುಗಳು ಕಾದ ಕಬ್ಬಿಣದ ಗೋಲಿಗಳಂತೆ ಕೆಂಪಾಗಿದ್ದುವು. ಅವನ ಕೂದಲು ಎಣ್ಣೆ ನೀರುಗಳನ್ನು ಕಾಣದೆ ಜಡೆಗಟ್ಟಿತ್ತು. ಹಣೆಯಲ್ಲಿ ಚಿಂತೆಯ ಗೆರೆಗಳು ಎದ್ದು ತೋರುತಿದ್ದುವು.

"ನಾಯಕ, ಎಷ್ಟು ಹೊತ್ತಿನಿಂದ ನಾನು ನಿನ್ನ ಬರವನ್ನು ಇದಿರು ನೋಡುತಿದ್ದೇನೆ." ಲಕ್ಷ್ಮಿ ಉಸುರಿದಳು: "ನೀನು ಬರುವುದಿಲ್ಲವೆಂದು ಭಾವಿಸಿ ಮಠಕ್ಕೆ ಮರಳಲು ನಾನು ಹೊರಟಿದ್ದೆ."

"ಶಂಕರ ತುಂಬಾ ಗಲಾಟೆ ಮಾಡಿದ. ಇಂದೇಕೋ ಅವನು ದುಗುಡಗೊಂಡಿದ್ದಾನೆ." ನಾಯಕ ಮಾರುಲಿದ: "ಅವನಿಗೆ ಉಣಿಸಲು ನಾನು ಪಟ್ಟಪಾಡು ಅಷ್ಟಿಷ್ಟಲ್ಲ. ಅವನಿಗೆ" ಕಾಲಿಗೆ ಸಂಕಲೆ ತೊಡಿಸಿ ಮರಕ್ಕೆ ಬಿಗಿದು ಬರಬೇಕಾದರೆ ಸಾಕು ಸಾಕಾಗಿ ಹೋಯಿತು."

"ನಾಯಕ, ಈಗ ನಿನ್ನ ಗುರುತೇ ಸಿಗುವುದಿಲ್ಲ." ನಾಯಕನ

ಮೈಯನ್ನು ನೋಡುತ್ತಾ ಲಕ್ಷ್ಮಿ ಉಸುರಿದಳು : "ನೀನು ಅಷ್ಟೊಂದು ಸೊರಗಿ ಹೋಗಿದ್ದೀಯೆ!"

"ಪಾಪಾತಿ," ನಾಯಕ ಪ್ರಯತ್ನಪೂರ್ವಕವಾಗಿ ತುಟಿಗಳ ಮೇಲೆ ನಗುವನ್ನು ತಂದುಕೊಂಡ : "ಜೀವ ಮೂರ ತೆಥಳಿದ ಮೇಲೆ ಒಡಲು ನೆರಳಿನಂತಾಗುವುದು ಸಹಜ."

"ನಾಯಕ, ಈ ನೀನು ಒಗಟಿನ ಅಂದದಲ್ಲಿ ಮಾತಾಡುವಿಯಲ್ಲ?"

"ಪಾಪಾತಿ, ಈ ಕುರುಬನಿಗೆ ಒಗಟಿನ ಸೊಗಸನ್ನು ಕಲಿಸಿದವರು ನೀವು! ನೀವು ಕೊಟ್ಟ ಕಂತೆಯನ್ನೇ ನಿಮ್ಮ ಮುಂದೆ ಬಿಚ್ಚುತಿದ್ದೇನೆ!"

"ನಾಯಕ, ನೀನೇಕೆ ಸೊರಗಿದೆ?"

"ಪಾಪಾತಿ, ನೀವು ಮೈಯನ್ನು ಉಗುರಿನಿಂದ ಪರಚಿ, ಗಾಯ ಪಾದುದೇಕೆ ಎಂದು ಕೇಳುವಿರಲ್ಲ!" ನಾಯಕನ ಕಣ್ಣುಗಳಿಂದ ನೀರ ಹನಿಗಳು ಉದುರಿದುವು.

"ನಾಯಕ, ನಾನು ನಿನ್ನ ನೋಯಿಸಿದೆನೇ?" ಲಕ್ಷ್ಮಿ ಹೆಗಲ ಮೇಲಿನ ಉತ್ತರೀಯವನ್ನು ತೆಗೆದು ನಾಯಕನ ಕಣ್ಣೀರನ್ನು ತೊಡೆಯ ಲೆಂದು ಮುಂದೆ ಹೆಜ್ಜೆ ಇರಿಸಿದಳು.

"ಪಾಪಾತಿ, ನನ್ನ ಮನಸ್ಸಿನ ಕುದಿತವನ್ನು ತಿಳಿಸಲು ನನಗೆ ಸರಿಯಾದ ಮಾತುಗಳು ದೊರಕವು. ಜೇನುಗೂಡೇ ಕುರುಬನ ಸಕಲ ಸಂಪತ್ತು. ಆ ಜೇನುಗೂಡನ್ನು ಕುರುಬನಿಲ್ಲದಾಗ ಅನ್ಯರು ಕಸಿದು ಕೊಂಡು ಹೋದರು. ಕುರುಬ ತಾನು ಕಳೆದುಕೊಂಡ ಜೇನುಗೂಡನ್ನು ನೆನೆದು ಕಣ್ಣೀರು ಹಾಕದಿರುವನೇ?"

ಹೃದಯದಲ್ಲಿ ಉಕ್ಕಿ ಬಂದ ವ್ಯಥೆಯನ್ನು ತಾಳಿಕೊಳ್ಳಲು ನಾಯಕ ನಿಂದಾಗಲಿಲ್ಲ. ಅವನು ಲಕ್ಷ್ಮಿಯ ಪಾದಗಳೆಡೆಯಲ್ಲಿ ಕುಸಿದು ಹೋದ. ಅವನ ವೇದನೆ ಉಮ್ಮಳಗಳನ್ನು ಕಂಡು ಲಕ್ಷ್ಮಿಯ ಕಣ್ಣುಗಳೂ ಕಂಬನಿಯನ್ನು ಮಿಡಿದುವು. ಅವಳು ಆತನ ಕೈ ಎತ್ತಿಕೊಂಡು ಮಿಡುಪಾಗಿ ತಡವಿದಳು. ಅವನು ಬೇಡವೆಂದು ಆಕೆಯನ್ನು ತಡೆಯಲಿಲ್ಲ. ಅವಳ ಸ್ಪರ್ಶ ಅವನ ಮನದ ಉದ್ವೇಗವನ್ನು ನೀಗುವ ಸಂಜೀವಿನಿಯಾಯಿತು. ಕೆಲವು ಕ್ಷಣಗಳ ತನಕ ಇಬ್ಬರ ಬಾಯಿಗಳಿಂದಲೂ ಮಾತುಗಳು ಹೊರಡ

ಲಿಲ್ಲ. ಕಣ್ಣುಗಳ ನೋಟ, ನೀಡುಸುಯ್ಲು ಮತ್ತು ಹಬ್ಬುಗಳ ಕುಣಿತ, ಇವೇ ತಮ್ಮ ಅಂತರಂಗದ ಭಾವಗಳನ್ನು ಪರಸ್ಪರ ತಿಳಿಸುವ ನುಡಿಗಳಾದುವು.

"ನಾಯಕ, ನಾನು ನಿನ್ನ ಮುಂದೆ ತಪ್ಪುಗಾರಳು!" ಲಕ್ಷ್ಮಿಯೇ ಕೊನೆಗೆ ತುಟಿದೆರೆದಳು: "ನಾನು ನಿನಗೆ ದ್ರೋಹ ಬಗೆದೆ; ನೀನು ಹೇಳಿದ ಹಾಗೆ ನಿನ್ನ ಜೀವವನ್ನೇ ಸುಲಿಗೆ ಮಾಡಿಕೊಂಡು ಬಂದೆ!"

"ನೀವು ಪಾಪಾತಿ! ನಿಮ್ಮ ತಪ್ಪು ಒಪ್ಪುಗಳನ್ನು ಹುಡುಕಲು ನಾನು ಯಾರು? ನೀವು ಈ ಕುರುಬ ಹುಡುಗನಿಗೆ ಒಲವೆಂದರೇನೆಂಬುದನ್ನು ಕಲಿಸಿಕೊಟ್ಟಿರಿ. ಪ್ರತಿಯಾಗಿ ನನ್ನ ಜೀವವನ್ನೇ ತಮ್ಮ ಅಡಿಗಳಲ್ಲಿರಿಸಿದೆ. ತಪ್ಪು, ಒಪ್ಪು ಮತ್ತು ದ್ರೋಹ ಇವುಗಳನ್ನೆಲ್ಲಾ ನಿರ್ಣಯಿಸಲು ನನಗೆ ಯಾವ ಅಧಿಕಾರವಿದೆ? ನಿಮ್ಮ ಮೋರೆಯನ್ನೊಮ್ಮೆ ನೋಡಬೇಕು; ಕಣ್ಣೀರಿನಿಂದ ನಿಮ್ಮ ಅಡಿಗಳನ್ನು ತೊಳೆಯಬೇಕು ಎಂಬ ಆಶೆಯನ್ನು ಕಟ್ಟಿಕೊಂಡಿದ್ದೆ. ಅದು ಇಂದಿಗೆ ಈಡೇರಿತು!" ಎಂದು ಹೇಳಿ ನಾಯಕ ಲಕ್ಷ್ಮಿಯ ಅಡಿಗಳಲ್ಲಿ ತಲೆಯನ್ನಿರಿಸಿ ಕಣ್ಣೀರು ಸುರಿಸಿದ. ಲಕ್ಷ್ಮಿ ಅವನ ತಲೆಯನ್ನು ಹಿಡಿದು ಮೇಲೆತ್ತಿದಳು.

"ಪಾಪಾತಿ, ನಾನಿನ್ನು ಹೋಗುವೆನು. ಬಹುದಿನಗಳಿಂದ ಎದೆಯಲ್ಲಿ ಇರಸಿಕೊಂಡಿದ್ದ ಬಯಕೆ ಇಂದು ಈಡೇರಿತು!"

ನಾಯಕ ಎದ್ದುನಿಂತು ಹೊರಡಲು ಅನುವಾದ. ಲಕ್ಷ್ಮಿ, "ಬೇಡ. ನಾಯಕ, ಹೋಗದಿರು!" ಎಂದು ಅಂಗಲಾಚಿ ಬೇಡಿದಳು.

"ಪಾಪಾತಿ, ಬೇಡಿ. ಈಗ ನೀವು ತಂಬ್ರಾಕಳ ಮಠವನ್ನು ಸೇರಿದ್ದೀರಿ." ನಾಯಕ ನಿಡುಸುಯ್ಲೊಂದನ್ನು ಹೊರಚೆಲ್ಲಿದ: "ನಾನು ನಿಮ್ಮ ಹತ್ತಿರ ಸುಳಿದಾಡುವುದನ್ನು ಯಾರಾದರೂ ಕಂಡರೆ ನಿಮಗೆ ಕೇಡು ತಪ್ಪೀತು. ನೀವು ಬಾಳ್ವೆ ಜೇನಿಗಿಂತಲೂ ಸವಿ ಎಂಬುದನ್ನು ಹಿಂದೆ ಕಲಿಸಿಕೊಟ್ಟಿರಿ. ಆ ನೆನಪನ್ನು ಎದೆಯೊಳಗೆ ಭದ್ರವಾಗಿಟ್ಟುಕೊಂಡು ಉಳಿದ ದಿನಗಳನ್ನು ಕಳೆಯುವೆನು!"

ನಾಯಕನ ದರ್ಶನ ಮತ್ತು ಸ್ಪರ್ಶನಗಳಿಂದ ಲಕ್ಷ್ಮಿಯ ಮೈಮನಗಳು ಕೆರಳಿದುವು. ಹಿಂದಣ ಸವಿನೆನಪುಗಳೆಲ್ಲ ಅವಳ ಚಿತ್ತಸಮುದ್ರ

ದಲ್ಲಿ ತೇಲಾಡಿದುವು. ನಾಯಕನನ್ನು ಕಳುಹಿಗೊಡಲು ಅವಳ ಮನಸ್ಸು ಒಪ್ಪಲಿಲ್ಲ. ಅವಳು, "ನಾಯಕ, ನಾನು ಇಷ್ಟು ಸುಲಭವಾಗಿ ನಿನ್ನ ಬಿಟ್ಟುಗೊಡಲಾರೆ. ನೀನು ಮಿಂಚಿನಂತೆ ಸುಳಿದು ಮಾಯವಾಗುವ ಸಲುವಾಗಿ ನಿನ್ನ ಬರಹೇಳಲಿಲ್ಲ." ಎಂದು ಉಲಿದಳು.

"ಪಾಪಾತಿ, ಮತ್ತಿನ್ನೇನು ಮಾಡಲಿ?"

"ನಾನು ಕೊಡುವ ತಾಂಬೂಲವನ್ನಾದರೂ ನೀನು ಮೆದ್ದು ಹೋಗಬೇಕು."

ಲಕ್ಷ್ಮಿ ತನ್ನ ಮಡಿಲಲ್ಲಿ ಇದ್ದ ತಾಂಬೂಲವನ್ನು ಎತ್ತಿ ಅವನ ಕೈಗಳಿಗೆ ಹಾಕಿದಳು.

"ಪಾಪಾತಿ, ಜನ ನಮ್ಮನ್ನು ಕಂಡಾರು!" ಅಳುಕು ತುಂಬಿದ ಸ್ವರದಲ್ಲಿ ನಾಯಕ ಮಾರ್ನುಡಿದ.

"ನನ್ನ ಸಂಗಾತ ಬಾ." ಲಕ್ಷ್ಮಿ ನಾಯಕನ ಕೈಹಿಡಿದುಕೊಂಡು ಪೊದೆಯೊಳಗೆ ನುಸುಳಿದಳು. ಆ ಸ್ಥಳವೆಲ್ಲ ಅವಳಿಗೆ ಪರಿಚಿತವಾದುದು. ಯಾರ ದೃಷ್ಟಿಗೂ ಬೀಳದ ಗೋಪ್ಯಸ್ಥಾನ ಹೊಳೆದಂಡೆಯಲ್ಲಿ ಎಲ್ಲಿದೆ ಎಂಬುದನ್ನು ಅವಳು ಬಲ್ಲಳು. ಅವಳು ಪೊದೆಗಳ ಎಡೆಯಲ್ಲಿ ನುಸುಳಿ ಈ ಗೋಪ್ಯಸ್ಥಳಕ್ಕೆ ನಾಯಕನನ್ನು ಕರೆದುಕೊಂಡು ಹೋದಳು.

ಒಂದು ಬದಿಯಲ್ಲಿ ಬಿದಿರ ಮೆಳೆಗಳು ನಿಬಿಡವಾಗಿ ಬೆಳೆದು ನಿಂತಿದ್ದುವು. ಇನ್ನೊಂದೆಡೆಯಲ್ಲಿ ಪೊದೆಗಳು ಆಳೆತ್ತರಕ್ಕೆ ಬೆಳೆದಿದ್ದುವು. ಇವುಗಳೆಡೆಯಲ್ಲಿ ಎಳೆಯ ಚಿಗುರುಗಳನ್ನು ಹೊತ್ತು ನಿಂತ ಮಾವಿನ ಮರವಿತ್ತು. ಆ ಮರ ಕೆಂದಳಿರುಗಳನ್ನು ತಳೆದ ಕವಲ್ಗೊಂಬೆಗಳನ್ನು ಅಲುಗಿಸಿ, "ನಾನು ನಿಮ್ಮಿಬ್ಬರಿಗೂ ಆಸರೆ ಕೊಡುವೆನು." ಎಂದು ಆಹ್ವಾನಿಸಿತು.

ಅವರಿಬ್ಬರೂ ಮರದೆಡೆಗೆ ಸಾಗಿದರು. ಲಕ್ಷ್ಮಿ, "ನಾಯಕ, ನೀನು ಇಲ್ಲಿ ನಿರ್ಭಯವಾಗಿ ಕುಳಿತುಕೋ. ಇಲ್ಲಿ ಯಾರೂ ನಮ್ಮನ್ನು ಕಾಣರು. ನಾವಿಲ್ಲಿ ಯಾರ ಅಂಜಿಕೆಯೂ ಇಲ್ಲದೆ ಎಷ್ಟು ಹೊತ್ತು ಬೇಕಾದರೂ ಕುಳ್ಳಿರಬಹುದು." ಎಂದು ನುಡಿದಳು.

"ನನ್ನ ಪೊನ್ನು ಪಾಪಾತಿಯನ್ನು ಬರಿನೆಲದ ಮೇಲೆ ಕುಳ್ಳಿರಿಸಲಾ?".

ನಾಯಕ ಕೇಳಿದ.

"ಮತ್ತೆಲ್ಲಿ ಕುಳ್ಳಿರಲಿ ?"

"ತುಸ ತಡೆಯಿರಿ. ನನ್ನ ಎದೆಯರಸಿಗೆ ತಳಿರ ಹಾಸನ್ನು ಏರ್ಪಡಿಸಿಕೊಡುವೆನು." ಎಂದು ನುಡಿದು ನಾಯಕ ಸೊಂಟಕ್ಕೆ ಕತ್ತಿಯನ್ನು ಸೆಕ್ಕಿಸಿಕೊಂಡು ಮಾವಿನ ಮರವನ್ನೇರಿದ. ಅವನು ಮರದ ಕೊಂಬೆಗಳಿಂದ ಒಂದು ಹೊರೆ ಚಿಗುರುಗಳನ್ನು ಕಿತ್ತು ಹಾಕಿದ. ಅವನು ಮರದಿಂದ ಇಳಿದು ಬಂದು ನೆಲದ ಮೇಲೆ ಆ ಎಳೆಯ ತಳಿರುಗಳನ್ನು ಹಾಸಿದ. ಅವನು, "ಪಾಪಾತಿ, ಈ ತಳಿರ ಹಾಸಿನ ಮೇಲೆ ಕುಳ್ಳಿರಿ." ಎಂದು ಲಕ್ಷ್ಮಿಯನ್ನು ಆಮಂತ್ರಿಸಿದ.

"ನೀನೂ ಬಾ."

"ನಾನೊಲ್ಲೆ. ನೀವು ಈಗ ತಂಬ್ರಾಕಳ ಮಡದಿ."

"ಅಲ್ಲ. ನನ್ನನ್ನು ಒಬ್ಬ ಕುರುಬಿತಿ ಎಂದು ತಿಳಿದುಕೋ" ಎಂದು ಉಲಿದು ಲಕ್ಷ್ಮಿ ನಾಯಕನನ್ನು ಕೈ ಹಿಡಿದು ತನ್ನ ಪಕ್ಕದಲ್ಲಿ ಕುಳ್ಳಿರಿಸಿಕೊಂಡಳು. ಮಾವಿನ ಮರ ಅವರ ಬೆನ್ನುಗಳಿಗೆ ಆಸರೆ ಕೊಟ್ಟಿತು.

ಈರ್ವರ ಮೈಗಳು ಪರಸ್ಪರ ಸೋಂಕಿದುವು. ಕುರುಬನ ಮೈಯ ಬೆವರಿನ ಕಂಪು ಅವಳ ಮೂಗನ್ನು ಸೇರಿ ಅವಳ ಮೈಯ ನರನರಗಳನ್ನು ಕೆರಳಿಸಿತು. ಆಕೆಯ ಕಣ್ಣುಗಳು ದೀಪ್ತಿಮಂತವಾದುವು. ಅವಳು, "ನಾಯಕ, ನಿನ್ನನ್ನು ಕಾಣದೆ ನಾನೆಷ್ಟು ಬವಣೆಗೊಂಡಿದ್ದೇನೆ ಎಂಬುದನ್ನು ನೀನರಿಯೆ" ಎಂದು ಹೇಳಿದಳು.

"ಪಾಪಾತಿ, ನೀವು ಈ ಕುರುಬ ಹುಡುಗನನ್ನು ಕಾಣದೆ ಖಿನ್ನ ಪಟ್ಟಿರಾ ?" ನಾಯಕ ಬೆರಳುಗಳಿಂದ ಲಕ್ಷ್ಮಿಯ ಕೂದಲನ್ನು ನೇವರಿಸಿದ.

"ನಾಯಕ, ನನ್ನ ಮಾತು ದಿಟ. ನಾನು ನಿನ್ನ ನೆನೆಯದ ದಿನವಿಲ್ಲ. ನಿನ್ನ ಮರೆಯಬೇಕೆಂದು ನಾನು ಎಷ್ಟು ಶ್ರಮ ಪಟ್ಟೆ; ಎಷ್ಟು ಸಾಹಸ ಮಾಡಿದೆ! ಆದರೆ ಈ ಪ್ರಯತ್ನ ಮತ್ತು ಸಾಹಸಗಳಲ್ಲಿ ಸೋಲನ್ನು ಪಡೆದೆ."

"ಪಾಪಾತಿ, ನೀವು ನನ್ನ ಮರೆತು ಬಿಟ್ಟಿದ್ದರೆ ಲೇಸಾಗುತಿತ್ತು."

"ನಾಯಕ, ನಿನ್ನ ಮರೆಯುವುದೇ ?" ಲಕ್ಷ್ಮಿ ಪೇರುಸಿರೊಂದನ್ನು ಹೊರಚೆಲ್ಲಿದಳು : "ನಾನು ನಿನ್ನನ್ನು ಮರೆಯಬೇಕಾದರೆ ಈ ಒಡಲಿನಿಂದ ಪ್ರಾಣ ಹಾರಿ ಹೋಗಬೇಕು. ಸೋಹು, ಈಗೀಗಂತೂ ನಿನ್ನ ಹಂಬಲಿಸಿ ನಾನು ಅರೆಹುಚ್ಚಿಯಾಗಿ ಹೋಗಿದ್ದೇನೆ."

ನಾಯಕ ಪಡಿನುಡಿಯಲಿಲ್ಲ. ಆವನಿಗೆ ಹೃದಯ ವ್ಯಥೆಯನ್ನು ಹೊರಹಾಕಲು ತಕ್ಕ ನುಡಿಗಳು ದೊರೆಯಲಿಲ್ಲ.

"ನಾಯಕ, ಸಾವು ಬರುವ ವರೆಗೆ ಹೀಗೆಯೇ ಇದ್ದು ಬಿಡೋಣ ಎಂದು ಅನಿಸುತ್ತದೆ." ಲಕ್ಷ್ಮಿ ನಾಯಕನ ಎದೆಯ ಮೇಲೆ ತಲೆಯನ್ನಿರಿಸುತ್ತಾ ಅಂದಳು : "ನನಗೆ ಮನೆ ಬೇಡ; ಮಠ ಬೇಡ; ಏನೂ ಬೇಡ!"

ಮೆಲ್ಲಲೆಂದು ನಾಯಕ ಪಾಕಿನಿಂದ ವೀಳ್ಯದೆಲೆ ಅಡಿಕೆಗಳನ್ನು ಹೊರತೆಗೆದ. ಅದನ್ನು ಕಂಡು ಲಕ್ಷ್ಮಿ, "ಇಲ್ಲಿ ಕೊಡು. ನಾನು ಎಲೆಗೆ ಸುಣ್ಣ ಹಚ್ಚಿ ಕೊಡುವೆನು." ಎಂದು ಹೇಳಿ ಕಿತ್ತುಕೊಂಡಳು. ಅವಳು ವೀಳ್ಯದೆಲೆಯ ಮೇಲಿನ ನಾರು ತೆಗೆಯುತ್ತಾ, "ಸುಣ್ಣದ ಕರಡಿಗೆ ಎಲ್ಲಿ ?" ಎಂದು ಕೇಳಿದಳು.

ನಾಯಕ ಮಾತಾಡಲಿಲ್ಲ. ಅವನು ಪಾಕಿನೊಳಗೆ ಕೈಹಾಕಿ ಸುಣ್ಣದ ಕರಡಿಗೆಯನ್ನು ತೆಗೆದು ಪಾಪಾತಿಯ ಕೈಗೆ ಕೊಟ್ಟ. ಅವಳು ಕರಡಿಗೆಯ ಮುಚ್ಚಳವನ್ನು ತೆಗೆದು ಎಲೆಗೆ ಸುಣ್ಣ ಹಚ್ಚಿ ಅಡಿಕೆ ಸೇರಿಸಿ ನಾಯಕನ ಬಾಯಿಗೆ ಕೊಟ್ಟಳು.

ನಲೆ ಇತ್ತ ತಾಂಬೂಲವನ್ನು ಸ್ವೀಕರಿಸಿ ನಾಯಕ ಮೆಲ್ಲತೊಡಗಿದ. ಆತನ ಬಾಯೊಳಗಿಂದ ಉದುರಿದ ರಸಕಣಗಳೆರಡು ಲಕ್ಷ್ಮಿ ತೊಟ್ಟ ಕುಪ್ಪಸದ ಮೇಲೆ ಬಿದ್ದು ರಂಗನ್ನು ಮೆತ್ತಿದುವು.

"ಪಾಪಾತಿ, ನಾನು ನಿಮ್ಮ ಕುಪ್ಪಸವನ್ನು ಕೆಡಿಸಿದೆನಲ್ಲ !" ನಾಯಕ ಉಸುರಿದ.

"ನಾಯಕ, ಕೆಡಲಿ. ನೀನು ಹೊರಟು ಹೋದ ಮೇಲೆ ನೀನಿತ್ತ ಒಲವಿನ ಗುರುತೆಂದು ನಾನು ಆ ಕೆಂಪು ಕಲೆಯನ್ನು ನೋಡಿ ಸಂತೋಷ ತಾಳುವೆನು."

ಲಕ್ಷ್ಮಿಯ ಜೀವ ಸಂಯಮದ ಸಂಕಲೆಗಳನ್ನು ಕಡಿಯೊಗೆದಿತು.

ಅವಳು ನೀತಿ ಸದಾಚಾರಗಳ ಎಲ್ಲೆಗಳನ್ನು ದಾಟಿ ತನ್ನ ತೋಳುಗಳ ಹಾರವನ್ನು ಕುರುಬ ಹುಡುಗನ ಕೊರಳಿಗೆ ಸೂಡಿದಳು. ಅವಳು ಮಳೆ ಹನಿಯನ್ನು ಕಂಡ ಚಾದಗೆಯಂತೆ ತವಕಗೊಂಡು ಆತನ ತುಟಿಗಳಿಂದ ಜಿನುಗುತಿದ್ದ ತಾಂಬೂಲ ರಸವನ್ನು ಹೀರಿದಳು. ಆಕೆಯ ಮೈಮುಳ್ಳು ಗಳು ಎದ್ದು ನಿಂತುವು. ಎದೆಯೊಳಗಿದ್ದ ಭಾವತರಂಗಗಳ ಹೊಯ್ಲಿ ನಿಂದ ಅವಳ ದೇಹ ಗಾಳಿಗೆ ಸಿಲುಕಿದ ಮಾಂದಳಿರಂತೆ ಅಲುಗಾಡಿತು. ಅವಳ ಕಣ್ಣುಗಳು ಒಲವಿನ ಮಡುಗಳಾದುವು.

" ನಾಯಕ, ಈ ಅಮೃತಗಳಿಗೆ ಯಾವಾಗ ಬರುವುದೆಂದು ನಾನು ಇದಿರು ನೋಡುತಿದ್ದೆ. " ಎಂದು ಪಿಸುದನಿಯಲ್ಲಿ ಉಸುರಿದಳು.

" ಪಾಪಾತಿ, ಈಗ ನೀವು ತಂಬ್ರಾಕಳ ಮಡದಿ. " ನಾಯಕನ ಕೊರಳಿಂದ ಕಂಪಿತ ಸ್ವರ ಹೊರಟಿತು : " ಅಮೃತಗಳಿಗೆ ಇನ್ನೊಂದು ಕ್ಷಣದಲ್ಲಿ ವಿಷಯಗಳಿಗೆ ಯಾಗುವುದೋ ಎಂದು ನನ್ನ ಮನಸ್ಸು ದಿಗಿಲು ಗೊಂಡಿದೆ ! "

" ಇಲ್ಲ ನಾಯಕ ಇದು ವಿಷಯಗಳಿಗೆ ಯಾಗದು. ಎಂಜಲು ಹಣ್ಣನ್ನು ನಿನಗೆ ಈಯುದೆನೆಂದು ಕೋಪವೇ ? "

" ಇಲ್ಲ. ಕುರುಬನಿಗೆ ಎಂಜಲು ಹಣ್ಣು ಹೊಸತಲ್ಲ. "

" ನೀನು ಒಲ್ಲೆ ಎಸಬೇಡ. ನೀನೀಗ ನನ್ನ ಕೈಹಿಡಿದೆತ್ತದಿದ್ದರೆ ನಾನು ನಡುನೀರಲ್ಲಿ ಮುಳುಗಿ ಹೋಗುವೆನು. "

ನಾಯಕನ ಮನೋನಿಗ್ರಹದ ಕಟ್ಟು ಒಡೆದು ಹೋಯಿತು. ಬಯಕೆಯ ಮಹಾಪೂರದಲ್ಲಿ ಆ ಎರಡು ಜೀವಗಳು ಕೊಚ್ಚಿ ಹೋದುವು.

ಅವರು ಪರಸ್ಪರ ಆಲಂಗಿಸಿಕೊಂಡು ಎಷ್ಟು ಹೊತ್ತು ಇದ್ದ ರೆಂಬುದು ಅವರಿಗೇ ತಿಳಿಯದು. ಅವರ ಜೀವಗಳು ಸ್ಥಳ ಕಾಲಗಳ ಸೀಮೆಯನ್ನು ದಾಟಿ ಆಚೆಗಿನ ಬಯಲಲ್ಲಿ ವಿಹರಿಸುತಿದ್ದುವು. ಅಲ್ಲಿ ಚೆಲುವು ನಲವು ವಿಲಾಸಗಳಲ್ಲದೆ ಬೇರೇನೂ ಇರಲಿಲ್ಲ. ಅವರ ಜೀವ ಗಳು ಗಾಳಿಗಿಂತ ಹಗುರಾಗಿದ್ದುವು.

೨೬

ಪೊದೆಗಳ ಎಡೆಯಿಂದ ಹೊರಟು ಬಂದ ಈರ ಈಟ ಎಂಬ ಸದ್ದು ಮುಗಿಲಮಂಡಲದಲ್ಲಿ ಹಾರಾಡುತಿದ್ದ ಆ ಪ್ರಣಯಿಗಳನ್ನು ಮರಳಿ ಭೂಮಿಯ ಎಡೆಗೆ ಸೆಳೆದು ತಂದಿತು. ಮೊಲವನ್ನೋ, ಹಕ್ಕಿಯನ್ನೋ ಹುಡಕುತ್ತಾ ಪಣಿಯರು ಯಾರಾದರೂ ಬಂದಿರಬೇಕೆಂದು ಲಕ್ಷ್ಮಿಗೆ ಅಂಜಿಕೆಯಾಯಿತು. ಅವಳು ನಾಯಕನ ಮೈ ಮೇಲಿಂದ ಕೈ ತೆಗೆದು ಎದ್ದುನಿಂತಳು. ಅವಳು ಜಾರಿದ ಪೊಡವೆಯನ್ನು ಸೊಂಟಕ್ಕೆ ಸುತ್ತಿಕೊಂಡಳು. ಕುಪ್ಪಸದ ಗುಂಡಿಗಳನ್ನು ಹಾಕಿಕೊಂಡಳು. ಅವಳು ನಾಯಕನಿದ್ದಲ್ಲಿಂದ ಮಾವಿನ ಮರದ ಮರೆಗೆ ಸರಿದು ನಿಂತಳು.

ಲಕ್ಷ್ಮಿ ಕೆಂಪೇರಿದ ಮೋರೆಯೊಡನೆ ಸದ್ದು ಬಂದೆಡೆಗೆ ಕಣ್ಣೋಡಿಸಿದಳು. ಪೊದೆಗಳನ್ನು ಮುರಿದು ನೆಲಸಮ ಮಾಡುತ್ತಾ ಶಂಕರ ಬರುತಿದ್ದ. ಕಾಲಿಗೆ ಬಿಗಿದ ಸಂಕಲೆ ಗಿಡಗಳಿಗೆ ತಗಲಿ ಘಣಘಣನೆ ಸದ್ದಾಗುತಿದ್ದಿತು. ಆನೆ ತ್ವರಿತ ಗತಿಯಲ್ಲಿ ಹೆಜ್ಜೆಗಳನ್ನಿರಿಸುತ್ತಾ ಮಾವಿನ ಮರದೆಡೆಗೇ ಬರುತಿತ್ತು. ನಾಯಕ ತಾನು ಆನೆಯನ್ನು ಕಟ್ಟಿ ಹಾಕುವೆನೆಂದು ಹೇಳಿದ್ದ. ಈಗ ಅದು ಸಂಕಲೆಯನ್ನು ತುಂಡುಮಾಡಿ ತಾವಿರುವ ಎಡೆಗೆ ಬಂದುದನ್ನು ಕಂಡು ಅವಳಿಗೆ ಆಶ್ಚರ್ಯವಾಯಿತು. ಅವಳು, "ನಾಯಕ, ಶಂಕರ ಸಂಕಲೆಯನ್ನು ತುಂಡರಿಸಿಕೊಂಡು ಬಂದಿದ್ದಾನೆ!" ಎಂದು ಉದ್ಗಾರವೆತ್ತಿದಳು.

"ಶಂಕರನೇ!" ನಾಯಕ ವಿಸ್ಮಯದ ದನಿಯನ್ನೆತ್ತಿದ: "ಅವನನ್ನು ನಾನು ಕಟ್ಟಿಹಾಕಿ ಬಂದಿದ್ದೆ."

ನಾಯಕ ಕೈಯಲ್ಲಿ ಅಂಕುಶವನ್ನೆತ್ತಿಕೊಂಡು ಎದ್ದುನಿಂತ. ನೆಲದ ಮೇಲೆ ಬಿದ್ದ ವಸ್ತ್ರವನ್ನು ಸೊಂಟಕ್ಕೆ ಸುತ್ತಿಕೊಂಡ. ಆನೆಯಾದರೋ ಹುಚ್ಚೆದ್ದು ತನಗೆ ಅಡ್ಡ ಬಂದ ಗಿಡ ಪೊದೆಗಳನ್ನೆಲ್ಲಾ ಮುರಿಯುತ್ತಾ, ಮುರಿದ ಗಿಡಗಳನ್ನು ಸೊಂಡಿಲಿನಿಂದ ಎತ್ತಿ ದಿಕ್ಕು ದಿಕ್ಕುಗಳಿಗೆ ಒಗೆಯುತ್ತಾ ಬರುತಿದ್ದಿತು. ಅದರ ಬರವು ನಾಯಕನನ್ನು ಚಿಂತೆಗೀಡು ಮಾಡಿತು. ಅವನು ಪಾಪಾತಿಯ ಕಡೆ ಕಣ್ಣು ಹೊರಳಿಸಿ, "ಪಾಪಾತಿ, ನೀವು ಪೊದೆಗಳ ಎಡೆಯಿಂದ ನುಸುಳಿ ಹೊಳೆಯ ದಂಡೆಗೆ ಇಳಿಯಿರಿ."

ಎಂದು ಹೇಳಿದ.

"ಏಕೆ? ನಾಯಕ, ನೀನಿರುವಾಗ ಭಯವೇನು?"

"ಪಾಪಾತಿ, ನೀವು ಬೇಗ ಹೋಗಿ ಶಂಕರನೇಕೋ ತುಂಬಾ ಮುನಿದುಕೊಂಡಿದ್ದಾನೆ."

"ನೀನು?"

"ನಾನು ಅವನನ್ನು ಸಮಾಧಾನಗೊಳಿಸಿ ಮರವೊಂದಕ್ಕೆ ಕಟ್ಟಿ ಹಾಕುವೆನು." '

"ನಿನಗೆ ಆನೆ ಕೇಡುಮಾಡದೇ?"

"ನನ್ನ ಮೇಲೆ ಶಂಕರ ರೇಗಿ ಎರಗನು. ಕಳೆದ ಆರು ವರ್ಷಗಳಿಂದ ಅವನಿಗೆ ನನ್ನ ಪರಿಚಯವಿದೆಯಲ್ಲ! ನೀವು ತಡ ಮಾಡಬೇಡಿ. ವಿಲಂಬಿಸಿದರೆ ಕೆಲಸ ಕೆಟ್ಟು ಹೋದೀತು!"

ನಾಯಕನ ಮಾತಿನಲ್ಲಿ ಅಂಜಿಕೆ ತುಂಬಿತ್ತು; ಅಪಾಯದ ಸೂಚನೆ ಇತ್ತು. ಅವಳು ಪೊದೆಗಳ ಎಡೆಯಲ್ಲಿ ನುಸುಳಿ ಹೋದಳು. ಹತ್ತೆಂಟು ಮಾರುಗಳ ದೂರ ಸಾಗುವನಿತರಲ್ಲಿ ಅವಳಿಗೆ ಹೊಳೆ ದಂಡೆ ದೊರೆತಿತು. ಅವಳು ಬಿದಿರ ಮೆಳೆಗಳ ನಡುವೆ ನುಸುಳಿ ಹೊಳೆಯ ದಂಡೆಗೆ ಇಳಿದಳು. ಕಾಲುಗಳಿಗೆ ಬಿದಿರಿನ ಮುಳ್ಳುಗಳು ನಾಟಿದುವು. ಮುಳ್ಳುಗಳು ಅವಳ ತೋಳು ಮತ್ತು ಬೆನ್ನುಗಳನ್ನು ಗೀರಿದುವು. ಗೀರಿದ ಗಾಯಗಳಿಂದ ನೆತ್ತರ ಹನಿಗಳು ಒಸರಿದುವು.

ಲಕ್ಷ್ಮಿ ಹೊಳೆ ದಂಡೆಯಲ್ಲಿರುವ ಮರಳ ಹಾಸನ್ನು ಸೇರಿದಳು. ಅವಳು ಮರಳ ಮೇಲೆ ಕುಳಿತು ಕಾಲುಗಳಿಗೆ ನಾಟಿದ ಬಿದಿರು ಮುಳ್ಳುಗಳನ್ನು ಕಿತ್ತಳು. ಇನ್ನೊಂದು ಕ್ಷಣದಲ್ಲಿ ನಾಯಕ ಆನೆಯನ್ನು ಕಟ್ಟಿ ಹಾಕಿ ಬಂದಾನು ಎಂದು ಉತ್ಸುಕತೆಯಿಂದ ನಿರೀಕ್ಷಿಸಹತ್ತಿದಳು.

ನಾಯಕ ಶಂಕರನ ಬರವನ್ನು ಕಂಡು ತಾನು ನಿಂತ ಸ್ಥಳದಿಂದ ಕದಲಲಿಲ್ಲ. ಆನೆ ಮದವೇರಿದೆ ಎಂಬುದು ಅವನಿಗೆ ತಿಳಿಯದು. ಆನೆ ಯಾದರೋ ತನ್ನ ಕಾಲುಗಳನ್ನೆತ್ತಿ ಪೊದೆಗಳನ್ನು ತುಳಿದು ನುಚ್ಚು ನುರಿ ಮಾಡುತ್ತಾ ಬಂದಿತು. ಅದರ ಕಣ್ಣುಗಳು ಕೆಂಪಡರಿದ್ದುವು. ಅದರ ಕಣ್ಣುಗಳನ್ನು ಕಂಡೊಡನೆ ಆನೆಕಾರನ ಎದೆಯಲ್ಲಿ ಭೀತಿಯ ಅಲೆಯೊಂದು

ಎದ್ದಿತು. ತಾನು ಮಾವಿನ ಮರವನ್ನೇರಿ ಆನೆಯ ಮನಸಿನಿಂದ ಪಾರಾಗಲೇ ಎಂದು ಅವನೊಮ್ಮೆ ಆಲೋಚಿಸಿದ. ಶಂಕರ ತನಗೆ ಕೇಡು ಮಾಡನು ಎಂಬ ಆತ್ಮವಿಶ್ವಾಸ ಅವನನ್ನು ತಡೆದು ನಿಲ್ಲಿಸಿತು. ಅವನು ಅಂಕುಶವನ್ನೆತ್ತಿ, "ಶಂಕರ, ಇದೇನು ಇಷ್ಟೊಂದು ಕೋಲಾಹಲ! ನೀನೇಕೆ ಈ ಪಾಟಿ ಮುನಿಸು ತಾಳಿದೆ? '' ಎಂದು ಆನೆಯನ್ನು ಕೇಳಿದ.

ಆನೆ ಮೊರದಗಲದ ಕಿವಿಗಳನ್ನೊಮ್ಮೆ ಬಡಿದುಕೊಂಡಿತು. ಅದು ನಿಂತು ಆನೆಕಾರನನ್ನೇ ದಿಟ್ಟಿಸಿ ನೋಡಿತು. ಕಾಲಡಿಯಲ್ಲಿದ್ದ ಪೊದೆಯನ್ನು ಮೂರು ನಾಲ್ಕು ಸಲ ತುಳಿದು ಹುಡಿ ಹುಡಿ ಮಾಡಿತು.

"ಶಂಕರ, ಈ ಪಾಟಿ ರೊಚ್ಚು ಯಾರ ಮೇಲೆ ? ಸ್ವಲ್ಪ ಸಮಾಧಾನ ತಂದುಕೋ." ನಾಯಕ ಚದರಿ ಹೋಗುತಿದ್ದ ಧೈರ್ಯವನ್ನು ಜತೆಗೂಡಿಸುತ್ತಾ ಹೇಳಿದ: "ನೋಡು, ಇಂದು ಗುಡಿಯಲ್ಲಿ ಜಾತ್ರೆ. ನಿನಗೆ ತೆಂಗಿನಕಾಯಿ, ಬೆಲ್ಲ ಮತ್ತು ಬಾಳೆಹಣ್ಣುಗಳ ಸಮಾರಾಧನೆಯನ್ನೇ ಮಾಡಿಬಿಡುವೆನು."

ಶಂಕರ ಎರಡು ಹೆಜ್ಜೆ ಮುಂದಿರಿಸಿದ. ನಾಯಕ ನಿಂತಲ್ಲಿಂದ ಕದಲಲಿಲ್ಲ. ಅವನು, "ಶಂಕರ, ಬಾ ಈ ಕೋಪಾಟೋಪಗಳು ಬೇಡ. ನಿನಗೆ ಇನ್ನೂ ಜಳಕ ಮಾಡಿಸಿಲ್ಲ. ಬಾ ಹೊಳೆಯಲ್ಲಿ ನಿನ್ನ ಮೀಯಿಸುವೆನು." ಎಂದು ನುಡಿದ.

ಶಂಕರ ಕಿವಿಗಳನ್ನು ಅಲುಗಿಸಿದ. ನಾಯಕ ಆನೆಕಾರನನ್ನೇ ಒಮ್ಮೆ ದಿಟ್ಟಿಸಿ ನೋಡಿದ. ನಾಯಕ ಆನೆಗೇನೋ ಸ್ವಲ್ಪ ಮದವೇರಿದೆ; ಆದರೆ ಅದರಿಂದ ಅಪಾಯವೇನೂ ಸಂಭವಿಸದು ಎಂದು ತನ್ನಲ್ಲಿಯೇ ಹೇಳಿಕೊಂಡು ಶಂಕರನ ಹತ್ತಿರ ಸರಿದ. ಆನೆಯ ಹತ್ತಿರ ನಿಂತು ಮೆಲ್ಲನೆ ಕೈಚಾಚಿ ಅದರ ಪಕ್ಕೆಯನ್ನು ಮುಟ್ಟಿದ. ಮೆಲ್ಲನೆ ಅಂಗೈಯಿಂದ ಆನೆಯ ಮೈಯನ್ನು ಸವರಿದ. ಆನೆ ಅಲುಗಲಿಲ್ಲ. ಅದೇನೂ ಉಪದ್ರವ ಮಾಡದೆಂದು ಅವನಿಗೆ ನಂಬಿಕೆಯಾಯಿತು. ಅವನು ಬಾಗಿ ಆನೆಯ ಕಾಲಿನ ಸಂಕಲೆಯನ್ನು ಎತ್ತಿ ಪರೀಕ್ಷಿಸಿದ. ಸಂಕಲೆ ಎರಡು ತುಂಡಾಗಿ ಹೋಗಿತ್ತು. ಕಾಲಿನಲ್ಲಿ ಉಳಿದ ಸಂಕಲೆಯಿಂದ ಆನೆಯನ್ನು ಮರಕ್ಕೆ ಬಿಗಿದು ಕಟ್ಟಲು ಸಾಧ್ಯವಿರಲಿಲ್ಲ. ಉಪಾಯದಿಂದ ಆನೆಯನ್ನು

ಗುಡಿಗೆ ಒಯ್ಯಬೇಕು; ಯಾರಿಂದಲಾದರೂ ಸಂಕಲೆಯನ್ನು ಕೇಳಿ ತಂದು ಆನೆಯನ್ನು ಮರಕ್ಕೆ ಬಿಗಿದು ಕಟ್ಟಬೇಕು ಎಂದು ಅವನು ಆಲೋಚಿಸಿದ.

ನಾಯಕ ಬೆರಳುಗಳಲ್ಲಿ ಹಿಡಿದ ಸಂಕಲೆಯನ್ನು ಕೆಳಗೆ ಹಾಕಿದ. ಅವನ ಮೈ ನಸು ಅಲ್ಲಾಡಿತು. ಅವನು ಕಂಕುಳದಲ್ಲಿ ಸಿಕ್ಕಿಸಿಕೊಂಡಿದ್ದ ಅಂಕುಶ ಆನೆಯ ಸೊಂಡಿಗೆ ತಗಲಿತು. ಮುಂದೇನಾಗುವುದು ಎಂದು ನಾಯಕ ಆಲೋಚಿಸುವ ಮುನ್ನ ಆನೆ ಸರಕ್ಕನೆ ತಿರುಗಿತು, ಅದು ಸೊಂಡಿಲನ್ನೆತ್ತಿ ಭಯಂಕರ ಧ್ವನಿಯಲ್ಲಿ ಘೀಳಿಟ್ಟಿತು.

ಆ ಕರ್ಕಶ ಧ್ವನಿ ನಾಯಕನ ಮೈಯನ್ನು ಥರಥರನೆ ನಡುಗಿತು. ಆನೆ ರೊಚ್ಚಿಗೆದ್ದಿದೆ; ಅದು ತನಗೆ ಕೇಡು ಮಾಡದೆ ಬಿಡದು ಎಂಬುದು ಅವನಿಗೆ ಖಚಿತವಾಯಿತು. ಓಡಿ ಹೋಗಿ ಮಾವಿನ ಮರವನ್ನೇರುವೆ ನೆಂದು ಅವನು ದ್ರುತಗತಿಯಲ್ಲಿ ಹೆಜ್ಜೆಗಳನ್ನಿರಿಸಿದ.

ಆದರೆ ಆನೆ ವೇಗವಾಗಿ ಹೆಜ್ಜೆಗಳನ್ನಿಡುತ್ತಾ ನಾಯಕನನ್ನು ಹಿಂಬಾಲಿಸಿತು. ಅದು ಓಡುತ್ತಿದ್ದ ನಾಯಕನ ಕಾಲನ್ನು ಸೊಂಡಿಲಿನಿಂದ ಸುತ್ತಿ ಮೇಲೆತ್ತಿತು. ಅವನ ಜೀವ ಮರಣ ಭಯದಿಂದ ತಲ್ಲಣಿಸಿ ಹೋಯಿತು. ಅವನು ಭೀತಿಯ ಧ್ವನಿಯಲ್ಲಿ, "ಪಾಪಾತಿ, ಶಂಕರಾ........" ಎಂದು ಉದ್ಗಾರವೆತ್ತಿದ. ಅವನು ಮಾತು ಮುಗಿಸುವ ಮುನ್ನ ಆನೆಯ ಸೊಂಡಿಲಲ್ಲಿ ತಲೆ ಕೆಳಗಾಗಿ ತೂಗಾಡುತಿದ್ದ.

ಶಂಕರ ತನ್ನ ಸೊಂಡಿಲಲ್ಲಿ ನೇಲುತ್ತಿರುವ ಆನೆಕಾರನನ್ನು ಗರಗರನೆ ತಿರುಗಿಸಿದ. ಇನ್ನೊಂದು ಕ್ಷಣದಲ್ಲಿ ಆನೆ ನಾಯಕನನ್ನು ದೊಪ್ಪನೆ ನೆಲದ ಮೇಲೆ ಎಸೆದು ಎರಡನೆಯ ಸಲ ಘೀಳಿಟ್ಟಿತು.

ಅರೆ ಗಳಿಗೆಯ ಹಿಂದೆ ಆ ನಲ್ಲನಲ್ಲೆಯರಿಗೆ ಆಸರೆಗೊಟ್ಟಿದ್ದ ಮಾವಿನ ಮರದ ಕಾಂಡಕ್ಕೆ ನಾಯಕನ ಬೆನ್ನು ಅಪ್ಪಳಿಸಿತು. ಅವನ ಬೆನ್ನೆಲುಬು ಉಡಿದು ಹೋಯಿತು.

ಇಷ್ಟರಿಂದಲೂ ಶಂಕರನ ಮುನಿಸು ಆಗಿರಲಿಲ್ಲ. ಆನೆ ನಾಯಕ ಬಿದ್ದಲ್ಲಿಗೆ ಹೋಗಿ ತನ್ನ ಪಾದವನ್ನೆತ್ತಿ ನಾಯಕನ ಮಸ್ತಕದ ಮೇಲಿರಿಸಿ ಮೂರನೆಯ ಸಲ ಘೀಳಿಟ್ಟಿತು. ಆನೆಯ ತುಳಿತದಿಂದ ನಾಯಕನ ತಲೆ ಹಿಟ್ಟಾಗಿ ಹೋಯಿತು. ಒಂದು ಕ್ಷಣದ ಹಿಂದೆ ಆತನ ಪ್ರಣಯ ಶಯ್ಯೆ

ಯಾಗಿದ್ದ ತಳಿರ ಹಾಸು ಈಗ ಆತನ ನೆತ್ತರಿನಿಂದ ನಾಂದಿ ಹೋಯಿತು. ಆತನ ಮೆದುಳು ಚಿಗುರುಗಳ ಮೇಲೆ ಚೆಲ್ಲಾಪಿಲ್ಲಿಯಾಗಿ ಹರಡಿಕೊಂಡಿತು.

ಆನೆ ಅಲ್ಲಿ ನಿಲ್ಲಲಿಲ್ಲ. ಅದು ಹುಚ್ಚೆದ್ದು ಕುಣಿಯುತ್ತಾ, ಪೊದೆಗಳನ್ನು ಮುರಿದುರುಳಿಸುತ್ತಾ ಹೊಳೆಯ ದಂಡೆ ಕಡೆಗೆ ಸಾಗಿತು. ಅದು ಬಿದಿರ ಮೆಳೆಗಳನ್ನು ಮುರಿದು ಹೊಳೆಯ ದಂಡೆಗೆ ಇಳಿಯಿತು. ಅದು ನದಿಯನ್ನು ಹಾಯ್ದು ಇನ್ನೊಂದು ದಡವನ್ನು ಸೇರಿತು.

ಹೊಳೆಯ ತೀರದಲ್ಲಿ ಮರಳ ಹಾಸಿನ ಮೇಲೆ ಕುಳಿತಿದ್ದ ಲಕ್ಷ್ಮಿ ಗಜಬೃಂಹಿತಗಳನ್ನು ಕೇಳಿದ್ದಳು. ಈಗ ಆನೆ ರಭಸದಿಂದ ಇಳಿದು ಬಂದು ಹೊಳೆಯನ್ನು ಹಾಯ್ದು ಹೋಗುವುದನ್ನು ಕಂಡಳು. ಬೆನ್ನ ಹಿಂದೆ ನಾಯಕನೂ ಇಳಿದು ಬಂದಾನು ಎಂದು ನಿರೀಕ್ಷಿಸಿದಳು. ಆದರೆ ಆಕೆಯ ಎಣಿಕೆಯಂತೆ ನಾಯಕ ಮಾತ್ರ ಬರಲಿಲ್ಲ. ಅವಳು ಎರಡು ಮೂರು ಸಲ, "ನಾಯಕ, ನಾಯಕ" ಎಂದು ದನಿಸರೆತ್ತಿ ಕೂಗಿದಳು. ಆದರೆ ಆತನಿಂದ ಮಾರುಲಿ ಗಾಳಿಯಲ್ಲಿ ತೇಲಿ ಬರಲಿಲ್ಲ.

ಲಕ್ಷ್ಮಿ ಕುಳಿತಲ್ಲಿಂದ ಎದ್ದು ದಡವನ್ನೇರಿ ಮಾವಿನ ಮರದೆಡೆಗೆ ಬಂದಳು. ಅಲ್ಲಿ ಮಾವಿನ ಮರದಡಿಯಲ್ಲಿ ತಳಿರ ಹಾಸಿನ ಮೇಲೆ ನಾಯಕ ಮಲಗಿದ್ದ. ಅವನ ಒಡಲ ಗೂಡಿಂದ ಪ್ರಾಣಪಕ್ಷಿ ಹಾರಿ ಹೋಗಿತ್ತು. ಅವನ ಮೊಗವನ್ನು ಗುರುತಿಸಲು ಆಗುತ್ತಿರಲಿಲ್ಲ. ಆತನ ಮೈಯ ನೆತ್ತರಿನಿಂದ ಚಿಗುರಗಳೆಲ್ಲ ಅರುಣವರ್ಣವನ್ನು ತಾಳಿದ್ದುವು.

ಲಕ್ಷ್ಮಿಗೆ ಈಗ ಎಲ್ಲವೂ ಅರ್ಥವಾಯಿತು. ಅರೆ ಗಳಿಗೆಯ ಹಿಂದೆ ಅವಳಿಗೆ ಭೋಗವನ್ನುಣಿಸಿದ ಚಿಗುರು ಹಾಸೇ ಈಗ ನಾಯಕನಿಗೆ ಮೃತ್ಯುಶಯ್ಯೆಯಾಗಿತ್ತು.

ಲಕ್ಷ್ಮಿ, "ನಾಯಕ, ನನ್ನ ಜೀವವನ್ನು ಉಳಿಸಲೆಂದು ನೀನು ಆನೆಯ ತುಳಿತಕ್ಕೆ ಮೈಯನ್ನು ಒಪ್ಪಿಸಿದೆಯಾ?" ಎಂದು ಶೋಕೋದ್ಗಾರವನ್ನೆತ್ತಿದಳು.

ಅವಳು ತೋಳನ್ನು ಚಾಚಿ ಕುರುಬ ತರುಣನ ಮೈಯನ್ನು ಎತ್ತಿಕೊಂಡಳು. ಆತನನ್ನು ತನ್ನ ಎದೆಗಪ್ಪಿಕೊಂಡಳು.

ಇನ್ನೊಂದು ಕ್ಷಣದಲ್ಲಿ ಲಕ್ಷ್ಮಿಗೆ ಬವಳಿ ಬಂದು ಕಣ್ಣುಗಳಿಗೆ ಕತ್ತಲೆ ಕವಿದಿತು.

---

# ಶಬ್ದ ಕೋಶ

ಅವಿಲು — ಬಗೆಬಗೆಯ ತರಕಾರಿಗಳನ್ನು ಹಾಕಿ ಮಾಡಿದ ಒಂದು ಬಗೆಯ ಮೇಲೋಗರ.

ಅಜ್ಜ — ಕುರುಬರು ಆರಾಧಿಸುವ ಒಂದು ದೈವ.

ಅರೆ — ಧಾನ್ಯಗಳನ್ನು ಸಂಗ್ರಹಿಸಿಡುವ ಕಣಜ. ದೊಡ್ಡ ಪೆಟ್ಟಿಗೆಯ ರೂಪದಲ್ಲಿರುವುದು. ಅದರ ಮೇಲೆ ಒಬ್ಬ ಮನುಷ್ಯ ಮಲಗಿಕೊಳ್ಳಬಹುದು.

ಅಡಿಯರು— ವೈನಾಡಿನ ಗುಡ್ಡಗಾಡಿನ ಜನರಲ್ಲೊಂದು ವರ್ಗಕ್ಕೆ ಸೇರಿದವರು.

ಅಂಬಲ — ಗುಡಿ; ದೇವಾಲಯ.

ಈರಾಯಿ— ಮರ ಸಿಗಿಯುವವನು.

ಐತ — ಮೈಲಿಗೆ.

ಕಾರಣವರು—ಕುಟುಂಬದ ಹಿರಿಯ.

ಕಡವು — ನದಿಯನ್ನು ಹಾಯುವ ಸ್ಥಳ; ನದಿಯಲ್ಲಿ ಸ್ನಾನ ಮಾಡುವ ಸ್ಥಳ.

ಕಡಿಕೆ — ಧಾನ್ಯಗಳನ್ನು ಸಂಗ್ರಹಿಸಿಡಲೆಂದು ಬಿದಿರಿನಿಂದ ಹೆಣೆದು ಮಾಡಿದ ಸಾಧನ ವಿಶೇಷ.

ಕಾಕ — ಮಾಪಿಳ್ಳೆ.

ಕಾರ್ಯಕಾರ—ಕೆಲಸ ಮಾಡಿಸುವವನು; ನೌಕರ.

ಕಟ್ಟಿಲು — ಮಂಚ

ಕಂಚಲು— ಕರುಗಳನ್ನು ಕೂಡಿಸುವುದಕ್ಕೆಂದು ಹಟ್ಟಿಯಲ್ಲಿ ಏರ್ಪಡಿಸಿದ ಸ್ಥಳ.

ಕೂಟು — ಊಟದಲ್ಲಿ ನಂಚಿಕೊಳ್ಳಲೆಂದು ತಯಾರಿಸಿದ ಒಂದು ಬಗೆಯ ಮೇಲೋಗರ.

ಚೆಟ್ಟಿಯ — ಮಾಪಿಳ್ಳೆ ವ್ಯಾಪಾರಿ.

ಚೌಂಡಿ — ಚಾಮುಂಡಿ.

ಜಮ್ಮಿ — ಜಮೀನ್ದಾರ.
ತರವಾಡು— ಕುಟುಂಬ.
ತೊಡಿ — ಮನೆ.
ತಿರುನೆಲ್ಲಿ ಪೆರುಮಾಳು— ತಿರುನೆಲ್ಲಿ ಗ್ರಾಮದ ವಿಷ್ಣು ದೇವಾಲಯದಲ್ಲಿ ಪೂಜಿಸಲ್ಪಡುವ ವಿಷ್ಣುವಿನ ವಿಗ್ರಹ.
ತಾಕೀತು— ಎಚ್ಚರಿಕೆ.
ತಂಬ್ರಾಕಳು —ಬ್ರಾಹ್ಮಣರು.
ನಾಯಮ್ಮಾರರು— “ನಾಯರ” ಎಂಬ ಜಾತಿಗೆ ಸೇರಿದ ಜನರು.
ನಯಿಸು — ದುಡಿ.
ಪಣಿಯರು— ವೈನಾಡಿನ ಗುಡ್ಡಗಾಡಿನ ಜನರಲ್ಲಿ ಒಂದು ವರ್ಗಕ್ಕೆ ಸೇರಿದವರು.
ಪೊಡೆಮುರಿ— ವಿವಾಹ; ಪ್ರಸ್ತ.
ಪೊದಿ — ದಾನ್ಯಗಳ ಒಂದು ಅಳತೆ. ಒಂದು ಖಂಡುಗ.
ಪುದುಪಳ್ಳಿ—ವೈನಾಡಿನ ಒಂದು ಗ್ರಾಮ.
ಪತ್ತಾಯ— ಕಣಜ.
ಪುರೆ — ಗುಡಿಸಿಲು ಮನೆ.
ಪಾಪ — ಧನಿ, ಯಜಮಾನ.
ಪಾಪಾತಿ — ಯಜಮಾನಿ.
ಪಿನ್ನಾಡು— ಮೈಸೂರು ಜಿಲ್ಲೆಯ ಹೆಗ್ಗಡದೇವನ ಕೋಟೆ ಗುಂಡು ಪೇಟೆ ತಾಲೂಕುಗಳು.
ಪಾಕು — ಎಲೆ ಅಡಿಕೆಗಳ ಸಂಚಿ.
ಬೆಳ್ಳೂರು ಕಾವು— ಮಾನಂದವಾಡಿ ಹತ್ತಿರ ಇರುವ ಪ್ರಸಿದ್ಧವಾದ ಭಾಗವತೀ ಕ್ಷೇತ್ರ.
ಬೆಳ್ಳೂರು ಕಾವು ಅಮ್ಮ— ,, ,, ಪ್ರಸಿದ್ಧವಾದ ಭಾಗವತಿ.
ಬಲ್ಲಿ — ಗದ್ದೆಗಳಲ್ಲಿ ದುಡಿಯುವ ಪಣಿಯರಿಗೆ ಕೊಡುವ ಧಾನ್ಯ ರೂಪವೇತನ.

ಬ್ರಾಹ್ಮಣ ಸಂಬಂಧ—ನಾಯರ ಕುಲದ ಹೆಣ್ಣನ್ನು ಬ್ರಾಹ್ಮಣನಿಗೆ ಲಗ್ನ ಮಾಡಿಕೊಡುವ ಸಂಪ್ರದಾಯ.

ಮೊದಲಾಳಿ— ಸಾಹುಕಾರ.

ಮುಳ್ಳುವ ಕುರುಬರು— ವೈನಾಡಿನ ಮೂಲ ನಿವಾಸಿಗಳಲ್ಲಿ ಒಂದು ವರ್ಗಕ್ಕೆ ಸೇರಿದ ಜನರು.

ಮಠ — ಬ್ರಾಹ್ಮಣರ ಮನೆ.

ಯಂಬ್ರಾಂದ್ರಿ—ದಕ್ಷಿಣ ಕನ್ನಡ ಜಿಲ್ಲೆಯಿಂದ ಬಂದು ನೆಲಸಿದ ಬ್ರಾಹ್ಮಣ.

ಶಾಸ್ತಾಸೇವೆ— ಅಯ್ಯಪ್ಪನ ಆರಾಧನೆ.

ಶಾಂತಿ — ಅರ್ಚಕವೃತ್ತಿ.

ಸಂಬಂಧ— ಲಗ್ನ ವಿವಾಹ.

ಸದ್ಯ — ಔತಣ.



## ನಮ್ಮ ಪ್ರಕಟನೆಗಳು

| | | | | |
|---|---|---|---|---|
| 1. | ಗಗನಚಂದ್ರ | — | ನಾಡಿಗೇರ | 0.50 |
| 2. | ಮುಂದೇನು? | — | ದೇವುಡು | 0.50 |
| 3. | ದೆವ್ವದ ಕಥೆಗಳು | — | ಅಡಿಗ | 0.50 |
| 4. | ಕುಮಾರಿ ಸುನೇತ್ರಾ | — | ತಲಚೇರಕರ | 0.75 |
| 5. | ಅತಿದೂರದ ಜಗತ್ತಿನಲ್ಲಿ | — | ಹೆಗಡೆ ಬಂಧುಗಳು | 0.75 |
| 6. | ಮಹಾತ್ಮಾ | — | ಹೆಗಡೆ, ಕೋಡಕಣಿ | 1.25 |
| 7. | ವಾರದ ಹುಡುಗ | — | ನಿರಂಜನ | 1.25 |
| 8. | ಯಾತ್ರಿಕ | — | ಪ್ರಬೋಧಕುಮಾರ ಸನ್ಯಾಲ | 1.50 |
| 9. | ವಾತ್ಸಲ್ಯ | — | ಶರತ್ | 1.00 |
| 10. | ಕಾಂತಾಪುರದ ವಜ್ರ | — | ಎಸ್. ಎನ್. ಕೊಡಕಣಿ | 1.00 |
| 11. | ಶಾಂತಿಸದನ | — | ನಾಗೇಶ ಶಾನಭಾಗ | 1.50 |
| 12. | ಚಿಗುರು ಹಾಸಿಗೆ | — | ಭಾರತೀಸುತ | 2.50 |

## ಉಳಿದವು

| | | | | |
|---|---|---|---|---|
| 1. | ಮಂಜುಗೀತ | — | ಬಿ. ಎಚ್. ಶ್ರೀಧರ | 1.25 |
| 2. | ವ್ಯಕ್ತಿತ್ವ ವಿಕಾಸ | — | ಜಿ. ಎನ್. ಪಂಡಿತ | 1.25 |
| 3. | ರಮಣಮಹರ್ಷಿ | — | ಬಿ. ಎಚ್. ಶ್ರೀಧರ | 0.31 |
| 4. | ವಿನೋಬಾ | — | ಜಿ. ಪಿ. ನ್ಯಾಯ್ಕ | 0.31 |
| 5. | ಬುದ್ಧದೇವ | — | ಶಿವಂ | 0.37 |
| 6. | ಲೋಕಪ್ರಿಯ ಕಥೆಗಳು | — | ಜಿ. ಆರ್. ಹೆಗಡೆ | 0.31 |
| 7. | ಬುದ್ಧಿವಂತ ಒಕ್ಕಲಿಗ | — | ಜಿ. ಆರ್ ಹೆಗಡೆ | 0.31 |
| 8. | ಜೇನುಸಾಕಣೆ | — | ಭಟ್ಟ | 0.31 |

**ಸುಲಭ ಸಾಹಿತ್ಯ ಪ್ರಕಾಶನ, ಕುಮಟ**